KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೪೪ ‖ ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೩, ೨೦೦೯ (ಭಾದ್ರಪದ ೧೨, ಶಕ ವರ್ಷ ೧೯೩೧) ‖ ಸಂಚಿಕೆ ೩೬

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀರಂಗಪಟ್ಟಣ ತಾಲ್ಲೂಕು ಬೆಳಗೋಳ ಹೋಬಳಿ, ಅಣಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 110 ಪೈಕಿ 3ರ ವಿಸ್ತೀರ್ಣ 18 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ:43:08–09 ದಿನಾಂಕ:18.12.2008.

2) ದಿ:11.03.2009 ರಂದು ಕಡತ ಸಂಖ್ಯೆ:ನಯೋ:ಉನಿ:ಭೂಉಬ:ಅಣಗಳ್ಳಿ:515:2008–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಶ್ರೀರಂಗಪಟ್ಟಣ ತಾಲ್ಲೂಕು ಬೆಳಗೋಳ ಹೋಬಳಿ, ಅಣಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 110 ಪೈಕಿ 3ರ ವಿಸ್ತೀರ್ಣ 18 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14 (ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 209 ಮೈಅಪ್ರಾ 2009, ಬೆಂಗಳೂರು, ದಿನಾಂಕ: 30ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಶ್ರೀರಂಗಪಟ್ಟಣ ತಾಲ್ಲೂಕು ಬೆಳಗೋಳ ಹೋಬಳಿ, ಅಣಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 110 ಪೈಕಿ 3ರ ವಿಸ್ತೀರ್ಣ 18 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪಾವತಿಸತಕ್ಕದ್ದು.

2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.
5. ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.
6 ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1531

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ಶ್ರೀರಂಗಪಟ್ಟಣ ತಾಲ್ಲೂಕು ಬೆಳಗೋಳ ಹೋಬಳಿ, ಅಣಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 120 ಪೈಕಿ 2–ಪಿ1ರ ವಿಸ್ತೀರ್ಣ 6.5 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 42:08–09 ದಿನಾಂಕ:18.12.2008.

2) ದಿ:11.04.2009 ರಂದು ಕಡತ ಸಂಖ್ಯೆ:ನಯೋ:ಉನಿ:ಭೂಉಬ:514:ಅಣಗಳ್ಳಿ:2008–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಶ್ರೀರಂಗಪಟ್ಟಣ ತಾಲ್ಲೂಕು ಬೆಳಗೋಳ ಹೋಬಳಿ, ಅಣಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 120 ಪೈಕಿ 2–ಪಿ1ರ ವಿಸ್ತೀರ್ಣ 6.5 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 217 ಮೈಅಪ್ರಾ 2009, ಬೆಂಗಳೂರು, ದಿನಾಂಕ: 30ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಶ್ರೀರಂಗಪಟ್ಟಣ ತಾಲ್ಲೂಕು ಬೆಳಗೋಳ ಹೋಬಳಿ, ಅಣಗಳ್ಳಿ ಗ್ರಾಮದ ಮೋಜಣಿ ಸಂಖ್ಯೆ 120 ಪೈಕಿ2–ಪಿ1ರ ವಿಸ್ತೀರ್ಣ 6.5 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.
5. ಹಾಲಿ 10ಮೀ. ಅಗಲದ ರಸ್ತೆಯನ್ನು ಮಹಾಯೋಜನೆಯಲ್ಲಿ ಅಗತ್ಯತೆಗನುಗುಣವಾಗಿ ವಿಸ್ತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1532

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಬೋಗಾಧಿ ಗ್ರಾಮದ ಮೋಜಣಿ ಸಂಖ್ಯೆ 82/2ಬಿ3,2ಬಿ2 ರಲ್ಲಿನ (0–10,0–14)24 ಗುಂಟೆ ಜಮೀನನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ತಿದ್ದುಪಡಿ ಕಾಯ್ದೆ 2004ರ ಪ್ರಕರಣ 69(2)ರನ್ವಯ ಸಾರ್ವಜನಿಕ/ಅರೆಸಾರ್ವಜನಿಕ ಪ್ರದೇಶದಿಂದ ವಾಣಿಜ್ಯ (ಅಂಗಡಿ/ಬ್ಯಾಂಕ್) ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ:ಮೈನಪ್ರಾ:ನಯೋ:ಸಭೆ: 47(17):08–09 ದಿನಾಂಕ:21.08.2008.

2) ದಿನಾಂಕ:31.03.2009ರಂದು ಕಡತ ಸಂಖ್ಯೆ:ನಯೋ:ಉನಿ:ಭೂಉಬ:ಬೋಗಾಧಿ 256:2008–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಬೋಗಾಧಿ ಗ್ರಾಮದ ಮೋಜಣಿ ಸಂಖ್ಯೆ 82/2ಬಿ3,2ಬಿ2 ರಲ್ಲಿನ (0–10,0–14)24 ಗುಂಟೆ ಜಮೀನನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ತಿದ್ದುಪಡಿ ಕಾಯ್ದೆ, 2004ರ ಪ್ರಕರಣ 69(2)ರನ್ವಯ ಸಾರ್ವಜನಿಕ/ಅರೆಸಾರ್ವಜನಿಕ ಪ್ರದೇಶದಿಂದ ವಾಣಿಜ್ಯ (ಅಂಗಡಿ/ಬ್ಯಾಂಕ್) ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 220 ಮೈಅಪ್ರಾ 2009, ಬೆಂಗಳೂರು, ದಿನಾಂಕ: 30ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಬೋಗಾದಿ ಗ್ರಾಮದ ಮೋಜಣಿ ಸಂಖ್ಯೆ 82/2ಬಿ3, 2ಬಿ2 ರಲ್ಲಿನ (0–10, 0–14)24 ಗುಂಟೆ ಜಮೀನನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ತಿದ್ದುಪಡಿ ಕಾಯ್ದೆ 2004ರ ಪ್ರಕರಣ 69(2)ರನ್ವಯ ಸಾರ್ವಜನಿಕ/ಅರೆಸಾರ್ವಜನಿಕ ಪ್ರದೇಶದಿಂದ ವಾಣಿಜ್ಯ (ಅಂಗಡಿ/ಬ್ಯಾಂಕ್) ಉದ್ದೇಶಕ್ಕೆ ಭೂ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ಧ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಾಣಿಜ್ಯ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.
4. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.
5. ವಾಹನ ನಿಲುಗಡೆಗೆ ಅಗತ್ಯ ಸೌಲಭ್ಯಗಳನ್ನು ಅರ್ಜಿದಾರರೇ ಸದರಿ ಜಮೀನಿನಲ್ಲಿ ಕಲ್ಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1533

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಆಡಳಿತಾತ್ಮಕ ವೆಚ್ಚಕ್ಕಾಗಿ ಮೊದಲನೆಯ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 30 ಅಡವಿ 2009 ದಿನಾಂಕ: 12–05–09.

2) ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರ ಸಂ:ಕರಾದೂ ಸಂಅಕೇಂ/74/ಜಿಇಎನ್/2009, ದಿನಾಂಕ: 29–05–2009

**ಪ್ರಸ್ತಾವನೆ:**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು (ಯೋಜನೆ)" ರಡಿಯಲ್ಲಿ ರೂ. 680–00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ರೂ. 680 ಲಕ್ಷಗಳ ಒದಗಣೆ ಮೊತ್ತದಲ್ಲಿ ಸದರಿ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 150.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ 29–05–2009ರ ಪತ್ರದಲ್ಲಿ ಸಿಬ್ಬಂದಿಗಳ ವೇತನ ವಿತರಣೆ, ಆಡಳಿತ ನಿರ್ವಹಣೆ, ಎಂ.ಟೆಕ್ ತರಗತಿಗಳ ವೆಚ್ಚ, ಯೋಜನಾ ವೆಚ್ಚ, ಲೇಖನ ಸಾಮಗ್ರಿ ಮತ್ತು ಇತರೆ ವಸ್ತುಗಳನ್ನು ಖರೀದಿಸಲು ರೂ. 100.00 ಲಕ್ಷಗಳ ಅನುದಾನವನ್ನು ಮೊದಲನೆಯ ಕಂತಿನ ಅನುದಾನವಾಗಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150–00 ಲಕ್ಷಗಳಲ್ಲಿ ಸದರಿ ಕೇಂದ್ರಕ್ಕೆ ರೂ. 37.50 ಲಕ್ಷಗಳನ್ನು ಮೊದಲನೆಯ ಕಂತಿನ ಅನುದಾನ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 41 ಎಡಿಎಂ 2009, ಬೆಂಗಳೂರು, ದಿನಾಂಕ: 6ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮೇಲೆ (1) ರಲ್ಲಿ ಓದಾದಲಾದ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಮೊದಲನೆಯ ಕಂತಿನ ಅನುದಾನವಾಗಿ ರೂ. 37.50 ಲಕ್ಷಗಳನ್ನು (ಮೂವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಕೇಂದ್ರ 059 ಇತರೆ ಖರ್ಚು (ಯೋಜನೆ)"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–08ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1564

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ:** ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಉದ್ಯಾನದ ಸ್ಥಳಾವಕಾಶಕ್ಕಾಗಿ ವಿಶೇಷ ರಿಯಾಯಿತಿ ಸೌಲಭ್ಯವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 49 ಅಡವಿ 2006, ದಿ: 16–5–06,
2. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 04 ಅಡವಿ 2007 ದಿ: 19–10–07
3. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 64 ಅಡವಿ 2008 ದಿ: 2–1–09
4. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಪತ್ರ ಸಂ. ಮಾತಂನಿ/ಲೆಕ್ಕ–1/ಐಟಿಪಾರ್ಕ್, ಹುಬ್ಬಳ್ಳಿ 06/59/07–08 ದಿನಾಂಕ: 4–5–09.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 16–5–06ರ ಸರ್ಕಾರಿ ಆದೇಶದಲ್ಲಿ ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಉದ್ಯಾನಕ್ಕೆ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರ ಸೇವೆಗಳು ಹಾಗೂ ಹೊರಗುತ್ತಿಗೆಗಳ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಗಳನ್ನು ಆಕರ್ಷಿಸುವ ಸಲುವಾಗಿ ಹುಬ್ಬಳ್ಳಿಯ ಮಾಹಿತಿ ತಂತ್ರಜ್ಞಾನ ಉದ್ಯಾನದಲ್ಲಿ ಹೂಡಿಕೆದಾರರು ಸ್ಥಳಾವಕಾಶ ಮಾಡಲು ಈ ಕೆಳಕಂಡ ವಿಶೇಷ ರಿಯಾಯಿತಿ ನೀಡಲಾಗಿತ್ತು.

ಅ] ಪ್ರತಿ ಚ.ಅಡಿಗೆ ರೂ. 10/=ಗಳಂತೆ ವೈಯಕ್ತಿಕವಾಗಿ ಕನಿಷ್ಠ 10,000 ಚ.ಅಡಿಗಳಂತೆ ಮೊದಲನೆ 50,000 ಚ. ಅಡಿಗಳಿಗೆ

ಆ] ಸದರಿ 50,000 ಚ.ಅಡಿ ನಂತರ 15,000 ಚ. ಅಡಿಗಳಿಗೆ ಪ್ರತಿ ಚ. ಅಡಿಗೆ ರೂ.15/– ದರದಲ್ಲಿ [ಮೊದಲ 50,000 ಚ. ಅಡಿಗಳು ಮುಗಿದ ನಂತರ]

ಇ] ಉಳಿದ ಜಾಗಕ್ಕೆ ರೂ. 30/– ಗಳಂತೆ [ಅಂದರೆ 65,000 ಚ. ಅಡಿ ಅಂದರೆ, 50,000 ಚ. ಅಡಿ ಮತ್ತು 15,000 ಚ. ಅಡಿ ಮುಗಿದ ನಂತರ] ಈ ಕೆಳಕಾಣಿಸಿದ ಷರತ್ತಿಗೊಳಪಟ್ಟು ವಿಶೇಷ ರಿಯಾಯಿತಿಗಳನ್ನು ನೀಡಲಾಗಿತ್ತು.

1] ಉಲ್ಲೇಖಿಸಿದ ಸರ್ಕಾರಿ ಆದೇಶ ಹೊರಡಿಸಿದ ದಿನಾಂಕದಿಂದ 6 ತಿಂಗಳ ಕಾಲಾವಧಿಗೆ ಸದರಿ ರಿಯಾಯಿತಿ ಅನ್ವಯಿಸುವಂತೆ

2] ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್ಸ್ ಆಫ್ ಇಂಡಿಯಾ ಈ ಸಂಸ್ಥೆಯಲ್ಲಿ ನೋಂದಾಯಿಸಿದ ಮಾಹಿತಿ ತಂತ್ರಜ್ಞಾನ ಕಂಪನಿಗಳು/ಫರ್ಮ್‌ಗಳಿಗೆ ಮಾತ್ರ ಸ್ಥಳಾವಕಾಶ ನೀಡಲು

3] ವಿಶೇಷ ರಿಯಾಯಿತಿಯಡಿಯಲ್ಲಿನ ಬಾಡಿಗೆ ಕರಾರು 3 ವರ್ಷಗಳಿಗೆ ಮಾತ್ರ ಹಾಗೂ ತದನಂತರ ಬಾಡಿಗೆ ಪರಿಷ್ಕರಿಸಲು

ಮೇಲೆ [2] ರಲ್ಲಿ ಓದಲಾದ ದಿನಾಂಕ 19–10–2007ರ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಕಂಪನಿಗಳನ್ನು ಉತ್ತೇಜಿಸುವ ಸಲುವಾಗಿ ಈ ಕೆಳಕಂಡ ಅಂಶಗಳಿಗೆ ಅನುಮೋದನೆ ನೀಡಲಾಗಿತ್ತು.

ಅ) ಪ್ರಸ್ತುತ ಇರುವ ಪತ್ರಿ ಚದರ ಅಡಿಗೆ ರೂ.10/–ಗಳ ಬಾಡಿಗೆಯನ್ನು ರೂ.9/– ಗಳಿಗೆ ಇಳಿಸಲು;

ಅ) ಹುಬ್ಬಳ್ಳಿ ಮಾಹಿತಿ ತಂತ್ರಜ್ಞಾನ ಉದ್ಯಾನದ ಸ್ಥಳಾವಕಾಶಕ್ಕಾಗಿ ಬಾಡಿಗೆ ದರದಲ್ಲಿ ವಿಶೇಷ ರಿಯಾಯಿತಿಯಡಿ ಆಯ್ಕೆ ಮಾಡಿಕೊಳ್ಳುವವರಿಗೆ ಕನಿಷ್ಠ ಸ್ಥಳಾವಕಾಶವನ್ನು 10,000 ಚದರ ಅಡಿಗಳಿಂದ 2500 ಚ. ಅಡಿಗಳಿಗೆ ಇಳಿಸಲು; ಹಾಗೂ

ಇ) 2500 ಚ. ಅಡಿಗಳಿಗಿಂತಲೂ ಕಡಿಮೆ ಸ್ಥಳಾವಕಾಶವನ್ನು ಆಯ್ಕೆ ಮಾಡಿಕೊಳ್ಳುವವರಿಗೆ ಪ್ರಸ್ತುತ ಜಾರಿಯಲ್ಲಿರುವ ಬಾಡಿಗೆ ದರವನ್ನೇ ಮುಂದುವರೆಸಲು

ಮೇಲೆ (3) ರಲ್ಲಿ ಓದಲಾದ ದಿನಾಂಕ 2–1–09ರ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಕಂಪನಿಗಳನ್ನು ಉತ್ತೇಜಿಸುವ ಸಲುವಾಗಿ ಮೇಲೆ (1) ಮತ್ತು (2) ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರಿಯಾಯಿತಿ ದರದಲ್ಲಿ ನಿಗದಿಪಡಿಸಿರುವ ಬಾಡಿಗೆ ದರ ರೂ.9/– (ಪ್ರತಿ ಚದರ ಅಡಿ)ನ್ನು ದಿನಾಂಕ 18–10–2008 ರಿಂದ 31–3–2009 ರವರೆಗೆ ವಿಸ್ತರಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರ ದಿನಾಂಕ 4–5–2009ರಲ್ಲಿ ಸದರಿ ರಿಯಾಯಿತಿಯ ಅವಧಿಯನ್ನು ದಿನಾಂಕ 31–3–2009ರ ರಿಂದ 31–3–2010ರವರೆಗೆ ವಿಸ್ತರಿಸಲು ಪ್ರಸ್ತಾವಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 64 ಅಡವಿ 2008, ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಬ್ಬಳ್ಳಿಯ ಮಾಹಿತಿ ತಂತ್ರಜ್ಞಾನ ಪಾರ್ಕ್‌ನಲ್ಲಿನ ಜಾಗವನ್ನು ಚದರ ಅಡಿ ಒಂದಕ್ಕೆ ರೂ.9/– ರಂತೆ ಗುತ್ತಿಗೆ ನೀಡುವ ರಿಯಾಯಿತಿ ಅವಧಿಯನ್ನು ದಿನಾಂಕ 1–4–2009 ರಿಂದ 31–3–2010ರವರೆಗೆ ವಿಸ್ತರಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 168 ವೆಚ್ಚ–2/2009, ದಿನಾಂಕ:9.6.2009ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1565 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ವಿಶೇಷ ಕಾರ್ಯದರ್ಶಿಯವರುರವರಿಗೆ New Car Mobile ಇವರಿಂದ ಖಾಸಗಿ ವಾಹನ ಪಡೆದು ಅದನ್ನು ಕಛೇರಿ ಕೆಲಸಕ್ಕಾಗಿ ಉಪಯೋಗಿಸಿದ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಟಿಪ್ಪಣಿ ಸಂ. 1275 ದಿನಾಂಕ: 25–2–09

2) ವ್ಯವಸ್ಥಾಪಕ ನಿರ್ದೇಶಕರು, New Car Mobile ಇವರ ಇನ್‌ವಾಯ್ಸ್ ನಂ. 2005 ದಿನಾಂಕ: 21.2.09

3) ಸಿಆಸುಇ ಇಲಾಖೆ (ರಾಜ್ಯ ಶಿಷ್ಟಾಚಾರ) ಶಾಖೆಯ ಟಿಪ್ಪಣಿ ಸಂ. ಸಿಆಸುಇ 57 ಶಿವಾನಿ 2009 ದಿನಾಂಕ: 30–3–09
4) ಆದೇಶದ ಸಂ.ಸಿಆಸುಇ 139 ಶಿವಾನಿ 2004 ದಿನಾಂಕ 12–9–06

**ಪ್ರಸ್ತಾವನೆ:**

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಅಧಿಸೂಚನೆ ಸಂ.ಸಿಆಸುಇ 493 ಸಅಸೇ 2008 ದಿನಾಂಕ 10–6–08ರ ಆದೇಶದಲ್ಲಿ ಹೊಸದಾಗಿ ಸೃಜಿಸಿದ್ದು ಶ್ರೀ ಗಂಗಾರಾಮ್ ಬಡೇರಿಯಾರವರನ್ನು ಈ ಹುದ್ದೆಗೆ ದಿನಾಂಕ 4.11.08ರ ಅಧಿಸೂಚನೆ ಸಂ.DPAR 499 SAS 08 ರಲ್ಲಿ ನೇಮಕಾತಿ ಮಾಡಿದೆ. ಆಗ ಕೂಡಲೇ ಇವರಿಗೆ ಸರ್ಕಾರಿ ವಾಹನವನ್ನು ಒದಗಿಸದೇ ಇದ್ದುದರಿಂದ ಸರ್ಕಾರಿ ವಾಹನವನ್ನು ಒದಗಿಸುವವರೆಗೆ ಮೆ. ನ್ಯೂ ಕಾರ್ ಮೊಬೈಲ್ ಇವರಿಂದ ಟೊಯೋಟ ಇನೋವಾ ವಾಹನವನ್ನು ಬಾಡಿಗೆ ಆಧಾರದ ಮೇರೆಗೆ ಪಡೆದು ಕಛೇರಿ ಕೆಲಸಕ್ಕಾಗಿ ದಿನಾಂಕ 7.11.08 ರಿಂದ 20–2–09ರ ವರೆಗಿನ ಅವಧಿಯವರೆಗೂ (ಒಟ್ಟು 72 ದಿನಗಳು) ಉಪಯೋಗಿಸಿರುತ್ತಾರೆ.

2. ಮೇಲೆ ಓದಲಾದ (2) ರ ದಿನಾಂಕ 21.2.09ರ ಇನ್‌ವಾಯ್ಸ್‌ನಲ್ಲಿ ನ್ಯೂ ಕಾರ್ ಮೊಬೈಲ್‌ರವರು ಮೇಲಿನ ಬಾಬ್ತು ಕಾರು ಬಾಡಿಗೆ ಮೊತ್ತ ರೂ. 60,457/– ವನ್ನು ಪಾವತಿಸಲು ಕೋರಿರುತ್ತಾರೆ.

3. ಮೇಲೆ ಓದಲಾದ (4)ರ ಸರ್ಕಾರಿ ಆದೇಶದಲ್ಲಿ ಸೂಚಿಸಿರುವಂತೆ ದ ನ್ಯೂ ಕಾರ್ ಮೊಬೈಲ್ ಸಂಸ್ಥೆಯಿಂದ ಬಾಡಿಗೆಗೆ ಪಡೆದ ವಾಹನ ಸಂ. ಕೆಎ 03 ಎಮ್‌ಜೆ 5373ರ ವಾಹನದ ಬಾಡಿಗೆ ಮೊತ್ತ ರೂ. 60,457/–ಗಳನ್ನು ಪಾವತಿಸಲು ಉದ್ದೇಶಿಸಲಾಗಿದೆ.

4. ಅಂತೆಯೇ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 61 ಮೂಇವಿ 2008, ದಿನಾಂಕ: 5ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ವಿಶೇಷ ಕಾರ್ಯದರ್ಶಿಯವರು ಕಛೇರಿಯ ಉಪಯೋಗಕ್ಕಾಗಿ ನ್ಯೂ ಕಾರ್ ಮೊಬೈಲ್ ಸಂಸ್ಥೆಯಿಂದ ದಿನಾಂಕ 7.11.08 ರಿಂದ 20.2.09ರ ಅವಧಿಗೆ (ಒಟ್ಟು 72 ದಿನಗಳು) ಪಡೆದ ಕಾರಿನ ಬಾಡಿಗೆ ಮೊತ್ತ ರೂ. 60,457/– ಗಳನ್ನು ಆ ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2052–ಸಚಿವಾಲಯ ಸಾಮಾನ್ಯ ಸೇವೆಗಳು–090 ಸಚಿವಾಲಯ–01 ಕಸಸ 195 ಇದರಡಿ ಒದಗಿಸಿರುವ ಹಣದಿಂದ ಬಿಡುಗಡೆ ಮಾಡಲಾಗಿದೆ.

3. ಈ ಆದೇಶವನ್ನು ದಿನಾಂಕ 16.5.08ರ ಆದೇಶ ಸಂ. FD 1 TFP 2008 ರಡಿ ಇಲಾಖೆಯ ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1566 **ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

**Sub:** Challenge valuation in Rajiv Gandhi University of Health Sciences-Constitution of Committee.

**Read:** Representation dt: 22-05-2009

**Preamble:**

The students of the Rajiv Gandhi University of Health Sciences in their representation read at above submitted to the Government have made allegations of erratic valuation in the examinations held in January 2009 by the Rajiv Gandhi University of Health Sciences. It is alleged that the results of the challange evaluation is highly dissatisfactory. In this regard the students have pointed out several instances of such erratic valuation. It is further pointed out that in certain cases the marks awarded is higher than the maximum marks.

On careful examination of the representation submitted by the students, there is prima-facie material to the show that there are deficiencies and discrepancies in the challenge valuation. It is therefore necessary to cause an inquiry into the mode and manner of carrying out challenge evaluation of answer scripts of various examinations conducted by Rajiv Gandhi University of Health Sciences.

After careful consideration of the records in detail Government have decided to constitute a committee to examine the mode and manner of conduct of challenge valuation of answer scripts at Rajiv Gandhi University of Health Sciences and hence issued this orders.

**Government Order No.HFW 103 MPS 2009, Bangalore, Dated: 6th June 2009**

In exercise of the powers conferred under Section 8 of Rajiv Gandhi University of Health Sciences Act, 1994 the Government of Karnataka hereby constitute the committee with the following members to inquiry into the mode and manner of carrying out challenge valuation of the answer scripts of various examinations conducted by the Rajiv Gandhi University of Health Sciences and to give findings as per the terms of reference.

| | | |
|---|---|---|
| 1. | Dr. A.R.Aruna,<br>Director of Medical Education Department | Chairman |
| 2. | Dr. Chikkananjappa,<br>Syndicate Member of RGUHS | Member |
| 3. | Sri Anjan Kumar,<br>Chief Administrative Officer,<br>Health and Family Welfare Services | Member |

**The terms of reference to the committee is as follows :**

(1) Whether there are any deficiencies or discrepancies in the challenge evaluation carried out by the University.

(2) If there are deficiencies or discrepancies, the committee should suggest remedies so as to give justice to the affected students

(3) The committee shall endeavor to submit their report at the earliest possible and not later than seven days i.e. on or before 12th June, 2009.

By order and in the name of Governor of Karnataka,

**V. SREERAMA REDDY**

P.R. 1567

Under Secretary to Government,

Health and Family Welfare Department (Medical Education)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ ಆಕುಕ 395 ಎಂಎಂಸಿ 2007, ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಸರ್ಕಾರದ ಆದೇಶ ಸಂಖ್ಯೆ ಆಕುಕ 395 ಎಂಎಂಸಿ 07, ದಿನಾಂಕ 28–02–2009ರ ಅನುಬಂಧ–1ರಲ್ಲಿ ಕ್ರಮ ಸಂಖ್ಯೆ 27ರ ನಂತರ ಈ ಕೆಳಗಿನ ಹೆಸರನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

| Sl. No. | Name | Designation | Qualification | D.O.B. | Date of Entry into Service |
|---|---|---|---|---|---|
| 28 | Dr.H.R.Jagadeesh | Specialist | MD (GM) | 09.02.1971 | 14.08.1997 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಅನೀಸ್ ಸಿರಾಜ್**

ಪಿ.ಆರ್. 1568

ಸರ್ಕಾರದ ಅಪರ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ವಿಷಯ:** ಡಾ: ಕೆ. ಭಾಸ್ಕರ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಜಿಲ್ಲಾ ಆಸ್ಪತ್ರೆ, ಮಂಡ್ಯ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಬಿ (2)/282/2006–07 ದಿನಾಂಕ: 06–07–2007, 17–07–2008 ಮತ್ತು 26–12–2008.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರಗಳಲ್ಲಿ, ಡಾ: ಕೆ. ಭಾಸ್ಕರ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಜಿಲ್ಲಾ ಆಸ್ಪತ್ರೆ, ಮಂಡ್ಯ ಇವರು ದಿನಾಂಕ: 04/03/2004 ರಂದು ಸೇವೆಗೆ ಸೇರಿದ್ದು, ಖಾಯಂ ಪೂರ್ವ ಸೇವಾವಧಿಯನ್ನು ದಿನಾಂಕ 03–03–2006 ರಂದು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲಾಗಿದೆ. ಸದರಿ ವೈದ್ಯರು ವೈದ್ಯಕೀಯ ವಿಜ್ಞಾನ ಶಿಕ್ಷಣ ಸಂಸ್ಥೆ, ಮಂಡ್ಯ, ಇಲ್ಲಿ ಎಲುಬು ಮತ್ತು ಕೀಲು ವಿಭಾಗಕ್ಕೆ ಸಹಾಯಕ ಪ್ರಾಧ್ಯಾಪಕರಾಗಿ ನೇಮಕಗೊಂಡಿರುವುದರಿಂದ, ದಿನಾಂಕ: 30–11–2006 ರಿಂದ ಜಾರಿಗೆ ಬರುವಂತೆ ತಮ್ಮ ಹುದ್ದೆಗೆ ರಾಜೀನಾಮೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವಾದ್ದರಿಂದ ಸದರಿ ದಿನಾಂಕದಿಂದ ಅನ್ವಯವಾಗುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ. ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಆಕುಕ 148 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 9ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ: ಕೆ. ಭಾಸ್ಕರ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಜಿಲ್ಲಾ ಆಸ್ಪತ್ರೆ, ಮಂಡ್ಯ ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 30–11–2006ರ ಅಪರಾಹ್ನದಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿ.ಆರ್. 1569

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ವಿಷಯ:** ಕರ್ನಾಟಕ ರಾಜ್ಯ ಡ್ರಗ್ ಲಾಜಿಸ್ಟಿಕ್ ಮತ್ತು ವೇರ್ ಹೌಸಿಂಗ್ ಸೊಸೈಟಿ ಇಲ್ಲಿನ ಉಪಕರಣ ಖರೀದಿ ಮತ್ತು ದುರಸ್ತಿ ನಿರ್ವಹಣೆ ಕಾರ್ಯವನ್ನು ನಿರ್ವಹಿಸಲು ಸಲಹೆಗಾರರನ್ನು ನೇಮಕ ಮಾಡುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂ. ಆಕುಕ 90 ಎಚ್‌ಪಿಸಿ 2006, ದಿ: 20.04.2006

2) ಸರ್ಕಾರಿ ರಾಜ್ಯ ಡ್ರಗ್ ಲಾಜಿಸ್ಟಿಕ್ ಮತ್ತು ವೇರ್ ಹೌಸಿಂಗ್ ಸೊಸೈಟಿ ಇವರಿಂದ ಬಂದಿರುವ ಕಡತ ಸಂಖ್ಯೆ ಕೆಡಿಎಲ್/ಹೆಚ್ ಇಪಿ/7/08–09

3) 11ನೇ ಯೋಜನಾ ಚಾಲನಾ ಸಮಿತಿಯ ನಡವಳಿಗಳು.

**ಪ್ರಸ್ತಾವನೆ:**

ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯು ರಾಜ್ಯದಲ್ಲಿನ ಸರ್ಕಾರಿ ಆಸ್ಪತ್ರೆಗಳಲ್ಲಿ ಆರೋಗ್ಯ ಸೇವೆಯನ್ನು ಉತ್ತಮಗೊಳಿಸುವ ನಿಟ್ಟಿನಲ್ಲಿ ವಿಶ್ವಬ್ಯಾಂಕ್ ಮತ್ತು ಬಾಹ್ಯ ನೆರವಿನೊಂದಿಗೆ ಹಲವಾರು ಆರೋಗ್ಯ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಮತ್ತು ಆರೋಗ್ಯ ವ್ಯವಸ್ಥೆಯನ್ನು ಬಲಪಡಿಸುವ ಯೋಜನೆಯಾಗಿರುತ್ತದೆ.

ಇಲಾಖೆಯಲ್ಲಿರುವ ಎಲ್ಲಾ ಯೋಜನೆಗಳಿಗೆ (ವಿಶ್ವ ಬ್ಯಾಂಕ್ ನೆರವಿನ ಹಾಗೂ ಬಾಹ್ಯ ನೆರವಿನ ಯೋಜನೆಗಳನ್ನು ಒಳಗೊಂಡಂತೆ) ಮತ್ತು ಔಷಧ ನಿಯಂತ್ರಣ ಇಲಾಖೆಗೆ ಸಂಬಂಧಿಸಿದಂತೆ ಔಷಧ ಮತ್ತು ರಾಸಾಯನಿಕಗಳು, ಉಪಕರಣಗಳು, ಸಾಧನ–ಸಲಕರಣೆಗಳು ಇತ್ಯಾದಿಗಳ ಖರೀದಿಯನ್ನು ಕೇಂದ್ರೀಕರಿಸುವ ಸಲುವಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿದ್ದ ಆರೋಗ್ಯ ಸಲಕರಣಾ ವಿಭಾಗವನ್ನು ಕರ್ನಾಟಕ ರಾಜ್ಯ ಡ್ರಗ್ ಲಾಜಿಸ್ಟಿಕ್ ಮತ್ತು ವೇರ್ ಹೌಸಿಂಗ್ ಸೊಸೈಟಿ, ಬೆಂಗಳೂರು, ಇಲ್ಲಿಗೆ ಮೇಲೆ (1) ರಲ್ಲಿ ಉಲ್ಲೇಖಿಸಲಾದ ಸರ್ಕಾರಿ ಆದೇಶದನ್ವಯ ಸ್ಥಳಾಂತರಿಸಲಾಗಿದೆ.

ಕೆಹೆಚ್‌ಎಸ್‌ಡಿಆರ್‌ಪಿ ವತಿಯಿಂದ ಸೊಸೈಟಿಯನ್ನು ಬಲಪಡಿಸುವ ಬಗ್ಗೆ (Project Appraisal Document) ನಲ್ಲಿ ಪ್ರಸ್ತಾಪಿಸಲಾಗಿದೆ. ಈ ಸಂಬಂಧದಲ್ಲಿ ವೈದ್ಯಕೀಯ ಸಾಧನ ಸಲಕರಣೆಗಳ ಬೇಡಿಕೆಗಳ ಕ್ರೋಢೀಕರಣ ಮತ್ತು ವಿಶಿಷ್ಟತೆಗಳ ಪರಿಶೀಲನೆ ಹಾಗೂ ಟೆಂಡರ್ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸಲು ಅಗತ್ಯ ಸಾಮರ್ಥ್ಯ ಹೊಂದಿದ ಅಧಿಕಾರಿ ಮತ್ತು ಸಿಬ್ಬಂದಿಯವರ ಅವಶ್ಯಕತೆ ಇರುತ್ತದೆ. ಕಾರಣ ಕರ್ನಾಟಕ ರಾಜ್ಯ ಡ್ರಗ್ ಲಾಜಿಸ್ಟಿಕ್ ಮತ್ತು ವೇರ್‌ಹೌಸಿಂಗ್ ಸೊಸೈಟಿಗೆ ಒಬ್ಬ ಬಯೋ ಮೆಡಿಕಲ್ ಇಂಜಿನಿಯರಿಂಗ್ ಸಲಹೆಗಾರರ ಸೇವೆಯು ಪೂರ್ಣಾವಧಿಗೆ ಅವಶ್ಯಕವೆಂದು ಮೇಲೆ (2) ರಲ್ಲಿ ಓದಲಾದ ಕಡತದ ಮೂಲಕ ಪ್ರಸ್ತಾಪಿಸಿರುವ ಹಿನ್ನೆಲೆಯಲ್ಲಿ ಸದರಿ ಸಲಹೆಗಾರರ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಲು ಅರ್ಹತೆ ಮತ್ತು ಆಸಕ್ತಿ ಹೊಂದಿದವರಿಂದ ಅರ್ಜಿಗಳನ್ನು ಆಹ್ವಾನಿಸಿ ರಾಜ್ಯಾದ್ಯಂತ ಪ್ರಸಾರವಿರುವ ಎರಡು ಪ್ರಮುಖ ದಿನಪತ್ರಿಕೆಗಳಲ್ಲಿ ದಿನಾಂಕ 02–10–2008 ರಂದು ಯೋಜನಾ ಕಛೇರಿಯಿಂದ ಪ್ರಕಟಣೆ ನೀಡಲಾಗಿತ್ತು. ಈ ಸಂಬಂಧವಾಗಿ ಬಯೋಮೆಡಿಕಲ್ ಇಂಜಿನಿಯರಿಂಗ್ ಸಲಹೆಗಾರರ ಹುದ್ದೆಗೆ 4 ಅರ್ಜಿಗಳು ಸ್ವೀಕೃತವಾಗಿದ್ದು, ಸದರಿ ಅರ್ಜಿಗಳನ್ನು ಯೋಜನಾ ಕಛೇರಿಯಲ್ಲಿ ರಚಿಸಲಾದ ಅಧಿಕಾರಿಗಳ ಸಮಿತಿಯು ಪರಿಶೀಲಿಸಿದ ನಂತರ ಶ್ರೀ ಕೆ.ಟಿ. ಮನೋಹರ್, ಬಿ.ಎ. (ಇಲೆಕ್ಟ್ರಾನಿಕ್ಸ್ ಮತ್ತು

ಕಮ್ಯುನಿಕೇಶನ್) ಇವರನ್ನು ಬಯೋ ಮೆಡಿಕಲ್ ಇಂಜಿನಿಯರಿಂಗ್ ಸಲಹೆಗಾರರ ಹುದ್ದೆಗೆ ಆಯ್ಕೆ ಮಾಡುವಂತೆ ಶಿಫಾರಸ್ಸು ಮಾಡಿತು.

ಸದರಿಯವರ ವೈಯಕ್ತಿಕ ವಿವರಗಳು ಮತ್ತು ಆಯ್ಕೆ ಸಮಿತಿಯ ವರದಿ ಮತ್ತು ಸಲಹೆಗಳನ್ನು ವಿಶ್ವ ಬ್ಯಾಂಕ್ ಕಛೇರಿಗೆ ಕಳುಹಿಸಿ, ಸದರಿಯವರ ನೇಮಕಾತಿಗೆ ಸಹಮತಿ ನೀಡುವಂತೆ ಕೋರಲಾಗಿತ್ತು. ವಿಶ್ವ ಬ್ಯಾಂಕ್ ಕಛೇರಿಯು ಈ ಬಗ್ಗೆ ದಿನಾಂಕ:28.11.2008 ರಂದು ಇ–ಮೇಲ್ ಸಂದೇಶದ ಮೂಲಕ ಸಹಮತಿ ನೀಡಿರುತ್ತದೆ. ಈ ವಿಷಯವನ್ನು ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನಡೆದ ಯೋಜನಾ ಚಾಲನಾ ಸಮಿತಿಯು ತನ್ನ 11ನೇ ಸಭೆಯಲ್ಲಿ ಪ್ರಸ್ತಾಪಿಸಲಾಯಿತು. ಸಭೆಯಲ್ಲಿ ಚರ್ಚಿಸಿದ ನಂತರ, ಶ್ರೀ ಕೆ.ಟಿ. ಮನೋಹರ್ ಇವರನ್ನು ಬಯೋ ಮೆಡಿಕಲ್ ಇಂಜಿನಿಯರಿಂಗ್ ಸಲಹಾಗಾರರೆಂದು ನೇಮಕ ಮಾಡಲು ತೀರ್ಮಾನಿಸಲಾಯಿತು.

ಶ್ರೀ ಕೆ.ಟಿ. ಮನೋಹರ್ ಬಿ.ಇ. ಇವರನ್ನು ರೂ. 26,000–00 (ಮಾಸಿಕ ಸಂಭಾವನೆ) ಮತ್ತು ಒಪ್ಪಂದದ ಷರತ್ತುಗಳಿಗೆ ಒಳಪಟ್ಟಂತೆ 2 ವರ್ಷಗಳ ಅವಧಿಗಾಗಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಒಪ್ಪಲಾಯಿತು.

ಕಾರಣ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ (ಪಿಆರ್) 12 ವಿಬ್ಯಾನೆ 2009, ಬೆಂಗಳೂರು, ದಿನಾಂಕ: 6ನೇ ಜೂನ್ 2009**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ರಾಜ್ಯ ಡ್ರಗ್ ಲಾಜಿಸ್ಟಿಕ್ ಮತ್ತು ವೇರ್ ಹೌಸಿಂಗ್ ಸೊಸೈಟಿಗೆ ಶ್ರೀ ಕೆ.ಟಿ. ಮನೋಹರ್ ಇವರ್ನು ಬಯೋ ಮೆಡಿಕಲ್ ಇಂಜಿನಿಯರ್ ಸಲಹಾಗಾರರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆ ಆಧಾರದ ಮೇಲೆ ಎರಡು ವರ್ಷಗಳ ಅವಧಿಗೆ ನೇಮಿಸಿದೆ. ಸದರಿಯವರಿಗೆ ಒಟ್ಟಾರೆ ರೂ. 26,000/– (ರೂ. ಇಪ್ಪತ್ತಾರು ಸಾವಿರ ರೂಪಾಯಿಗಳು ಮಾತ್ರ) ಮಾಸಿಕ ಸಂಭಾವನೆಯನ್ನು ನಿಗದಿಪಡಿಸಿದೆ. ಸದರಿಯವರುಗಳು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯೊಂದಿಗೆ ಗುತ್ತಿಗೆ ನೇಮಕದ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡ (Terms of Reference –ToR) ಕರಾರು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2210–06–800–0–84–051 (ಸಾಮಾನ್ಯ ವೆಚ್ಚ) ಯೋಜನಾ ನಿರ್ವಹಣೆ ಮತ್ತು ಮೌಲ್ಯಮಾಪನ" ದಡಿ 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಷಮಾ ಗೋಡಬೋಲೆ**

ಪಿ.ಆರ್. 1570 ಸರ್ಕಾರದ ಉಪ ಕಾರ್ಯದರ್ಶಿ,

ಕೆಹೆಚ್‌ಎಸ್‌ಡಿಆರ್‌ಪಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ:** ವೆಚ್ಚ ಸುಧಾರಣಾ ಆಯೋಗದ ರಚನೆ ಬಗ್ಗೆ.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಯವರು ತಮ್ಮ 2009–10ರ ಆಯವ್ಯಯ ಭಾಷಣದಲ್ಲಿ ಸರ್ಕಾರದ ಕಾರ್ಯಕ್ರಮಗಳಲ್ಲಿ ಆಗುವ ವೆಚ್ಚವನ್ನು ಪರಿಶೀಲಿಸಿ ಕಡಿಮೆ ಪರಿಣಾಮಕಾರಿಯಾದ ಕಾರ್ಯಕ್ರಮಗಳ ವೆಚ್ಚವನ್ನು ತಗ್ಗಿಸಿ ಹೆಚ್ಚು ಪರಿಣಾಮಕಾರಿಯಾದ ಕಾರ್ಯಕ್ರಮಗಳಿಗೆ ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಮತ್ತು ಕಾರ್ಯಕ್ರಮಗಳ ಅನುಷ್ಠಾನದ ದಕ್ಷತೆಯನ್ನು ಹೆಚ್ಚಿಸುವ ಅಗತ್ಯವಿದೆ ಮತ್ತು ಇದಕ್ಕಾಗಿ ಸೂಕ್ತ ಕಾರ್ಯನೀತಿಯನ್ನು ಸಲಹೆ ಮಾಡಲು ತಜ್ಞರನ್ನೊಳಗೊಂಡ ವೆಚ್ಚ ಸುಧಾರಣಾ ಆಯೋಗ (Expenditure Reforms Commission) ವೊಂದನ್ನು ರಚಿಸಲಾಗುವುದು ಎಂದು ಘೋಷಿಸಿರುತ್ತಾರೆ.

ಅದರಂತೆ ರಾಜ್ಯದಲ್ಲಿ ಒಂದು ವೆಚ್ಚ ಸುಧಾರಣಾ ಆಯೋಗವನ್ನು ರಚಿಸುವ ಬಗ್ಗೆ ವಿವರವಾಗಿ ಪರಿಶೀಲಿಸಿ ತೀರ್ಮಾನಿಸಲಾಗಿದ್ದು, ಅದರಂತೆ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 76 ಸಮಯ 2009, ದಿನಾಂಕ: 6ನೇ ಜೂನ್ 2009**

ಮೇಲೆ ವಿವರಿಸಿದ ಸಂದರ್ಭದಲ್ಲಿ, ರಾಜ್ಯದಲ್ಲಿ ಈ ಕೆಳಕಂಡ ಅಧ್ಯಕ್ಷರು ಮತ್ತು ಸದಸ್ಯರನ್ನೊಳಗೊಂಡಂತೆ ವೆಚ್ಚ ಸುಧಾರಣಾ ಆಯೋಗವನ್ನು ರಚಿಸಿ ಆದೇಶಿಸಿದೆ.

| | | |
|---|---|---|
| 1. | ಶ್ರೀ ಬಿ.ಕೆ. ಭಟ್ಟಾಚಾರ್ಯ,<br>ನಿವೃತ್ತ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| 2. | ಶ್ರೀ ಮೋಹನ್‌ದಾಸ್ ಪೈ, ನಿರ್ದೇಶಕರು,<br>(ಮಾನವ ಸಂಪನ್ಮೂಲ) ಇನ್ಫೋಸಿಸ್ ಲಿ. | ಸದಸ್ಯರು |
| 3. | ಶ್ರೀ ವಿವೇಕ್ ಮೂರ್ತಿ, ಪ್ರೊಫೆಸರ್, ಐ.ಐ.ಎಂ. ಬೆಂಗಳೂರು | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಪದನಿಮಿತ್ತ ಸದಸ್ಯರು |

| | | |
|---|---|---|
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಇಲಾಖೆ | ಪದನಿಮಿತ್ತ ಸದಸ್ಯರು |
| 6. | ಶ್ರೀ ಸಿ.ಎಂ. ಶಿರೋಳ್, ಭಾ.ಆ.ಸೇ. | ಕಾರ್ಯದರ್ಶಿ |

ಆಯೋಗದ ಉಲ್ಲೇಖಾಂಶಗಳನ್ನು (terms of reference) ಈ ಆದೇಶದ ಅನುಬಂಧದಲ್ಲಿ ನೀಡಲಾಗಿದೆ.

ಆಯೋಗವು ತನ್ನ ದಿನನಿತ್ಯ ಕಾರ್ಯಗಳಿಗೆ ತನ್ನದೇ ಆದ ಕಾರ್ಯ ವಿಧಾನವನ್ನು ರೂಪಿಸಿಕೊಳ್ಳುವುದು. ವರದಿಯನ್ನು ಆದಷ್ಟು ಬೇಗ ಸಲ್ಲಿಸಲು ಅನುಕೂಲವಾಗುವಂತೆ ಆಯೋಗವು ಅವಶ್ಯವಿದ್ದಲ್ಲಿ ಸರ್ಕಾರದ ವಿವಿಧ ಚಟುವಟಿಕೆಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಅಧ್ಯಯನ ತಂಡಗಳನ್ನು (study group) ರಚಿಸಿಕೊಳ್ಳುವುದು. ಆಯೋಗಕ್ಕೆ ಅವಶ್ಯವೆನಿಸುವ ಮಾಹಿತಿ ಹಾಗೂ ಇನ್ನಿತರ ದಾಖಲೆಗಳನ್ನು ತರಿಸಿಕೊಳ್ಳಬಹುದು. ಸರ್ಕಾರದ ಇಲಾಖೆಗಳು ಆಯೋಗಕ್ಕೆ ಅಗತ್ಯವಿರುವ ಮಾಹಿತಿ, ದಾಖಲೆಗಳನ್ನು ಹಾಗೂ ಆಯೋಗವು ಕೋರುವ ಯಾವುದೇ ಸಹಾಯ/ಸಹಕಾರವನ್ನು ಒದಗಿಸತಕ್ಕದ್ದು. ವಿತ್ತೀಯ ಕಾರ್ಯನೀತಿ ಸಂಸ್ಥೆಯು (Fiscal Policy Institute) ಆಯೋಗಕ್ಕೆ ಅವಶ್ಯವಿರುವ ಸಂಶೋಧನೆ ಹಾಗೂ ಜಾರಿ ವ್ಯವಸ್ಥೆ ವಿವರಗಳನ್ನು (logistic support) ಒದಗಿಸುವುದು.

ಆಯೋಗವು ಒಂದು ವರ್ಷದೊಳಗೆ ತನ್ನ ಅಂತಿಮ ವರದಿಯನ್ನು ನೀಡತಕ್ಕದ್ದು. ಆದಾಗ್ಯೂ ಆಯೋಗವು ಪ್ರತಿ ಮೂರು ತಿಂಗಳಿಗೊಮ್ಮೆ ತನ್ನ ಶಿಫಾರಸ್ಸನ್ನು ಸರ್ಕಾರಕ್ಕೆ ಕಳುಹಿಸಿಕೊಡಬಹುದು. ಆಯೋಗದ ಶಿಫಾರಸ್ಸು ಬಂದ ಹಾಗೆ ಸರ್ಕಾರವು ಈ ಬಗ್ಗೆ ಕ್ರಮ ತೆಗೆದುಕೊಳ್ಳುವುದು.

ಆಯೋಗದ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳು ಆಯೋಗದಲ್ಲಿ ಪೂರ್ಣಾವಧಿ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಾರೆ ಹಾಗೂ ಉಳಿದ ಸದಸ್ಯರು ಅರೆಕಾಲಿಕ ಸದಸ್ಯರಾಗಿ ಕಾರ್ಯ ನಿರ್ವಹಿಸುವರು. ಅಧ್ಯಕ್ಷರ ಮತ್ತು ಸದಸ್ಯರ ಭತ್ಯೆಗಳು ಮತ್ತಿತರ ಸೌಲಭ್ಯಗಳಿಗೆ ಸಂಬಂಧಪಟ್ಟಂತೆ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಜಯ್ ಸೇಠ್**

ಸರ್ಕಾರದ ಕಾರ್ಯದರ್ಶಿ, (ಆ & ಸಂ) ಆರ್ಥಿಕ ಇಲಾಖೆ

**Annexure to G.O. No. FD 76 Sa.Ma.Ya 2009, dated:6.6.2009**

**Terms of Reference of Expenditure Reforms Commission**

(1) Review the efficacy of programmes / schemes of major departments, and make recommendations for their restructuring and covergence to facilitate improvement in their development effectiveness;

(2) Suggest a framework for performance and outcome monitoring of the development schemes / programmes;

(3) Review the scope for consolidation of smaller schemes and expenditure items with common /complementary objectives into a fewer number of viable programmes;

(4) Review the processes and institutional mechanisms of programme implementation and service delivery to improve efficiency and cost effectiveness;

(5) Review the framework of all subsidies, both explicit and implicit, examine the economic rationale for their continuance and make recommendations for making subsidies transparent and suggest measures for maximizing their impact on the target population at minimum cost;

(6) Suggest an effective strategy for meeting a reasonable proportion of expenditure on services through user charges;

(7) Suggest areas for adoption of new technologies including information technology for effective implementation of programmes and delivery of services;

(8) Recommend measures for optimizing the staff strength of Government Departments, attached offices and institutions, for skill-upgradation of existing staff, and for redeployment of surplus staff;

(9) Consider any other relevant issue concerning expenditure management in Government and make suitable recommendations.

**AJAY SETH**

P.R. 1574

Secretary to Government (B&R), Finance Department.

**ಸಹಕಾರ ಸಚಿವಾಲಯ**

**ವಿಷಯ:** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕಾತಿ ಮಾಡಿರುವ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಕಂಇ 37 ಪಿಎಫ್ಎನ್ 1994, ದಿನಾಂಕ:17.09.1996.

2) ಸರ್ಕಾರಿ ಆದೇಶ ಸಂಖ್ಯೆ:ಸಇ 20 ಸಸಂನೋ 2008 ದಿನಾಂಕ:25.09.2008.

3) ಆಡಳಿತಾಧಿಕಾರಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಹಾಗೂ ಉಪ ವಿಭಾಗಾಧಿಕಾರಿಗಳು ತುಮಕೂರು ವಿಭಾಗ, ತುಮಕೂರು ರವರ ಪತ್ರ ಸಂಖ್ಯೆ: ಸಿಇಎಸ್/1/2009–10, ದಿನಾಂಕ:05.05.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ 17.09.1996ರ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ಸಂಸ್ಥೆಯು ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು, ಆಡಳಿತಾಧಿಕಾರಿ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ:25.09.2008ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:19.09.2008 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ:05.05.2009ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ರವರು ಸದರಿ ಸಂಸ್ಥೆಗೆ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:19.09.2008 ರಿಂದ 6 ತಿಂಗಳ ಅವಧಿವರೆಗೆ ವಿಸ್ತರಿಸಿ ಈ ಅವಧಿಯೊಳಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಲಾಗಿದೆ, ಪ್ರಸ್ತುತ ಆಡಳಿತಾಧಿಕಾರಿಗಳ ಅವಧಿ 19.03.2009ಕ್ಕೆ ಮುಕ್ತಾಯವಾಗಿದೆ, ಆಡಳಿತ ಮಂಡಳಿಯ ಎರಡೂ ಗುಂಪುಗಳ ನಡುವೆ ಇದ್ದ ನ್ಯಾಯಾಲಯದ ದಾವೆ ಅಂತಿಮವಾಗಿ ದಿನಾಂಕ:21.03.2009 ರಂದು "In view of the Joint Memo, appeal is dismissed as not pressed for" ಎಂದು ನ್ಯಾಯಾಲಯವು ಆದೇಶಿಸಿದ್ದು ಹಾಗೂ ಈ ಹಿಂದಿನಿಂದಲೂ ಆಡಳಿತಾಧಿಕಾರಿಗಳ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರುತ್ತಿರುವುದರಿಂದ ವಿದ್ಯಾಸಂಸ್ಥೆ, ವಿದ್ಯಾಲಯ, ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ಈ ಸಂಸ್ಥೆಯ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:19.03.2009 ರಿಂದ ಮುಂದಿನ ಆರು ತಿಂಗಳವರೆಗೆ ವಿಸ್ತರಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 20 ಸಸಂನೋ 2008, ಬೆಂಗಳೂರು, ದಿನಾಂಕ: 15ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:19.03.2009 ರಿಂದ ಮುಂದಿನ ಆರು ತಿಂಗಳವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1575

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ವಿದ್ಯಾ ಪ್ರಸಾರಕ ಸಮಿತಿ, ಕಾರವಾರ, ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಕಂಇ 42 ಮುನೋಸೊ 2007, ದಿನಾಂಕ:01.10.2004.

2) ಸಹಕಾರ ಸಂಘಗಳ ಅಪರ ನಿಬಂಧಕರ (ಆಡಳಿತ ಮತ್ತು ಅಭಿವೃದ್ಧಿ) ಪತ್ರ ಸಂಖ್ಯೆ: ಆರ್‌ಸಿಎಸ್/ ಎಡಿಎಂ/07/ಸಂನೋ/ಸಿಆರ್/2008–09, ದಿನಾಂಕ:31.03.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಸರ್ಕಾರಿ ಆದೇಶದಲ್ಲಿ ವಿದ್ಯಾ ಪ್ರಸಾರಕ ಸಮಿತಿ, ಕಾರವಾರ, ಈ ಸಂಸ್ಥೆಯಲ್ಲಿ ನಿಯಮ ಬಾಹಿರ ಚಟುವಟಿಕೆಗಳು ಅವ್ಯಾಹತವಾಗಿ ನಡೆಯುತ್ತಿದ್ದು, ಸಮಿತಿಯಲ್ಲಿನ ಅವ್ಯವಹಾರಗಳನ್ನು ಸರಿಪಡಿಸಿ ಸಮಿತಿಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ.27–(ಎ)(ಸಿ) ಪ್ರಕಾರ ನಿಯತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ವಿಭಾಗಾಧಿಕಾರಿಗಳು, ಕಾರವಾರ ಉಪ ವಿಭಾಗ, ಉತ್ತರ ಕನ್ನಡ ಜಿಲ್ಲೆ ರವರನ್ನು ದಿನಾಂಕ:1.10.2004 ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ. ತದನಂತರ ಆಡಳಿತಾಧಿಕಾರಿಯವರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸುತ್ತಾ ದಿನಾಂಕ:7.12.2007ರ ಆದೇಶದಲ್ಲಿ ಆಡಳಿತಾಧಿಕಾರಿರವರ ಅವಧಿಯನ್ನು ದಿನಾಂಕ:31.3.2008ರ ವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಸಹಕಾರ ಸಂಘಗಳ ನಿಬಂಧಕರವರ ಪತ್ರದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಕಾರವಾರ ರವರಿಂದ ವರದಿ ಪಡೆದು ಸದರಿ ವರದಿಯಲ್ಲಿ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಮಾಡಿದ್ದು, ಮಾನ್ಯ ಉಚ್ಚನ್ಯಾಯಾಲಯ ರಿಟ್ ಅರ್ಜಿ ಸಂಖ್ಯೆ: 20605, ದಿನಾಂಕ: 7.12.2007ರ ಪ್ರಕಾರ ತಡೆಯಾಜ್ಞೆ ನೀಡಿ, ಈ ತಡೆಯಾಜ್ಞೆಯಿಂದಾಗಿ ಆಡಳಿತಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂದು ವರದಿ ಮಾಡಿದ್ದು ಸದರಿ ವರದಿಯಲ್ಲಿ ದಿನಾಂಕ:14.10.2008 ರಂದು ಸರ್ಕಾರಿ ವಕೀಲರ ಪತ್ರದಲ್ಲಿ ರಿಟ್ ಅರ್ಜಿ ಸಂಖ್ಯೆ 20605/2007, ದಿನಾಂಕ: 23.09.2008 ರಂದು ವಜಾ ಮಾಡಿದೆಯೆಂದು, ಆದ್ದರಿಂದ ಸದರಿ ಸಂಘದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:30.06.2009 ರವರೆಗೆ ವಿಸ್ತರಿಸಲು ಹಾಗೂ ಸದರಿ ಅವಧಿಯಲ್ಲಿ ಆಡಳಿತಾಧಿಕಾರಿಗಳು ಚುನಾವಣೆ ನಡೆಸಿ ನೂತನ ಆಡಳಿತ ಮಂಡಳಿಗೆ ಅಧಿಕಾರವಹಿಸಿಕೊಳ್ಳಲು ಸೂಚಿಸಬಹುದಾಗಿದೆಯೆಂದು ವರದಿ ನೀಡಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸಿ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಗಳ ಅವಧಿಯನ್ನು 31.3.2008 ರಿಂದ 30.06.2009 ರವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 35 ಸಿಎಸ್‌ಆರ್ 2008, ಬೆಂಗಳೂರು, ದಿನಾಂಕ: 8ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ ಪ್ರಕಾರ ವಿದ್ಯಾ ಪ್ರಸಾರಕ ಸಮಿತಿ, ಕಾರವಾರ ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಉಪ ವಿಭಾಗಾಧಿಕಾರಿ, ಕಾರವಾರ ಉಪವಿಭಾಗ, ಕಾರವಾರ ಇವರ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ: 31.03.2008 ರಿಂದ 30.06.2009 ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ವಿಸ್ತರಿಸಿದ ಅವಧಿಯಲ್ಲಿ ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ಕಡ್ಡಾಯವಾಗಿ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1576

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಎನ್.ಜೆ. ಪಾಟೀಲ, ಪಂಚಾಯಿತಿ ವಿಸ್ತರಣಾಧಿಕಾರಿ, ಆಳಂದ ತಾಲ್ಲೂಕು ಪಂಚಾಯಿತಿ, ಇವರ ಅನಧಿಕೃತ ಗೈರು ಹಾಜರಿ ಸಂಬಂಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.– ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿ.ಪಂ. ಗುಲ್ಬರ್ಗಾ, ಇವರ ಪತ್ರ ಸಂಖ್ಯೆ ಜಿಪಂಗು/ ಆಡಳಿತ/ ವಿಚಾರಣೆ/46/06–07/384 ದಿನಾಂಕ 5–6–2008
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಡಿಪಿಎಆರ್ 3 ಎಸ್ ಡಿ ಇ 94, ದಿನಾಂಕ:26–2–1994
3. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ ಪಿಎಸ್‌ಸಿ 108 ಸಿಎನ್‌ಎಸ್ 08, ದಿನಾಂಕ 18–3–2009

**ಪ್ರಸ್ತಾವನೆ:**

ಶ್ರೀ ಎನ್.ಜೆ. ಪಾಟೀಲ್, ಪಂಚಾಯಿತಿ ವಿಸ್ತರಣಾಧಿಕಾರಿ, ಆಳಂದ ತಾಲ್ಲೂಕು ಪಂಚಾಯಿತಿ ಇವರು ದಿನಾಂಕ:14.11.2005 ರಿಂದ ಅನಧಿಕೃತ ಗೈರು ಹಾಜರಾಗಿದ್ದು, ಈ ಸಂಬಂಧ ಅವರಿಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಗುಲ್ಬರ್ಗಾ ಇವರು ದಿನಾಂಕ: 21–12–2006 ರಂದು ದೋಷಾರೋಪಣಾ ಪಟ್ಟಿಗಳನ್ನೊಳಗೊಂಡ ಕಾರಣ ಕೇಳುವ ನೋಟೀಸ್ ನೀಡಿದ್ದು, ಅದನ್ನು ಸದರಿ ನೌಕರರಿಗೆ ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯಿತಿ, ಆಳಂದ, ಇವರ ಮುಖಾಂತರ ಜಾರಿಗೊಳಿಸಲು ಸೂಚಿಸಿರುತ್ತಾರೆ. ಆದರೆ ಸದರಿ ನೌಕರರು ಕೇಂದ್ರ ಸ್ಥಾನದಲ್ಲಿ ಇಲ್ಲದ ಕಾರಣ, ದಿನಾಂಕ: 27–2–2007

ರಂದು ಅವರು ವಾಸವಿದ್ದ ಗುಲ್ಬರ್ಗಾದಲ್ಲಿನ ಮನೆಯ ಬಾಗಲಿಗೆ ನೋಟೀಸ್ ಅನ್ನು ಪಂಚರ ಸಮಕ್ಷಮ ಅಂಟಿಸಿ ಪಂಚನಾಮೆ ಪ್ರತಿಯನ್ನು ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯಿತಿ, ಆಳಂದ ರವರು ಸಲ್ಲಿಸಿರುತ್ತಾರೆ.

ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯಿತಿ, ಆಳಂದ ಇವರ ವರದಿ ಆಧಾರದ ಮೇಲೆ ಸದರಿ ನೌಕರರು ಕೇಂದ್ರ ಸ್ಥಾನದಲ್ಲಿ ವಾಸಿಸದೆ ಇರುವ ಕಾರಣ ದಿನಾಂಕ: 10–05–2007 ರಂದು ಪತ್ರಿಕಾ ಪ್ರಕಟಣೆ ಹೊರಡಿಸಿ ಅದನ್ನು ಅಂತಿಮ ನೋಟೀಸ್ ಎಂದು ಪರಿಗಣಿಸಿ 15 ದಿನಗಳೊಳಗಾಗಿ ಹಾಜರಾಗುವಂತೆ ಸೂಚಿಸಲಾಗಿದ್ದರೂ ಸಹ ಅವರು ಕೆಲಸಕ್ಕೆ ಪುನಃ ಹಾಜರಾಗಿರುವುದಿಲ್ಲ. ತದನಂತರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯಿತಿ, ಗುಲ್ಬರ್ಗಾ ಇವರು ದಿನಾಂಕ: 3–7–2007ರ ಆದೇಶದಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಆಳಂದ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ, ಇವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿರುತ್ತಾರೆ. ವಿಚಾರಣಾಧಿಕಾರಿಯವರು ದಿನಾಂಕ: 10–3–2008 ರಂದು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ವಿಚಾರಣೆಗೆ ಹಾಜರಾಗಲು ಹಲವಾರು ಬಾರಿ ನೋಟೀಸ್ ನೀಡಿರುವುದಲ್ಲದೆ ದಿನಪತ್ರಿಕೆಯಲ್ಲಿ ಪ್ರಕಟಿಸಿದ್ದರೂ ಸಹ ಆಪಾದಿತ ಶ್ರೀ ಎನ್.ಜೆ. ಪಾಟೀಲ್ ರವರು ವಿಚಾರಣೆಗೆ ಹಾಜರಾಗಿರುವುದಿಲ್ಲವೆಂದು ವರದಿ ಸಲ್ಲಿಸಿ ಈ ಕಾರಣದಿಂದ ಆಪಾದಿತ ನೌಕರರ ವಿರುದ್ಧದ ಆರೋಪ ಸಾಬೀತಾಗಿರುವುದಾಗಿ ವರದಿಯಲ್ಲಿ ತಿಳಿಸಿರುತ್ತಾರೆ.

ಅದರಂತೆ ಸರ್ಕಾರದ ಹಂತದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಲು ಕೋರಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯಿತಿ, ಗುಲ್ಬರ್ಗಾ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ನಿಯಮಾನುಸಾರ ಪರಿಶೀಲಿಸಿದೆ. ಆಪಾದಿತ ನೌಕರರು ಯಾವುದೇ ನೋಟೀಸ್ ಅನ್ನು ಸ್ವೀಕರಿಸದೆ, ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೆ ಕೇಂದ್ರ ಸ್ಥಾನದಲ್ಲಿಯೂ ಲಭ್ಯವಿರದ ಕಾರಣ ಅವರನ್ನು ಸಂಪರ್ಕಿಸಲು ಮಾಡಲಾದ ಎಲ್ಲಾ ಪ್ರಯತ್ನಗಳು ವಿಫಲವಾದ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 ರ ನಿಯಮ 14 (ii)ರ ಅಧಿಕಾರವನ್ನು ಚಲಾಯಿಸಿ ಅವರಿಗೆ ಸದರಿ ನಿಯಮಾವಳಿಗಳ ನಿಯಮ 8 (viii)ರಲ್ಲಿ ನಿಗದಿಪಡಿಸಿರುವ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಲು ನಿರ್ಣಯಿಸಿ ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 189 ಗ್ರಾಪಂಕಾ 2008, ಬೆಂಗಳೂರು**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್.ಜೆ. ಪಾಟೀಲ, ಪಂಚಾಯಿತಿ ವಿಸ್ತರಣಾಧಿಕಾರಿ, ಆಳಂದ ತಾಲ್ಲೂಕು ಪಂಚಾಯಿತಿ ಇವರು ದಿನಾಂಕ: 14–11–2005 ರಿಂದ ಈವರೆವಿಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14 (ii) ರ ಅಧಿಕಾರವನ್ನು ಚಲಾಯಿಸಿ ಅವರಿಗೆ ಸದರಿ ನಿಯಮಾವಳಿಗಳ ನಿಯಮ 8 (viii) ರಲ್ಲಿ ನಿಗದಿಗೊಳಿಸಿರುವ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ಈ ಮೂಲಕ ವಿಧಿಸಿ ಆದೇಶಿಸಿದೆ.

ಈ ಆದೇಶವನ್ನು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 18–3–2009ರ ಪತ್ರದಲ್ಲಿ ನೀಡಲಾದ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಪಿ.ಆರ್. 1586

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ವಿಷಯ:** ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯನ್ನು ನಿಗದಿತ ಕಾಲಾವಧಿಯೊಳಗೆ ಅನುಷ್ಠಾನಗೊಳಿಸುವ ದಿಸೆಯಲ್ಲಿ ಹೆಚ್ಚುವರಿಯಾಗಿ ನೂತನ ಯೋಜನಾ ವಿಭಾಗಗಳು ಹಾಗೂ ಉಪ ವಿಭಾಗಗಳನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 77 ಜಿಪಅ 08, ದಿನಾಂಕ 04–09–2008
2. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 77 ಜಿಪಅ 08, (ಭಾಗ), ದಿನಾಂಕ: 23–09–2008
3. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 77 ಜಿಪಅ 08, ದಿನಾಂಕ: 6–11–2008
4. ಮುಖ್ಯ ಕಾರ್ಯಾಚರಣೆ ಅಧಿಕಾರಿ, ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕೆಆರ್ಆರ್‌ಡಿಎ/ಸಿ–17ಹೆ.ನೂ.ವಿ.ಸೃ./2009, ದಿನಾಂಕ 3.4.2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕ 4.9.2008ರ ಆದೇಶದಲ್ಲಿನ ಪ್ರಸ್ತಾವನೆಯಲ್ಲಿ ನೀಡಿರುವ ವಿವರಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆ ವತಿಯಿಂದ ಕರ್ನಾಟಕ ರಾಜ್ಯದಲ್ಲಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ ಅಡಿಯಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ವ್ಯವಸ್ಥಿತವಾಗಿ ಹಾಗೂ

ಪರಿಣಾಮಕಾರಿಯಾಗಿ ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸುವ ಉದ್ದೇಶದಿಂದ ದಿನಾಂಕ 1.9.2008 ರಿಂದ ಜಾರಿಗೆ ಬರುಂವತೆ 19 ಯೋಜನಾ ಅನುಷ್ಠಾನ ಘಟಕಗಳನ್ನು ಹಾಗೂ ಆ ಹೊತ್ತಿಗಾಗಲೇ ಅಸ್ಥಿತ್ವದಲ್ಲಿದ್ದ 26 ಯೋಜನಾ ಅನುಷ್ಠಾನ ಉಪ ಘಟಕಗಳೊಂದಿಗೆ ಹೆಚ್ಚುವರಿಯಾಗಿ 6 ನೂತನ ಯೋಜನಾ ಉಪ ಘಟಕಗಳನ್ನು ಸೃಜಿಸಲು ಮಂಜೂರಾತಿ ನೀಡಲಾಗಿತ್ತು. ಈ ರೀತಿ ಸೃಜನೆಗೊಂಡ ಪ್ರತಿ ನೂತನ ಯೋಜನಾ ಘಟಕ ಹಾಗೂ ಯೋಜನಾ ಉಪ ಘಟಕಕ್ಕೆ ತಲಾ 12 ಹಾಗೂ 17 ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಹುದ್ದೆಗಳನ್ನು ಸೃಜಿಸಲು ಹಾಗೂ ಸದರಿ ಹುದ್ದೆಗಳನ್ನು ನಿಯೋಜನೆ ಮೇರೆಗೆ ಹಾಗೂ ಕೆಲವು ಹುದ್ದೆಗಳನ್ನು ಹೊರ ಗುತ್ತಿಗೆ ಮೂಲಕ ತುಂಬಲೂ ಸಹ ಮಂಜೂರಾತಿ ನೀಡಲಾಗಿತ್ತು. ಈ ಆದೇಶದ ಮುಂದುವರಿಕೆಯಲ್ಲಿ ಮೇಲೆ (2) ಹಾಗೂ (3) ರಲ್ಲಿ ಓದಲಾದ ದಿನಾಂಕ 23.9.2008ರ ಹಾಗೂ 6.11.2008ರ ಆದೇಶಗಳಲ್ಲಿ ಕ್ರಮವಾಗಿ ನೂತನವಾಗಿ ಸೃಜನೆಗೊಂಡ ಹುದ್ದೆಗಳ ವೇತನ ಶ್ರೇಣಿಗಳನ್ನು ನಿಗದಿಪಡಿಸಿದ್ದಲ್ಲದೆ ಹಾಗೂ ಸದರಿ ಹುದ್ದೆಗಳಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದ ವೇತನ/ಭತ್ಯೆಗಳು ಮತ್ತು ಕೆಲವೊಂದು ವೇತನೇತರ ವೆಚ್ಚಗಳಿಗಾಗಿ ಲೆಕ್ಕ ಶೀರ್ಷಿಕೆಯನ್ನು ನಿಗದಿಪಡಿಸಿ ಆದೇಶಿಸಲಾಗಿತ್ತು.

ಮುಖ್ಯ ಕಾರ್ಯಾಚರಣೆ ಅಧಿಕಾರಿ, ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರು ಮೇಲೆ (4) ರಲ್ಲಿ ಓದಲಾದ ದಿನಾಂಕ 3.4.2009ರ ಪತ್ರದಲ್ಲಿ ದಿನಾಂಕ 26.2.2009 ರಂದು ನವದೆಹಲಿಯಲ್ಲಿ ನಡೆದ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಅನುಷ್ಠಾನ ಕುರಿತಂತೆ ಅಧಿಕಾರಯುಕ್ತ ಸಮಿತಿ (Empowered Committee) ಸಭೆಯಲ್ಲಿ ಸದರಿ ಯೋಜನೆಯ ಕಾಮಗಾರಿಯ ಸಮರ್ಪಕ ಅನುಷ್ಠಾನ ಹಾಗೂ ನಿರ್ವಹಣೆಗೆ ಸಂಬಂಧಿಸಿದಂತೆ ಹೆಚ್ಚುವರಿಯಾಗಿ ಕನಿಷ್ಠ 7 ನೂತನ ಯೋಜನಾ ವಿಭಾಗಗಳನ್ನು ಸೃಜಿಸುವ ಬಗ್ಗೆ ಕರ್ನಾಟಕ ರಾಜ್ಯದ ಪರವಾಗಿ ಒಪ್ಪಿಗೆ ಸೂಚಿಸಿದ್ದನ್ನು ಉಲ್ಲೇಖಿಸುತ್ತಾ, ಅದರಂತೆ ವಿವಿಧ ಜಿಲ್ಲೆಗಳಲ್ಲಿರುವ ಕಾರ್ಯದ ಒತ್ತಡ ಹಾಗೂ ಕಾಮಗಾರಿಗಳ ಮೌಲ್ಯಗಳಿಗೆ ಅನುರೂಪವಾಗಿ ಇನ್ನೂ ಹೆಚ್ಚುವರಿಯಾಗಿ ನೂತನ ಯೋಜನಾ ವಿಭಾಗಗಳು ಹಾಗೂ ಉಪ ವಿಭಾಗಗಳನ್ನು ಸೃಜಿಸುವ ಬಗ್ಗೆ ಪ್ರಸ್ತಾಪಿಸುತ್ತಾ, ಆ ದಿಸೆಯಲ್ಲಿ 13 ಹೆಚ್ಚುವರಿ ಯೋಜನಾ ವಿಭಾಗಗಳನ್ನು ಹಾಗೂ 19 ಹೆಚ್ಚುವರಿ ಯೋಜನಾ ಉಪ ವಿಭಾಗಗಳನ್ನು ಸೃಜಿಸಲು ಪ್ರಸ್ತಾವಿಸಿದ್ದಾರೆ.

ಇದಕ್ಕೆ ಪೂರ್ವದಲ್ಲಿ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ಮುಖ್ಯ ಕಾರ್ಯಾಚರಣೆ ಅಧಿಕಾರಿಗಳು ಇದೇ ವಿಷಯ ಕುರಿತಂತೆ ದಿನಾಂಕ: 13.01.2009, 11.02.2009 ಹಾಗೂ 18.02.2009 ಗಳಂದು ಸಲ್ಲಿಸಿದ್ದ ಪ್ರಸ್ತಾವಗಳನ್ನು ಕ್ರೋಢೀಕರಿಸಿ ಸಮಗ್ರವಾಗಿ ಪರಿಶೀಲಿಸುವ ನಿಟ್ಟಿನಲ್ಲಿ ಸರ್ಕಾರದ ಕಾರ್ಯದರ್ಶಿ (ಪಂರಾಜ್), ಗ್ರಾ. ಅ.ಪಂ,ರಾಜ್ ಇಲಾಖೆರವರ ಅಧ್ಯಕ್ಷತೆಯಲ್ಲಿ ದಿನಾಂಕ: 4.3.2009 ರಂದು ನಡೆದ ಸಭೆಯಲ್ಲಿ ಕೈಗೊಂಡ ನಿರ್ಣಯಗಳನ್ನನುಸರಿಸಿ ಮೇಲೆ ಉಲ್ಲೇಖಿಸಿದ ದಿನಾಂಕ: 3.4.2009ರ ಪ್ರಸ್ತಾವವನ್ನು ಸದರಿ ಸಂಸ್ಥೆಯು ಸರ್ಕಾರಕ್ಕೆ ಕಳುಹಿಸಿತ್ತು.

ಈ ರೀತಿ ಸೃಜಿಸಲು ಪ್ರಸ್ತಾಪಿಸಿರುವ ಪ್ರತಿ ನೂತನ ಯೋಜನಾ ವಿಭಾಗ ಹಾಗೂ ಉಪ ವಿಭಾಗಗಳಿಗೆ ಈ ಹಿಂದೆ ಮೇಲೆ (1) ರಿಂದ (3) ರವರೆಗೆ ಓದಲಾದ ಆದೇಶಗಳಲ್ಲಿ ವಿವರಿಸಿರುವಂತೆ ಹುದ್ದೆಗಳನ್ನು ಸೃಜಿಸುವ ಮತ್ತು ವೇತನ ಶ್ರೇಣಿ ಹಾಗೂ ಲೆಕ್ಕ ಶೀರ್ಷಿಕೆಯನ್ನು ನಿಗದಿಪಡಿಸುವ ಬಗ್ಗೆಯೂ ಕೂಡ ಮೇಲೆ (4) ರಲ್ಲಿ ಓದಲಾದ ಪ್ರಸ್ತಾವದಲ್ಲಿ ಕೋರಲಾಗಿದೆ.

ಮೇಲಿನ ಎಲ್ಲ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಪ್ರಸಕ್ತ ಪ್ರಸ್ತಾವನೆಯನ್ನು ಸರ್ಕಾರವು ಎಲ್ಲಾ ದೃಷ್ಟಿಕೋನಗಳಿಂದ ಸಮಗ್ರವಾಗಿ ಪರಿಶೀಲಿಸಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ಗ್ರಾಮೀಣ ರಸ್ತೆ ಅಭಿವೃದ್ಧಿಗೆ ಸಂಬಂಧಿಸಿದಂತೆ ನೂತನವಾಗಿ ಅಂದರೆ ಹಾಲಿ ಅಸ್ಥಿತ್ವದಲ್ಲಿರುವ 19 ಯೋಜನಾ ವಿಭಾಗ ಹಾಗೂ 32 ಯೋಜನಾ ಉಪ ವಿಭಾಗಗಳ ಜೊತೆಗೆ ಹೆಚ್ಚುವರಿಯಾಗಿ 10 ನೂತನ ಯೋಜನಾ ವಿಭಾಗಗಳು ಹಾಗೂ 18 ಯೋಜನಾ ಉಪ ವಿಭಾಗಗಳನ್ನು ಸೃಜಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 62 ಜಿಪಅ 09, ಬೆಂಗಳೂರು, ದಿನಾಂಕ: 10ನೇ ಜೂನ್ 2009**

ಪ್ರಸ್ತಾವನೆಯಲ್ಲಿ ನೀಡಿರುವ ವಿವರಗಳು ಹಾಗೂ ಸನ್ನಿವೇಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆಯ ವತಿಯಿಂದ ಕರ್ನಾಟಕ ರಾಜ್ಯದಲ್ಲಿ, ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ, ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ನಿಗದಿತ ಕಾಲಾವಧಿಯೊಳಗೆ, ವ್ಯವಸ್ಥಿತವಾಗಿ ಹಾಗೂ ಪರಿಣಾಮಕಾರಿಯಾಗಿ, ಪೂರ್ಣಗೊಳಿಸಲು ಅನುವಾಗುವಂತೆ ಈಗಾಗಲೇ ಈ ಯೋಜನೆಯಡಿ ಅಸ್ಥಿತ್ವದಲ್ಲಿರುವ ಯೋಜನಾ ವಿಭಾಗಗಳು ಹಾಗೂ ಉಪ ವಿಭಾಗಗಳ ಜೊತೆಗೆ ಹೆಚ್ಚುವರಿಯಾಗಿ ಈ ಕೆಳಕಂಡ ಸ್ಥಳಗಳಲ್ಲಿ 10 ಯೋಜನಾ ಅನುಷ್ಠಾನ ಘಟಕಗಳನ್ನು (Project Implementation Units) ಅಂದರೆ ವಿಭಾಗೀಯ ಕಛೇರಿಗಳನ್ನು ತೆರೆಯಲು ಸರ್ಕಾರವು ಅನುಮೋದಿಸಿದೆ.

| ಕ್ರ ಸಂ | ಯೋಜನಾ ಘಟಕಗಳು | ಯೋಜನಾ ಘಟಕದ ವ್ಯಾಪಿಯಲ್ಲಿ ಬರುವ ಉಪ ಘಟಕಗಳು | ಕ್ರ ಸಂ | ಯೋಜನಾ ಘಟಕಗಳು | ಯೋಜನಾ ಘಟಕದ ವ್ಯಾಪ್ತಿಯಲ್ಲಿ ಬರುವ ಉಪ ಘಟಕಗಳು |
|---|---|---|---|---|---|
| 1 | ಸಾಗರ, ಶಿವಮೊಗ್ಗ ಜಿಲ್ಲೆ | ಸಾಗರ ಉಪ–ಘಟಕ | 6 | ಗದಗ್, ಗದಗ್ ಜಿಲ್ಲೆ | ಗದಗ ಉಪ ಘಟಕ |
| 2 | ದಾವಣಗೆರೆ ದಾವಣಗೆರೆ ಜಿಲ್ಲೆ | ದಾವಣಗೆರೆ ಮತ್ತು ಹರಪನಹಳ್ಳಿ ಉಪ ಘಟಕಗಳು | 7 | ಚಿಕ್ಕಬಳ್ಳಾಪುರ, ಚಿಕ್ಕಬಳ್ಳಾಪುರ ಜಿಲ್ಲೆ | ಚಿಕ್ಕಬಳ್ಳಾಪುರ ಉಪ ಟಕ |
| 3 | ಶಿರಾ, ತುಮಕೂರು ಜಿಲ್ಲೆ | ಶಿರಾ ಉಪ ಘಟಕ | 8 | ಬೆಂಗಳೂರು (ಗ್ರಾಮಾಂತರ) ಬೆಂಗಳೂರು (ಗ್ರಾ) ಜಿಲ್ಲೆ | ಬೆಂಗಳೂರು (ಗ್ರಾ) ಮತ್ತು ರಾಮನಗರ ಉಪ ಘಟಕಗಳು |
| 4 | ಕೊಪ್ಪಳ ಕೊಪ್ಪಳ ಜಿಲ್ಲೆ | ಕೊಪ್ಪಳ ಉಪ ಘಟಕ | 9 | ಮಂಡ್ಯ ಮಂಡ್ಯ ಜಿಲ್ಲೆ | ಮಂಡ್ಯ ಮತ್ತು ಕೆ.ಆರ್.ಪೇಟೆ ಉಪ ಘಟಕಗಳು |
| 5 | ಗೋಕಾಕ್ ಬೆಳಗಾವಿ ಜಿಲ್ಲೆ | ಸೌಂದತ್ತಿ ಉಪ ಘಟಕ | 10 | ಬಾಗಲಕೋಟೆ, ಬಾಗಲಕೋಟೆ ಜಿಲ್ಲೆ | ಬಾಗಲಕೋಟೆ ಮತ್ತು ಜಮಖಂಡಿ ಉಪ ಘಟಕಗಳು |

ಈ ರೀತಿ ಸೃಜನೆಗೊಳ್ಳುವ ಪ್ರತಿ ಯೋಜನಾ ವಿಭಾಗಕ್ಕೆ ಈ ಕೆಳಕಂಡಂತೆ ಅಧಿಕಾರಿ/ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲೂ ಸಹ ಸರ್ಕಾರವು ಮಂಜೂರಾತಿ ನೀಡಿದೆ:–

| ಕ್ರ ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ವೇತನ ಶ್ರೇಣಿ |
|---|---|---|---|---|
| 1 | ಕಾರ್ಯಪಾಲಕ ಇಂಜಿನಿಯರ್ | 1 | ಲೋಕೋಪಯೋಗಿ ಇಲಾಖೆ/ ಪಂರಾ.,ಇಂ ಇಲಾಖೆಗಳಿಂದ ನಿಯೋಜನೆ ಮೇರೆಗೆ } (5) | 18150–26925 |
| 2 | ತಾಂತ್ರಿಕ ಸಹಾಯಕ (ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 | | 14050–25050 |
| 3 | ಸಹಾಯಕ ಇಂಜಿನಿಯರ್ | 2 | | 11400–21600 |
| 4 | ಪ್ರಥಮ ದರ್ಜೆ ಸಹಾಯಕರು | 1 | | 7275–13350 |
| 5 | ಪ್ರಥಮ ದರ್ಜೆ ಲೆಕ್ಕ ಸಹಾಯಕರು | 1 | ರಾಜ್ಯ ಲೆಕ್ಕ ಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ } (2) | 7275–13350 |
| 6 | ಲೆಕ್ಕಾಧೀಕ್ಷಕರು | 1 | | 10,000–18150 |
| 7 | ಡಾಟಾ ಎಂಟ್ರಿ ಆಪರೇಟರ್/ಸಹಾಯಕರು | 2 | ಹೊರಗುತ್ತಿಗೆ ಅಥವಾ ಹಾಲಿ ಇರುವ ಎಂಆರ್.ಇ./ಹೆಚ್ಚುವರಿ ಹುದೆಗಳ ಸ್ಥಳಾಂತರದಿಂದ ತುಂಬತಕ್ಕದ್ದು } (5) | 5800 – 10500 |
| 8 | ಗ್ರೂಪ್ – ಡಿ ಕಾವಲುಗಾರ | 2 | | 4800–7275 |
| 9 | ಚಾಲಕ | 1 | | 5800–10500 |
| | **ಒಟ್ಟು** | | **5+2+5+12** | |

ಎರಡನೇ ದರ್ಜೆ ಸಹಾಯಕರ ವೃಂದದ ಡಾಟಾ ಎಂಟ್ರಿ ಆಪರೇಟರ್‌ಗಳು/ಸಹಾಯಕರ ಹುದ್ದೆಗಳು, ಗ್ರೂಪ್–ಡಿ ವೃಂದದ ಹುದ್ದೆಗಳು ಹಾಗೂ ಡ್ರೈವರ್ ಹುದ್ದೆಗಳನ್ನು ಹೊರ ಗುತ್ತಿಗೆ ಮೂಲಕ ತುಂಬತಕ್ಕದ್ದು ಹಾಗೂ ಇತರ ಹುದ್ದೆಗಳನ್ನು ನಿಯೋಜನೆ ಮೂಲಕ ತುಂಬತಕ್ಕದ್ದು. ಈ ಪ್ರಕಾರವಾಗಿ 10 ಯೋಜನಾ ವಿಭಾಗಗಳಿಗೆ ನಿಯೋಜನೆ ಮೂಲಕ ಒಟ್ಟಾರೆ 70 ಹುದ್ದೆಗಳನ್ನು ಹಾಗೂ ಹೊರ ಗುತ್ತಿಗೆ ಯೋಜನಾ ವಿಭಾಗಗಳಿಗೆ ನಿಯೋಜನೆ ಮೂಲಕ ಒಟ್ಟಾರೆ 70 ಹುದ್ದೆಗಳನ್ನು ಹಾಗೂ ಹೊರ ಗುತ್ತಿಗೆ ಅಥವಾ ಸರ್ಕಾರಕ್ಕೆ ಹೆಚ್ಚುವರಿ ಹೊರೆಯಾಗದಂತೆ ಹಾಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ/ಪಿ.ಎಂ.ಜಿ.ಎಸ್.ವೈ ಉಪ ವಿಭಾಗಗಳಲ್ಲಿ ಎಂ.ಆರ್.ಇ/ಹೆಚ್ಚುವರಿ ಹುದ್ದೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಮಾನಾಂತರ ಹುದ್ದೆಗಳನ್ನು ಗುರುತಿಸಿ ಅಂತಹ ಅಧಿಕಾರಿ ವರ್ಗದವರ ಮೂಲಕ ಒಟ್ಟಾರೆ 50 ಹುದ್ದೆಗಳನ್ನು ತುಂಬತಕ್ಕದ್ದು.

ಇದೇ ರೀತಿ ಈ ಕೆಳಕಂಡ ಸ್ಥಳಗಳಲ್ಲಿ, ಈಗಾಗಲೇ ಅಸ್ಥಿತ್ವದಲ್ಲಿರುವ 32 ಯೋಜನಾ ಅನುಷ್ಠಾನ ಉಪ–ಘಟಕಗಳ ಜೊತೆಗೆ, ನೂತನ 18 ಯೋಜನಾ ಅನುಷ್ಠಾನ ಉಪ–ಘಟಕಗಳನ್ನು ಸೃಜಿಸಲೂ ಸಹ ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಯೋಜನಾ ಉಪ–ಘಟಕ | ಯೋಜನಾ ಉಪ–ಘಟಕದ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕುಗಳು |
|---|---|---|
| 1 | ಸಾಗರ, ಶಿವಮೊಗ್ಗ ಜಿಲ್ಲೆ | ಸಾಗರ, ಸೊರಬ ಮತ್ತು ಹೊಸನಗರ ತಾಲ್ಲೂಕುಗಳು |
| 2 | ಸುರುಪುರ, ಗುಲ್ಬರ್ಗಾ ಜಿಲ್ಲೆ | ಸುರಪುರ, ಶಹಾಪುರ ಮತ್ತು ಜೇವರ್ಗಿ ತಾಲ್ಲೂಕುಗಳು |
| 3 | ಹಾನಗಲ್. ಹಾವೇರಿ ಜಿಲ್ಲೆ | ಹಾನಗಲ್, ಹಿರೇಕೆರೂರು ಮತ್ತು ಬ್ಯಾಡಗಿ ತಾಲ್ಲೂಕುಗಳು |
| 4 | ಶಿರಾ, ತುಮಕೂರು ಜಿಲ್ಲೆ | ಶಿರಾ, ಪಾವಡ, ಮಧುಗಿರಿ ಮತ್ತು ಕೊರಟಗೆರೆ ತಾಲ್ಲೂಕುಗಳು |
| 5 | ಲಿಂಗಸಗೂರು, ರಾಯಚೂರು ಜಿಲ್ಲೆ | ಲಿಂಗಸಗೂರು, ಸಿಂಧನೂರು ಮತ್ತು ಮಾನ್ವಿ ತಾಲ್ಲೂಕುಗಳು |

| ಕ್ರ. ಸಂ. | ಯೋಜನಾ ಉಪ–ಘಟಕ | ಯೋಜನಾ ಉಪ–ಘಟಕದ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕುಗಳು |
|---|---|---|
| 6 | ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ | ಯಲ್ಲಾಪುರ, ಮುಂಡಗೋಡ ಮತ್ತು ಹಳಿಯಾಳ ತಾಲ್ಲೂಕುಗಳು |
| 7 | ಸಿಂಧಗಿ, ಬಿಜಾಪುರ ಜಿಲ್ಲೆ | ಸಿಂಧಗಿ ಮತ್ತು ಮುದ್ದೇಬಿಹಾಳ ತಾಲ್ಲೂಕುಗಳು |
| 8 | ಹಗರಿಬೊಮ್ಮನಹಳ್ಳಿ ಬಳ್ಳಾರಿ ಜಿಲ್ಲೆ | ಹಗರಿಬೊಮ್ಮನಹಳ್ಳಿ, ಹಡಗಲಿ ಮತ್ತು ಕೂಡ್ಲಿಗಿ ತಾಲ್ಲೂಕುಗಳು |
| 9 | ಸೌಂದತ್ತಿ, ಬೆಳಗಾವಿ ಜಿಲ್ಲೆ | ಗೋಕಾಕ್, ಸೌಂದತ್ತಿ, ರಾಮದುರ್ಗ, ಅಥಣಿ ಮತ್ತು ರಾಯಭಾಗ ತಾಲ್ಲೂಕುಗಳು |
| 10 | ಮಡಿಕೇರಿ, ಕೊಡಗು ಜಿಲ್ಲೆ | ಮಡಿಕೇರಿ, ಸೋಮವಾರಪೇಟೆ, ಮತ್ತು ವಿರಾಜಪೇಟೆ ತಾಲ್ಲೂಕುಗಳು |
| 11 | ಕೊಪ್ಪ, ಚಿಕ್ಕಮಗಳೂರು ಜಿಲ್ಲೆ | ಕೊಪ್ಪ, ಶೃಂಗೇರಿ, ಮೂಡಿಗೆರೆ ಮತ್ತು ಎನ್.ಆರ್. ಪುರ ತಾಲ್ಲೂಕುಗಳು |
| 12 | ತಿಪಟೂರು, ತುಮಕೂರು ಜಿಲ್ಲೆ | ತಿಪಟೂರು, ತುರುವೇಕೆರೆ, ಮತ್ತು ಚಿಕ್ಕನಾಯಕನಹಳ್ಳಿ ತಾಲ್ಲೂಕುಗಳು |
| 13 | ಬಸವಕಲ್ಯಾಣ, ಬೀದರ್ ಜಿಲ್ಲೆ | ಬಸವಕಲ್ಯಾಣ, ಮತ್ತು ಭಾಲ್ಕಿ ತಾಲ್ಲೂಕುಗಳು |
| 14 | ಪುತ್ತೂರು, ದಕ್ಷಿಣ ಕನ್ನಡ ಜಿಲ್ಲೆ | ಪುತ್ತೂರು, ಸುಳ್ಯ, ಮತ್ತು ಬಂಟ್ವಾಳ ತಾಲ್ಲೂಕುಗಳು |
| 15 | ಕೆ.ಆರ್. ಪೇಟೆ, ಮಂಡ್ಯ ಜಿಲ್ಲೆ | ಕೆ.ಆರ್. ಪೇಟೆ, ನಾಗಮಂಗಲ ಮತ್ತು ಪಾಂಡವಪುರ ತಾಲ್ಲೂಕುಗಳು |
| 16 | ಹರಪನಹಳ್ಳಿ, ದಾವಣಗೆರೆ ಜಿಲ್ಲೆ | ಹರಪನಹಳ್ಳಿ, ಜಗಳೂರು, ಮತ್ತು ಹರಿಹರ ತಾಲ್ಲೂಕುಗಳು |
| 17 | ಜಮಖಂಡಿ, ಬಾಗಲಕೋಟೆ ಜಿಲ್ಲೆ | ಜಮಖಂಡಿ, ಮುಧೋಳ ಮತ್ತು ಬಿಳಗಿ ತಾಲ್ಲೂಕುಗಳು |
| 18 | ರಾಮನಗರ, ರಾಮನಗರ ಜಿಲ್ಲೆ | ರಾಮನಗರ, ಮಾಗಡಿ, ಕನಕಪುರ, ಮತ್ತು ಚನ್ನಪಟ್ಟಣ ತಾಲ್ಲೂಕುಗಳು |

ಈ ನೂತನ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನಾ ಉಪ ವಿಭಾಗಗಳಿಗೆ ಅಧಿಕಾರಿ/ನೌಕರರ ಹುದ್ದೆಗಳು ಈ ಕೆಳಕಂಡಂತೆ ಇರತಕ್ಕದ್ದು.

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ವೇತನ ಶ್ರೇಣಿ |
|---|---|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 | ಲೋಕೋಪಯೋಗಿ ಇಲಾಖೆ/ಪಂರಾ.ಇಂ. ಇಲಾಖೆಗಳಿಂದ ನಿಯೋಜನೆ ಮೇರೆಗೆ } (11) | 14050–25050 |
| 2 | ಸಹಾಯಕ ಇಂಜಿನಿಯರ್ | 6 | | 11400 –21600 |
| 3 | ಕಿರಿಯ ಇಂಜಿನಿಯರ್ | 3 | | 8825–16000 |
| 4 | ಪ್ರಥಮ ದರ್ಜೆ ಸಹಾಯಕ | 1 | | 7275–13350 |
| 5 | ಪ್ರಥಮ ದರ್ಜೆ ಲೆಕ್ಕ ಸಹಾಯಕ | 1 | ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ } (1) | 7275–13350 |
| 6 | ಡಾಟಾ ಎಂಟ್ರಿ ಆಪರೇಟರ್‌ಗಳು/ಸಹಾಯಕರು | 2 | ಹೊರಗುತ್ತಿಗೆ ಅಥವಾ ಹಾಲಿ ಇರುವ ಎಂ.ಆರ್.ಇ/ಹೆಚ್ಚುವರಿ ಹುದ್ದೆಗಳ ಸ್ಥಳಾಂತರದಿಂದ ತುಂಬತಕ್ಕದ್ದು } (5) | 5800–10500 |
| 7 | ಗ್ರೂಪ್ –ಡಿ / ಕಾವಲುಗಾರ | 2 | | 4800–7275 |
| 8 | ಚಾಲಕ | 1 | | 5800–10500 |
| | **ಒಟ್ಟು** | | **11+1+5=17** | |

ಈ ಪ್ರಕಾರವಾಗಿ ಯೋಜನಾ ಉಪ ವಿಭಾಗಗಳಲ್ಲಿ ಸೃಜನೆಗೊಳ್ಳುವ ಅಧಿಕಾರಿ ಹಾಗೂ ನೌಕರರ ಹುದ್ದೆಗಳ ಪೈಕಿ ಎರಡನೇ ದರ್ಜೆ ಸಹಾಯಕ ವೃಂದದ ಡಾಟಾ ಎಂಟ್ರಿ ಆಪರೇಟರ್/ಸಹಾಯಕ ಹುದ್ದೆಗಳು, ಗ್ರೂಪ್–ಡಿ/ಕಾವಲುಗಾರ ಹಾಗೂ ಚಾಲಕರ ಹುದ್ದೆಗಳನ್ನು ಹೊರ ಗುತ್ತಿಗೆ ಮೂಲಕ ತುಂಬತಕ್ಕದ್ದು. ಹಾಗೂ ಇತರ ಹುದ್ದೆಗಳನ್ನು ನಿಯೋಜನೆ ಮೂಲಕ ತುಂಬತಕ್ಕದ್ದು. ಈ ಪ್ರಕಾರವಾಗಿ 19 ಯೋಜನಾ ಉಪ ವಿಭಾಗಗಳಿಗೆ ನಿಯೋಜನೆ ಮೂಲಕ ಒಟ್ಟಾರೆ 228 ಹುದ್ದೆಗಳನ್ನು ಹಾಗೂ ಹೊರ ಗುತ್ತಿಗೆ ಮೂಲಕ ಒಟ್ಟಾರೆ 95 ಹುದ್ದೆಗಳನ್ನು ತುಂಬತಕ್ಕದ್ದು.

ಮುಂದುವರೆಸಿ, ಕರ್ನಾಟಕ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇಲ್ಲಿನ ಕೇಂದ್ರ ಕಛೇರಿಯಲ್ಲಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನಾ ಕೆಲಸಗಳ ಹೆಚ್ಚುವರಿ ಕಾರ್ಯ ಒತ್ತಡಕ್ಕೆ ಅನುರೂಪವಾಗಿ ಈ ಕೆಳಕಂಡಂತೆ ಅಧಿಕಾರಿ/ಸಿಬ್ಬಂದಿ ವರ್ಗದ ಹೆಚ್ಚುವರಿ ಹುದ್ದೆಗಳ ಸೃಜನೆಗೂ ಕೂಡ ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ವೇತನ ಶ್ರೇಣಿ |
|---|---|---|---|---|
| 1 | ತಾಂತ್ರಿಕ ಸಹಾಯಕರು | 2 | ಲೋಕೋಪಯೋಗಿ ಇಲಾಖೆ/ಪಂರಾ.ಇಂ. ಇಲಾಖೆಗಳಿಂದ ನಿಯೋಜನೆ ಮೇರೆಗೆ ತುಂಬತಕ್ಕದ್ದು | 14050–25050 |
| 2 | ಸಹಾಯಕ ಇಂಜಿನಿಯರ್ | 4 | ಲೋಕೋಪಯೋಗಿ ಇಲಾಖೆ/ಪಂರಾ,ಇಂ. ಇಲಾಖೆಗಳಿಂದ ನಿಯೋಜನೆ ಮೇರೆಗೆ ಅಥವಾ ಹೊರಗುತ್ತಿಗೆ ಮೂಲಕ | 11400–21600 |
| 3 | ಪ್ರಥಮ ದರ್ಜೆ ಲೆಕ್ಕ ಸಹಾಯಕ | 2 | ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇರೆಗೆ. | 7275–13350 |

ಈ ರೀತಿ ಸೃಜನೆಗೊಂಡ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನಾ ವಿಭಾಗಗಳು ಹಾಗೂ ಉಪ ವಿಭಾಗಗಳಲ್ಲಿ ಅಧಿಕಾರಿ/ಸಿಬ್ಬಂದಿ ಹುದ್ದೆಗಳ ಸೃಜನೆಯು ಸದ್ಯಕ್ಕೆ ಒಂದು ವರ್ಷದ ಅವಧಿಗೆ ಮಾತ್ರ ಅಸ್ತಿತ್ವದಲ್ಲಿರುತ್ತವೆ. ಈ ವಿಭಾಗ/ಉಪ ವಿಭಾಗಗಳ ಕೇಂದ್ರ ಸ್ಥಾನಗಳನ್ನು ಕಾರ್ಯಭಾರದ ಮೇಲೆ ನಿಗದಿಪಡಿಸಿದ್ದು, ಬದಲಾಗುವ ಪರಿಸ್ಥಿತಿಗೆ ಹಾಗೂ ಅಗತ್ಯತೆಗೆ ಅನುಗುಣವಾಗಿ ಸದರಿ ಕೇಂದ್ರ ಸ್ಥಾನಗಳನ್ನು ಹಾಗೂ ವ್ಯಾಪ್ತಿಯನ್ನು ಸರ್ಕಾರದ ಪೂರ್ವಾನುಮತಿಯೊಂದಿಗೆ ಬದಲಾಯಿಸುವ ಅಧಿಕಾರವನ್ನು ಕರ್ನಾಟಕ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರಿಗೆ ಪ್ರದತ್ತ ಮಾಡಲಾಗಿದೆ.

ಈ ಸಂಬಂಧ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 3054–ರಸ್ತೆ ಮತ್ತು ಸೇತುವೆಗಳು–80–ಸಾಮಾನ್ಯ–800 ಇತರೆ ವೆಚ್ಚಗಳು–0–08–ಕರ್ನಾಟಕ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಸಂಸ್ಥೆ–101– ಸಹಾಯಾನುದಾನ (ಯೋಜನೇತರ), ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಕ್ರಮವಾಗಿ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 69 ವೆಚ್ಚ–6/09 ದಿನಾಂಕ:19.05.09 ಹಾಗೂ ಆಇ/69/ವೆಚ್ಚ–6/09, ದಿನಾಂಕ 30–5–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1588

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿಗೆ ಮೇಲು ಸಹಿಯ ಪ್ರತ್ಯಾಯವನ್ನು ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ : ಮಮಇ 215 ಮಬಾಬ 2008 ದಿ: 30–10–2008.

2. ಯೋಜನಾಧಿಕಾರಿಗಳು, ಕರ್ನಾಟಕ ರಾಜ್ಯ ಬಾಲಭವನ ಅಕಾಡೆಮಿ, ಧಾರವಾಡರವರ ಕಛೇರಿಯ ಪತ್ರ ಸಂಖ್ಯೆ : ಕ.ರಾ.ಬಾ.ವಿ.ಅ/ಆ.ವೇ/;08–09/12 ದಿ: 25–02–2009.
3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 273 ವೆಚ್ಚ–3/09 ದಿ: 5–6–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿ: 30–10–2008 ರ ಆದೇಶದಲ್ಲಿ ಕರ್ನಾಟಕ ಬಾಲವಿಕಾಸ ಅಕಾಡೆಮಿಯನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದ ಅನುಬಂಧ–1ರಲ್ಲಿ ಅಕಾಡೆಮಿಯ ರೂಪು

ರೇಷೆಗಳಿಗೆ ಹಾಗೂ ಅನುಬಂಧ–2 ರಲ್ಲಿ ಅಕಾಡೆಮಿ ಸ್ಥಾಪಿಸಲು ಅವಶ್ಯವಿರುವ ಯೋಜನಾಧಿಕಾರಿ ಒಳಗೊಂಡಂತೆ ಒಟ್ಟು 11 ಹುದ್ದೆಗಳಿಗೆ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ಬಾಲವಿಕಾಸ ಅಕಾಡೆಮಿಯ ಕೇಂದ್ರ ಕಛೇರಿಯನ್ನು ಧಾರವಾಡದಲ್ಲಿ ಸ್ಥಾಪಿಸಲು ಹಾಗೂ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960 ರಡಿಯಲ್ಲಿ ನೋಂದಾಯಿಸಲು ಮಂಜೂರಾತಿಯನ್ನು ನೀಡಿ ಇದಕ್ಕೆ ತಗಲುವ ವೆಚ್ಚ ರೂ. 10.00 ಲಕ್ಷ ಮೊತ್ತವನ್ನು ಸಾದಿಲ್ವಾರು ನಿಧಿ ಲೆಕ್ಕ ಶೀರ್ಷಿಕೆ 8000–00–242–0–00 ರಡಿಯಲ್ಲಿ ಮೊದಲಿಗೆ ಪ್ರಾರಂಭಿಸಿ ನಂತರ ಪೂರಕ ಅಂದಾಜು–II ರಡಿಯಲ್ಲಿ ಲೆಕ್ಕ ಶೀರ್ಷಿಕೆ 2235–02–102–31–015 (ಯೋಜನೆ) ರಡಿಯಲ್ಲಿ ಹೊಂದಾಣಿಕೆ ಮಾಡಿಕೊಳ್ಳಲು ಹಾಗೂ ಸದರಿ ರೂ. 10.00 ಲಕ್ಷ ಮೊತ್ತವನ್ನು ಆರ್ಥಿಕ ಇಲಾಖೆ ಪ್ರತ್ಯೇಕವಾಗಿ ಹೊರಡಿಸುವ ಆದೇಶದ ನಂತರ ಪಡೆಯಲು ಮಂಜೂರಾತಿಯನ್ನು ನೀಡಿದೆ. ಇದಲ್ಲದೆ ರೂ. 20.00 ಲಕ್ಷ ಮೊತ್ತವನ್ನು ಪೂರಕ ಅಂದಾಜು–II ರಡಿಯಲ್ಲಿ ಒದಗಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿ: 25–02–2009ರ ಯೋಜನಾಧಿಕಾರಿಗಳು, ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿ, ಧಾರವಾಡ ರವರ ಕಛೇರಿಯ ಪತ್ರದಲ್ಲಿ ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿ ಧಾರವಾಡದಲ್ಲಿ ಪ್ರಾರಂಭಗೊಂಡಿದ್ದು, ಸದರಿ ಅಕಾಡೆಮಿಯ ಚಟುವಟಿಕೆಗಳನ್ನು ಅಂದರೆ ಅಧಿಕಾರಿ/ಸಿಬ್ಬಂದಿಯವರ ವೇತನ ಭತ್ಯೆ ಹಾಗೂ ಆರ್ಥಿಕ ವೆಚ್ಚ ಭರಿಸಲು ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗೆ ಅಧಿಕಾರ, ಎ.ಜಿ. ಆಥರೈಸೇಷನ್ ಹಾಗೂ ಖಜಾನೆಯಿಂದ ಆರ್ಥಿಕ ವ್ಯವಹಾರವನ್ನು ನಿರ್ವಹಿಸಲು ಸಂಬಂಧಪಟ್ಟ ಅಕಾಡೆಮಿಯ ಯೋಜನಾಧಿಕಾರಿಗಳಿಗೆ ಆರ್ಥಿಕ ಪ್ರಾಧಿಕಾರವನ್ನು ನೀಡಲು ಆರ್ಥಿಕ ಇಲಾಖೆಯ ಆದೇಶ ಪಡೆಯುವಂತೆ ಕೋರಿರುತ್ತಾರೆ. ಅದರಂತೆ ಆರ್ಥಿಕ ಇಲಾಖೆಯನ್ನು ಕೋರಲಾಗಿ ಆರ್ಥಿಕ ಇಲಾಖೆಯು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 05–06–2009ರ ಟಿಪ್ಪಣಿಯಲ್ಲಿ ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿ, ಧಾರವಾಡ ಇದು ಸರ್ಕಾರಿ ಇಲಾಖೆಯಾಗಿರದೆ ಒಂದು ನೋಂದಾಯಿತ ಸಂಸ್ಥೆಯಾಗಿರುವುದರಿಂದ ಸರ್ಕಾರದಿಂದ ಸಹಾಯಾನುದಾನವನ್ನು ಗ್ರ್ಯಾಂಟ್–ಇನ್–ಏಡ್ ಬಿಲ್ಲಿನ ಮುಖಾಂತರ ಪಡೆಯಬಹುದಾದ್ದರಿಂದ ಯೋಜನಾಧಿಕಾರಿಗೆ ಹಣ ಸೆಳೆಯುವ ಮತ್ತು ಬಟವಾಡೆ ಮಾಡುವ ಅಧಿಕಾರ ನೀಡುವ ಅವಶ್ಯಕತೆ ಇರುವುದಿಲ್ಲವೆಂದು ತಿಳಿಸಿದೆ.

ಸರ್ಕಾರವು ಯೋಜನಾಧಿಕಾರಿಗಳ ಪ್ರಸ್ತಾವನೆಯನ್ನು ಹಾಗೂ ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿಯ ಕಾರ್ಯನಿರ್ವಹಣೆಯ ದೃಷ್ಟಿಯಿಂದ ತಾತ್ಕಾಲಿಕವಾಗಿ ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿಗೆ ಮೇಲು ಸಹಿ ಅಧಿಕಾರವನ್ನು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು, ಇವರಿಗೆ ವಹಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 153 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಮೇಲೆ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಬಾಲವಿಕಾಸ ಅಕಾಡೆಮಿಯ ಕಾರ್ಯ ನಿರ್ವಹಣೆಯ ದೃಷ್ಟಿಯಿಂದ ಬಾಲವಿಕಾಸ ಅಕಾಡೆಮಿಯ ಯೋಜನಾಧಿಕಾರಿಗಳು ಸರ್ಕಾರದಿಂದ ಅಕಾಡೆಮಿಗೆ ಬಿಡುಗಡೆ ಆದ ಹಣದ ಬಗ್ಗೆ ಗ್ರ್ಯಾಂಟ್–ಇನ್–ಏಡ್ ಬಿಲ್ಲನ್ನು ತಯಾರಿಸಿ ಅದನ್ನು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಂದ ಮೇಲು ಸಹಿ ಹಾಕಿಸಲು ಅನುವಾಗುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮೇಲು ಸಹಿ ಅಧಿಕಾರವನ್ನು ವಹಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ ಆಇ 273 ವೆಚ್ಚ–3/09 ದಿ: 5–6–2009ರಲ್ಲಿ ನೀಡಿರುವ ಅಭಿಪ್ರಾಯದಂತೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 96 ದಿ: 10–7–1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 1589

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ:** ಹಣ ಬಿಡುಗಡೆಯ ಬಗ್ಗೆ ಆರ್ಥಿಕ ಅಧಿಕಾರಿಗಳ ಪ್ರತ್ಯಾಯೋಜನೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2008 ದಿನಾಂಕ 16–5–2008.

2) ಸರ್ಕಾರದ ಆದೇಶ ಸಂಖ್ಯೆ : ಆಇ 2 ಟಿಎಫ್‌ಪಿ 2008 ದಿನಾಂಕ 17–9–2008.

3) ಸರ್ಕಾರದ ಆದೇಶ ಸಂಖ್ಯೆ : ಆಇ 9 ಟಿಎಫ್‌ಪಿ 2008 ದಿನಾಂಕ 17–8–2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1), (2) ಮತ್ತು (3)ರ ಆದೇಶಗಳಲ್ಲಿ ಆಡಳಿತ ಇಲಾಖೆಗಳಿಗೆ ಹಣ ಬಿಡುಗಡೆಗೆ ಸಂಬಂಧಿಸಿದಂತೆ ಆರ್ಥಿಕ ಅಧಿಕಾರಗಳ ಪ್ರತ್ಯಾಯೋಜನೆ ಬಗ್ಗೆ ವಿವರಿಸಲಾಗಿದೆ. ಯೋಜನೆಗಳನ್ನು ಕಾರ್ಯಗತ ಗೊಳಿಸುವುದಕ್ಕಾಗಿ ಸೂಕ್ತ ಸಮಯದಲ್ಲಿ ಹಣವನ್ನು ಒದಗಿಸಲು ಅಧಿಕಾರಗಳ ಪ್ರತ್ಯಾಯೋಜನೆಗಳನ್ನು ಇನ್ನೂ ಸರಳೀಕರಣಗೊಳಿಸಲು ನಿರ್ಧರಿಸಲಾಗಿದೆ. ಆದ್ದರಿಂದ ಮೇಲಿನ ಕ್ರಮ ಸಂಖ್ಯೆ (1), (2) ಮತ್ತು (3) ರ ಆದೇಶಗಳನ್ನು ಮುಂದುವರೆಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ ಆಇ 2 ಟಿಎಫ್‌ಪಿ 2009, ಬೆಂಗಳೂರು, ದಿನಾಂಕ: 6ನೇ ಜೂನ್ 2009**

ಆಯವ್ಯಯದಲ್ಲಿ ಹಣದ ಲಭ್ಯತೆಗೆ ಒಳಪಟ್ಟು ಸಾಲಗಳ ನಿಬಂಧನೆಗಳು ಮತ್ತು ಷರತ್ತುಗಳಿಗೆ ಅನುಗುಣವಾಗಿ ಸಾಲ ಪಾವತಿಗಾಗಿ ಹಣವನ್ನು ಬಾಕಿ ಇರುವ ಕಂತಿನ ದಿನಾಂಕದ ಸಮೀಪದಲ್ಲಿ ಒಂದು ಆರ್ಥಿಕ ವರ್ಷದ 3ನೇ ತ್ರೈಮಾಸಿಕದವರೆಗೂ ಆರ್ಥಿಕ ಇಲಾಖೆಯ ಅನುಮತಿ ಇದೆಯೆಂದು ಭಾವಿಸಿ ಬಿಡುಗಡೆ ಮಾಡಬಹುದಾಗಿದೆ. 4ನೇ ತ್ರೈಮಾಸಿಕಕ್ಕೆ ಸಂಬಂಧಿಸಿದಂತೆ ಹಣ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯ ಅನುಮತಿಯನ್ನು ಪಡೆಯಬೇಕಾಗುತ್ತದೆ.

2. ಕೇಂದ್ರ ಮತ್ತು ರಾಜ್ಯದ ಪಾಲುಗಳಿಗೆ ಸಂಬಂಧಿಸಿದಂತೆ ಹಣ ಬಿಡುಗಡೆಯ ಬಗ್ಗೆ ಭಾರತ ಸರ್ಕಾರವು ಕೇಂದ್ರದ ಪಾಲನ್ನು ಬಿಡುಗಡೆ ಮಾಡಿದ ನಂತರ ಮತ್ತು ಅದು ರಾಜ್ಯ ಸರ್ಕಾರಕ್ಕೆ ಇನ್ನೂ ಜಮೆ ಆಗುವ ಮುಂಚೆ ಅಂತಹ ಪ್ರಸ್ತಾವನೆಗಳನ್ನು ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿ (ಎಫ್.ಆರ್.ಸಿ.) ಇವರಿಗೆ ಕಳುಹಿಸಬೇಕು. ಇಂತಹ ಪ್ರಸ್ತಾವನೆಗಳ ಜೊತೆಗೆ ಭಾರತ ಸರ್ಕಾರದಿಂದ ಬಂದಿರುವ ಬಿಡುಗಡೆ ಆದೇಶ ಮತ್ತು ಆಯವ್ಯಯದಲ್ಲಿ ಒದಗಿಸಿರುವ ಹಣದಲ್ಲಿ ಉಳಿದಿರುವ ಮೊತ್ತ ಈ ವಿವರಗಳನ್ನು ನೀಡಬೇಕು. ಕೇಂದ್ರ ಮತ್ತು ರಾಜ್ಯದ ಪಾಲುಗಳನ್ನು ಬಿಡುಗಡೆ ಮಾಡಲು ಆಯವ್ಯಯದಲ್ಲಿ ಒದಗಿಸಿದ ಹಣದಲ್ಲಿ ಉಳಿದ ಮೊತ್ತವು ಸಾಕಾಗದಿದ್ದಲ್ಲಿ ಇಂತಹ ಪ್ರಸ್ತಾವನೆಗಳಿಗೆ ಮರು ಹೊಂದಾಣಿಕೆ ಮೂಲಕ ಅಥವಾ ಪೂರಕ ಅಂದಾಜುಗಳ ಮೂಲಕ ಹಣವನ್ನು ಒದಗಿಸಲು ನಿರ್ದಿಷ್ಟವಾಗಿ ಕೋರಿಕೆಯನ್ನು ಸಲ್ಲಿಸಬೇಕು.

3. ದಿನಾಂಕ 16–5–2008ರ ಆದೇಶದ ಅನುಬಂಧ–1 ರಲ್ಲಿ ಕಾಣಿಸಿರುವ ಆರ್ಥಿಕ ಇಲಾಖೆಯ ಅನುಮೋದನೆ ಪಡೆಯಬೇಕಾದ ವೆಚ್ಚ/ಯೋಜನೆಗಳ ಪಟ್ಟಿಗೆ ಈ ಕೆಳಗಿನ ಯೋಜನೆಗಳನ್ನು ಸೇರಿಸಲಾಗಿದೆ.

| ಕ್ರ. ಸಂ. | ಯೋಜನೆಯ ಹೆಸರು | ಲೆಕ್ಕ ಶೀರ್ಷಿಕೆ |
|---|---|---|
| 1 | ಪೊಲೀಸ್ ಪಡೆಯ ಆಧುನೀಕರಣ<br>Modernisation of Police Forces | 2055-00-115-0-00(NP) |
| 2 | ಸಾಲ ಮನ್ನಾ<br>Loan Waiver | 2425-00-107-2-46 (NP) |
| 3 | ಪಿಂಚಣಿ ಪಾವತಿಗಾಗಿ ಅಂಶದಾನ<br>Contribution to Pension Payment | 2801-80-101-1-13 (NP) |
| 4 | ಬೆಳೆ ಸಾಲಕ್ಕೆ ಸಹಾಯ ಧನ<br>Subsidy for Crop Loan | 2401-00-110-0-09 (P) |
| 5 | ಸಾವಯುವ ಕೃಷಿ<br>Organic Farming | 2401-00-800-1-43 (P) |
| 6 | ಯಶಸ್ವಿನಿ<br>Yashaswini | 2425-00-108-0-57 (P) |
| 7 | ಸಿದ್ಧ ಉಡುಪು ವಲಯದಲ್ಲಿ ಉದ್ಯೋಗ<br>Employment in Garment Sector | 2505-60-101-0-03 (P) |
| 8 | ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು<br>Special Package to Sugarcane Growers & Sugar Industries | 2852-08-201-0-07 (P) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1590

**ಎಂ.ಆರ್. ಶ್ರೀನಿವಾಸಮೂರ್ತಿ**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ.

**ವಿಷಯ:** ಶ್ರೀ ಎಸ್.ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಎಲ್–74/ಸಿಆರ್–8/2008/ಹಾವೇರಿ, ದಿನಾಂಕ1–1–2009

2) ಸರ್ಕಾರಿ ಆದೇಶ ಸಂಖ್ಯೆ : ಆಇ 3 ವಾತೆತ 2009 ದಿನಾಂಕ : 13–2–2009
3) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಎಲ್–74/ಸಿಆರ್–8/2008/ಹಾವೇರಿ ದಿನಾಂಕ 4–5–2009
4) ತನಿಖಾಧಿಕಾರಿಯವರ ವರದಿ ಸಂಖ್ಯೆ: ಪಿಐ/ಕ.ಲೋ/ಹಾವೇರಿ/ಸಿಆರ್ ನಂ.8/08/ಅಂತಿಮ ವರದಿ/ 1272/2009 ದಿನಾಂಕ: 28–2–2009
5) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1) ರಲ್ಲಿನ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಶಿಫಾರಸ್ಸಿನ ಮೇರೆಗೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(2)ರ ಆದೇಶದನ್ವಯ ಶ್ರೀ ಎಸ್.ಎಫ್.ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರನ್ನು ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಎಸ್.ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ವಿರುದ್ಧ ಗುನ್ಹೆ ಸಂಖ್ಯೆ:8/2008 ರಲ್ಲಿ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಹಾವೇರಿ, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಉಲ್ಲೇಖ (3)ರ ಪತ್ರ ದಿನಾಂಕ: 4–5–2009 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೇ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಉಲ್ಲೇಖ (3)ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ಶ್ರೀನಿವಾಸ ಹನುಮಂತರೆಡ್ಡಿ, ಉಮಾಶಂಕರ ನಗರ, ರಾಣೆಬೆನ್ನೂರುರವರು ನೀಡಿದ ದೂರು
2) ಪ್ರಥಮ ವರ್ತಮಾನ ವರದಿ : ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:8/2008 ದಿನಾಂಕ: 11–12–2008
3) ಪ್ರಾಯೋಗಿಕ ಪಂಚನಾಮೆ ದಿನಾಂಕ: 12–12–2008 ರಂದು ಠಾಣೆಯಲ್ಲಿ ಜರುಗಿಸಿದ ವಹಿಸುವಿಕೆ ಪಂಚನಾಮೆ
4) ಅಮಾನತ್ತು ಪಂಚನಾಮೆ ದಿನಾಂಕ: 12–12–2008 ರಂದು ಆಪಾದಿತರ ಕಛೇರಿಯಲ್ಲಿ ಜರುಗಿಸಿದ ಪಂಚನಾಮೆ
5) ಪ್ರಾದೇಶಿಕ ಸಹಾಯಕ ರಾಸಾಯನಿಕ ತಜ್ಞರು, ಧಾರವಾಡರವರ ವರದಿ ಪತ್ರ ಸಂಖ್ಯೆ:ಎಲ್‌ವೈಕೆ/ಎಸಿಇ/ ಡಬ್ಲ್ಯುಡಿ/22/2008, ದಿನಾಂಕ: 9–1–2009
6) ಕೃತ್ಯ ನಡೆದ ಸ್ಥಳದ ನಕಾಶೆ: ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು, ಜಲಸಾರಿಗೆ ಉಪ ವಿಭಾಗ, ರಾಣೆಬೆನ್ನೂರುರವರ ಪತ್ರ ಸಂಖ್ಯೆ:ಸ.ಕಾ.ನಿ.ಇಂ./ಉ.ವಿ/ಗುನ/ 2008–09/602 ದಿನಾಂಕ: 24–12–2008
7) **ಸಾಕ್ಷಿದಾರರ ಹೇಳಿಕೆಗಳು:**
   1. ಶ್ರೀ ಶ್ರೀನಿವಾಸ ತಂದೆ ಹನುಮರೆಡ್ಡಿ, ಉಮಾಶಂಕರ ನಗರ, ರಾಣೆಬೆನ್ನೂರು (ಫಿರ್ಯಾದಿ)
   2. ಶ್ರೀ ಬಿ. ಗೋವರ್ಧನ ತಂದೆ ಬಸಪ್ಪ, ದ್ವಿತೀಯ ದರ್ಜೆ ಸಹಾಯಕ, ಹಾವೇರಿ ಜಿಲ್ಲಾ ಖಜಾನೆ ಕಛೇರಿ (ಪಂಚ–1)
   3. ಶ್ರೀ ಮಹದೇವಪ್ಪ ವೀರಪ್ಪ ಕೊಳ್ಳಿ, ಕಛೇರಿ ಅಧೀಕ್ಷಕರು, ಹಾವೇರಿ ಜಿಲ್ಲಾ ಸಮಾಜ ಕಲ್ಯಾಣ ಇಲಾಖೆ (ಪಂಚ–2)
   4. ಶ್ರೀ ಚೆನ್ನಬಸಪ್ಪ ಶಿವಪ್ಪ ಪಾಣಿಗಟ್ಟಿ, ಕಛೇರಿ ವ್ಯವಸ್ಥಾಪಕರು, ಸ್ಥ.ಮೌ.ತೆ. ಕಛೇರಿ, ರಾಣೆಬೆನ್ನೂರು
   5. ಶ್ರೀಮತಿ ವಾಣಿ, ತಂದೆ ದತ್ತಾತ್ರೇಯ ನಾಡಿಗೇರ, ಶೀಘ್ರಲಿಪಿಗಾರರು, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ರಾಣೆಬೆನ್ನೂರು
   6. ಶ್ರೀ ಪ್ರಕಾಶ ತಂದೆ ನಿಂಗಪ್ಪ, ಗಾಂಡಗೋಳಕರ, ಸಿಪಾಯಿ, ಸ್ಥ.ಮೌ.ತೆ. ಕಛೇರಿ, ರಾಣೆಬೆನ್ನೂರು

7. ಶ್ರೀ ಚಂದ್ರಶೇಖರಯ್ಯ ಮಹಾಲಿಂಗಯ್ಯ ಚಿಕ್ಕಮಠ, ಜ್ಯೂನಿಯರ್ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಉಪ ವಿಭಾಗ, ರಾಣೆಬೆನ್ನೂರು.
8. ಶ್ರೀ ಸಿದ್ಧಪ್ಪ ಬಸಪ್ಪ ಬಸವನಾಯ್ಕರ, ಮುಖ್ಯಪೇದೆ, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ, (ಸಿಬ್ಬಂದಿ)
9. ಶ್ರೀ ನಿಂಗಪ್ಪ ಗುಡ್ಡಪ್ಪ ಕನವಳ್ಳಿ, ಮುಖ್ಯಪೇದೆ, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ, (ಸಿಬ್ಬಂದಿ)
10. ಶ್ರೀ ಬಸವರಾಜ ಬಸಪ್ಪ ಹರವಿ, ಮುಖ್ಯಪೇದೆ, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ, (ಸಿಬ್ಬಂದಿ)
11. ಶ್ರೀ ಸುರೇಶ ತಂದೆ ಶಿವಪ್ಪ ಲಮಾಣಿ, ಎ.ಪಿ.ಸಿ. ಛೇಂಬರ್, ಆರ್ಡರ್ಲಿ, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ, (ಸಿಬ್ಬಂದಿ)
12. ಶ್ರೀ ಸೋಮಶೇಖರ ಶಾಂತಪ್ಪ ಕುಬ್ಯಾಳ, ಮುಖ್ಯಪೇದೆ, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ, (ಸಿಬ್ಬಂದಿ)
13. ಶ್ರೀ ಉದಯ ತಂದೆ ಕೃಷ್ಣರಾವ್ ಕುಲಕರ್ಣಿ, ಮುಖ್ಯಪೇದೆ, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ, (ಸಿಬ್ಬಂದಿ)

**7) ಲಂಚ ಕೇಳಲು ಆಧಾರವಾದ ದಾಖಲೆಗಳು:**

(ಅ) ಅಂತಿಮ ವರದಿ ಪುಟ ಸಂಖ್ಯೆ 69 ರಿಂದ 96 ರವರೆಗೆ ದಿ: 12–12–2008 ರಂದು ಆಪಾದಿತರ ಕಛೇರಿಯಲ್ಲಿ ಅಮಾನತ್ತು ಪಂಚನಾಮೆ ಕಾಲಕ್ಕೆ ಈ ಕೆಳಕಂಡ ದಾಖಲೆಗಳನ್ನು ಜಪ್ತು ಮಾಡಲಾಗಿದೆ.

(1) ಟಿನ್ ನಂ. 29910823769 ರಲ್ಲಿ ಇದ್ದ ಕಡತವನ್ನು ಹಾಜರುಪಡಿಸಿರುತ್ತಾರೆ. ಸದರಿ ಕಡತ ಒಟ್ಟು 27 ಹಾಳೆಗಳನ್ನು ಹೊಂದಿದ್ದು, ಅದರಲ್ಲಿ ರೂ.500/– ಮುಖ ಬೆಲೆಯ 6 ಎನ್.ಎಸ್.ಸಿ. ಸರ್ಟಿಫಿಕೇಟ್‌ಗಳು ಸಹ ಒಳಗೊಂಡಿರುತ್ತದೆ.

(2) ಫಾರಂ ನಂ.1, ವಾಚ್ ರಿಜಿಸ್ಟರ್ ದಿನಾಂಕ 1–11–2008 ರಿಂದ ಪ್ರಾರಂಭಗೊಂಡ ವಹಿಯಾಗಿದ್ದು, ಸದರಿ ವಹಿಯನ್ನು ಶ್ರೀ ಹೆಚ್.ಆರ್.ಲೋಕೇಶ, ವಾ.ತೆ.ಪ., ಇವರು ನಿರ್ವಹಣೆ ಮಾಡಿದ್ದು, ಸದರಿ ವಹಿಗೆ ಪುಟ ಸಂಖ್ಯೆ 50 ರವರೆಗೆ ಸಂಖ್ಯೆಯನ್ನು ನೀಡಿದ್ದು ಇರುತ್ತದೆ. ಪುಟ ಸಂಖ್ಯೆ 2 ಕ್ರಮ ಸಂಖ್ಯೆ 11 ರಲ್ಲಿ ಶ್ರೀ ಶ್ರೀನಿವಾಸ ಹೆಚ್. ಮೈದೂರ, ಇವರಿಗೆ ನೀಡಿರುವ 82163 ಸ್ವೀಕೃತಿ ಸಂಖ್ಯೆಯಾಗಿದ್ದು, ಅವರ ಹೆಸರಿನ ಮುಂದೆ ಟಿನ್ ಸಂಖ್ಯೆ 29910823769 ಎಂದು ನೀಡಲಾಗಿರುತ್ತದೆ. ಪುಟ ಸಂಖ್ಯೆ 4 ರಲ್ಲಿ ನವೆಂಬರ್ 2008ರ ಘೋಷ್ವಾರೆ ಹಾಕಿದ್ದು ಇರುತ್ತದೆ.

(3) 2008ನೇ ಇಸ್ವಿ ಡಿಸೆಂಬರ್ ಮಾಹೆಯ ಹಾಜರಾತಿ ವಹಿಯನ್ನು ಪರಿಶೀಲಿಸಲಾಗಿ, ಇಬ್ಬರು ಆಪಾದಿತರು ದಿನಾಂಕ 12–12–2008 ರಂದು ಕಿರು ಸಹಿ ಮಾಡಿರುತ್ತಾರೆ.

**8) ಆಪಾದಿತರ ಸಮಜಾಯಿಷಿ/ಹೇಳಿಕೆಗಳು :**

(1) ಶ್ರೀ ಎಸ್. ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಸ್ಥಳೀಯ ಮೌಲ್ಯವರ್ಧಿತ ಕಛೇರಿ, ರಾಣೆಬೆನ್ನೂರು ರವರ ಸಮಜಾಯಿಷಿ ಹೇಳಿಕೆ ದಿನಾಂಕ : 12–12–2008

(2) ಶ್ರೀ ಹೆಚ್.ಆರ್. ಲೋಕೇಶ, ವಾಣಿಜ್ಯ ತೆರಿಗೆ ಪರಿವೀಕ್ಷಕರು, ಸ್ಥಳೀಯ ಮೌಲ್ಯವರ್ಧಿತ ಕಛೇರಿ, ರಾಣೆಬೆನ್ನೂರ ರವರ ಸಮಜಾಯಿಷಿ ಹೇಳಿಕೆ ದಿನಾಂಕ: 12–12–2008

ತನಿಖಾಧಿಕಾರಿಯಾದ ಶ್ರೀ ಗುರುದತ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಹಾವೇರಿ ಇವರು ಆಪಾದಿತರಾದ ಶ್ರೀ ಎಸ್.ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಸ್ಥಳೀಯ ಮೌಲ್ಯವರ್ಧಿತ ಕಛೇರಿ, ರಾಣೆಬೆನ್ನೂರು, ಇವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗ, ಹಾವೇರಿ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ 8/2008 ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ7, 13 (1)(ಡಿ) ಜೊತೆಯಲ್ಲಿ 13 (2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ದಿನಾಂಕ: 11–12–2008 ರಂದು ಈ ಪ್ರಕರಣದ ಫಿರ್ಯಾದಿ ಶ್ರೀ ಶ್ರೀನಿವಾಸ ಹೆಚ್ ಮೈದೂರ, ರಾಣೆಬೆನ್ನೂರುರವರು ದಿನಾಂಕ: 18–11–2008 ರಂದು ರಾಣೆಬೆನ್ನೂರಿನ ಸ್ಥಳೀಯ ವ್ಯಾಟ್ ಕಛೇರಿಯಲ್ಲಿ ಗುತ್ತಿಗೆದಾರರ ಲೈಸೆನ್ಸ್‌ಗಾಗಿ ತಮ್ಮ ಹೆಸರಿಗೆ ನೋಂದಣಿಯಾದ ವ್ಯಾಟ್ ನಂಬರ್ ಸರ್ಟಿಫಿಕೇಟ್ ನೀಡುವಂತೆ ಕೋರಿ, ಅಗತ್ಯವಾದ ದಾಖಲೆಗಳನ್ನು ಲಗತ್ತಿಸಿ ಅರ್ಜಿ ಸಲ್ಲಿಸಿದ್ದರು, ಈ ಸಂಬಂಧ ಆರೋಪಿತರಾದ ಶ್ರೀ ಎಸ್. ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ವಾಣಿಜ್ಯ ತೆರಿಗೆ ನಿರೀಕ್ಷಕರು, ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ, ರಾಣೆಬೆನ್ನೂರುರವರು ಲಂಚದ ಮಾತುಗಳನ್ನಾಡುತ್ತಿದ್ದರೆಂದು ದೂರವಾಣಿ ಮುಖಾಂತರ ಹಾವೇರಿ ಲೋಕಾಯುಕ್ತ ಪೊಲೀಸ್ ನಿರೀಕ್ಷಕರಿಗೆ ತಿಳಿಸಿದ್ದು,

ಪೊಲೀಸ್ ನಿರೀಕ್ಷಕರು ತಮ್ಮ ಸಿಬ್ಬಂದಿಯಿಂದ ಟೇಪ್‌ರೆಕಾರ್ಡರ್‌ನ್ನು ಫಿರ್ಯಾದುದಾರರ ಬಳಿ ಕಳುಹಿಸಿರುತ್ತಾರೆ. ಫಿರ್ಯಾದುದಾರರು ಆರೋಪಿತರಾದ ಶ್ರೀ ಎಸ್.ಎಫ್. ಬೆನಕವಾರಿರವರ ಬಳಿಗೆ ಹೋಗಿ ವ್ಯಾಟ್ ರಿಜಿಸ್ಟರ್ ಮಾಡಿಕೊಡುವಂತೆ ಕೇಳಿದಾಗ ಸದರಿಯವರು ರೂ. 2500/– ಗಳ ಲಂಚದ ಹಣಕ್ಕೆ ಒತ್ತಾಯಿಸಿದ್ದು, ಫಿರ್ಯಾದುದಾರರು ರೂ. 2,000/– ನೀಡುವುದಾಗಿ ತಿಳಿಸಿದ್ದು, ಆರೋಪಿತರು ರೂ. 2,500/– ಗಳ ಲಂಚದ ಹಣವನ್ನು ನೀಡುವಂತೆ ಒತ್ತಾಯಿಸಿದ್ದು, ಫಿರ್ಯಾದುದಾರರು ಸದರಿ ಹಣವನ್ನು ನೀಡುವುದಾಗಿ ಒಪ್ಪಿಕೊಂಡು ಬಂದಿರುತ್ತಾರೆ. ಈ ಸಂಭಾಷಣೆಯನ್ನು ಆಡಿಯೋ ಕ್ಯಾಸೆಟ್‌ನಲ್ಲಿ ದಾಖಲು ಮಾಡಿರುತ್ತಾರೆ. ಫಿರ್ಯಾದಿರವರಿಗೆ ಲಂಚ ಕೊಡಲು ಇಷ್ಟವಿಲ್ಲದ್ದರಿಂದ ಸದರಿ ಆರೋಪಿತರ ಮೇಲೆ ಸೂಕ್ತ ಕಾನೂನು ಕ್ರಮ ಕೋರಿರುತ್ತಾರೆ.

ಮೇಲ್ಕಂಡ ಲಿಖಿತ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಹಾವೇರಿರವರು ಸದರಿ ಆರೋಪಿತ ಅಧಿಕಾರಿಯವರ ಮೇಲೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7, 13(1) (ಡಿ) ಜೊತೆಯಲ್ಲಿ 13(2) ರಡಿಯಲ್ಲಿ ಮೊಕದ್ದಮೆ ಸಂಖ್ಯೆ 8/2008 ಪ್ರಕಾರ ಪ್ರಕರಣವನ್ನು ದಿನಾಂಕ: 11–12–2008 ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಪಂಚ ಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ: 12–12–2008 ರಂದು ಆರೋಪಿತರ ಕಛೇರಿಯಲ್ಲಿ ಬೀಸಿದ ಬಲೆಯಲ್ಲಿ 2ನೇ ಆರೋಪಿತರಾದ ಶ್ರೀ ಹೆಚ್.ಆರ್. ಲೋಕೇಶ್, ವಾಣಿಜ್ಯ ತೆರಿಗೆ ನಿರೀಕ್ಷಕರು, ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ, ರಾಣೆಬೆನ್ನೂರುರವರು 1ನೇ ಆರೋಪಿತರಾದ ಶ್ರೀ ಎಸ್.ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರ ನಿರ್ದೇಶನದ ಮೇರೆಗೆ ಫಿರ್ಯಾದುದಾರರಿಂದ ರೂ.2,500/– ಗಳ ಲಂಚದ ಹಣವನ್ನು ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿಹಾಕಿಕೊಂಡಿರುತ್ತಾರೆ. 2ನೇ ಆರೋಪಿತರ ಎರಡೂ ಕೈಗಳನ್ನು ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಲು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿದಾಗ ದ್ರಾವಣವು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತದೆ. ಈ ಅಂಶವು 2ನೇ ಆರೋಪಿತರ ಬೆರಳುಗಳಲ್ಲಿ ಫಿನಾಪ್ತಲೀನ್ ಪುಡಿಯ ಅಸ್ತಿತ್ವವನ್ನು ಪ್ರಮಾಣೀಕರಿಸಿರುತ್ತದೆ. 2ನೇ ಆರೋಪಿತರಿಂದ ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ವಶಪಡಿಸಿಕೊಳ್ಳಲಾಗಿದೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಎಸ್.ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1) (ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ರಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಎಸ್.ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1) (ಡಿ) ಜೊತೆಗೆ 13 (2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರ ಆದೇಶ ಸಂಖ್ಯೆ: ಆಇ 3 ವಾತೆತ 2009, ಬೆಂಗಳೂರು, ದಿನಾಂಕ: 8ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಎಸ್.ಎಫ್. ಬೆನಕವಾರಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 8–6–2009 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1591 **ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಆರ್. ಜಮಖಂಡಿ, ಎಎಓ, 4ನೇ ಪಡೆ, ಕೆ.ಎಸ್.ಆರ್.ಪಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:** 1) ದೋಷಾರೋಪಣಾ ಪಟ್ಟಿ ದಿನಾಂಕ 24–10–2007.
2) ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರುರವರ ಕಛೇರಿ ಪತ್ರ ಸಂಖ್ಯೆ ಸಿಬಿ(5)107/1983–84 ದಿನಾಂಕ 9–9–2008.
3) ದೋಷಾರೋಪಣೆಗೆ ಸಮಜಾಯಿಷಿ ದಿನಾಂಕ 12–11–2007.
4) ಅಂತಿಮ ಆದೇಶ ಸಂಖ್ಯೆ : ಸಿಬಿ (5) 107/1983–84 ದಿನಾಂಕ 26–02–2008.
5) ಮೇಲ್ಮನವಿ ದಿನಾಂಕ 2–5–2008.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಜಮಖಂಡಿ, ಎಎಓ, ಹಿಂದೆ ರಾಜ್ಯ ಗುಪ್ತವಾರ್ತೆ ಕಛೇರಿ, ಬೆಂಗಳೂರು ಇಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ / ಶಾಖಾಧೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಈ ಕೆಳಕಂಡ ಆರೋಪವನ್ನು ಎಸಗಿದ್ದು, ಮೇಲ್ಮನವಿದಾರರಿಗೆ ಕೆ.ಸಿ.ಎಸ್ (ಸಿಸಿಎ) ನಿಯಮಗಳು 1957ರ ನಿಯಮ 12 ರನ್ವಯ ದೋಷಾರೋಪಣೆ ಪತ್ರವನ್ನು ಮೇಲೆ (1) ರಲ್ಲಿ ಓದಲಾದ ಪತ್ರವನ್ನು ಹೊರಡಿಸಲಾಗಿತ್ತು.

**ಆಪಾದನೆ:**

ಶ್ರೀ ಎಸ್.ಆರ್. ಜಮಖಂಡಿ, ಹಾಲಿ ಎಎಓ, 4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಆದ ನೀವು 1977 ರಿಂದ 2000 ಸಾಲಿನವರೆಗೆ ರಾಜ್ಯ ಗುಪ್ತವಾರ್ತೆ ಬೆಂಗಳೂರು ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ / ಶಾಖಾಧೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಕೆ.ಸಿ., ಈಶ್ವರ್, ಡಿವೈಎಸ್‌ಪಿ ರವರು ದಿನಾಂಕ 31–8–1996 ರಂದು ವಯೋ ನಿವೃತ್ತಿ ಹೊಂದಿದ್ದರು. ಶ್ರೀಯುತರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿದ್ದರೂ ಸಹ ಅದನ್ನು ಸದರಿಯವರ ಎಲ್‌ಪಿಸಿ ಮತ್ತು ಎನ್‌ಓಸಿ ನೀಡುವಾಗ ಈ ಬಗ್ಗೆ ನಮೂದಿಸದೆ/ಸತ್ಯವನ್ನು ಮುಚ್ಚಿಡುವ ಮೂಲಕ ನಿಮ್ಮ ಕರ್ತವ್ಯದಲ್ಲಿ ಕರ್ತವ್ಯಲೋಪ ಬೇಜವಾಬ್ದಾರಿತನವೆಸಗಿರುತ್ತೀರಿ.

ಶ್ರೀ ಎಸ್.ಆರ್. ಜಮಖಂಡಿ, ಎ.ಎ.ಓ. ಇವರು ದೋಷಾರೋಪಣಾ ಪತ್ರವನ್ನು ದಿನಾಂಕ: 30–10–2007 ರಂದು ಸ್ವೀಕರಿಸಿ ಮೇಲೆ ಓದಲಾದ (2)ರ ಪತ್ರದಲ್ಲಿ ದಿನಾಂಕ: 12.11.2007ರಲ್ಲಿ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿದಾರರ ಸಮಾಜಾಯಿಷಿಯಲ್ಲಿ ಪರಿಗಣಿಸುವಂತಹ ಅಂಶಗಳು ಕಂಡು ಬಂದಿಲ್ಲವಾದಾಗ್ಯೂ, ಅವರ ಸೇವಾ ಹಿರಿಮೆಯನ್ನು ಪರಿಗಣಿಸಿ, ಕರ್ತವ್ಯದಲ್ಲಿ ಸುಧಾರಿಸಿಕೊಳ್ಳಲು ಅವಕಾಶ ನೀಡಿ, ದಿನಾಂಕ:26–2–2008ರ ಮೇಲೆ (3) ರಲ್ಲಿ ಓದಲಾದ ಆದೇಶದನ್ವಯ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಲಾಗಿರುತ್ತದೆ. ಮೇಲ್ಮನವಿದಾರರು ಸದರಿ ಆದೇಶವನ್ನು ದಿನಾಂಕ: 1–3–2008 ರಂದು ಸ್ವೀಕರಿಸಿ, ಸದರಿ ಆದೇಶದ ವಿರುದ್ಧ ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ದಿನಾಂಕ: 2–5–2008 ರಂದು ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 104 ಪೊಸಿಲಿ 2008, ಬೆಂಗಳೂರು, ದಿನಾಂಕ: 2ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಆರ್. ಜಮಖಂಡಿ, ಹಾಲಿ ಎಎಓ, 4ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 25(2)(ಸಿ)(i) ಪ್ರಕಾರ ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1592

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು) (ಪ್ರ)

**ಕಂದಾಯ ಸಚಿವಾಲಯ**

**ವಿಷಯ:** ಕಿತ್ತೂರು ಅಭಿವೃದ್ಧಿ ಪ್ರಾಧಿಕಾರದ ಕಾರ್ಯನಿರ್ವಹಣೆಗೆ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ : ಕಂಇ 115 ಆರ್‌ಇಹೆಚ್ 07, ದಿನಾಂಕ 13/01/2009.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಕಿತ್ತೂರು ಪರಂಪರೆಯ ತಾಣಗಳು ಮತ್ತು ಸ್ಮಾರಕಗಳ ಅಭಿವೃದ್ಧಿಗಾಗಿ, ಅದರ ಉದ್ದೇಶ, ಯೋಜನೆ, ಆಡಳಿತ ವ್ಯವಸ್ಥೆ ಹಾಗೂ ಶಾಸನಬದ್ಧ ಚೌಕಟ್ಟುಗಳನ್ನು ಒಳಗೊಂಡಂತೆ ಒಂದು ಅಧಿನಿಯಮವನ್ನು ಜಾರಿಗೆ ತರುವುದನ್ನು ಬಾಕಿ ಇಟ್ಟು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಗಿದೆ. ಕಿತ್ತೂರು ಅಭಿವೃದ್ಧಿ ಪ್ರಾಧಿಕಾರದ ತೀರ್ಮಾನಗಳನ್ನು ಜಾರಿಗೊಳಿಸಲು ಮತ್ತು ಅಭಿವೃದ್ಧಿ ಕಾರ್ಯಗಳ ಉಸ್ತುವಾರಿ ಮತ್ತು ಅನುಷ್ಠಾನಕ್ಕಾಗಿ ಆಯುಕ್ತರು ಮತ್ತು ಸಹಾಯಕ ಸಿಬ್ಬಂದಿಗಳೊಂದಿಗೆ ಒಂದು ಪ್ರತ್ಯೇಕ ಕಛೇರಿ ತೆರೆಯುವುದು ಅವಶ್ಯಕವೆಂದು ಕಂಡುಬಂದಿರುತ್ತದೆ. ಈ ವಿಷಯವನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಕಿತ್ತೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹುದ್ದೆಗಳನ್ನು ಮಂಜೂರು ಮಾಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 44 ಆರ್‌ಇಹೆಚ್ 2009, ಬೆಂಗಳೂರು, ದಿನಾಂಕ: 30ನೇ ಜೂನ್ 2009**

ಕಿತ್ತೂರು ಪರಂಪರೆಯ ತಾಣಗಳು ಮತ್ತು ಸ್ಮಾರಕಗಳ ಅಭಿವೃದ್ಧಿಗಾಗಿ, ಅದರ ಉದ್ದೇಶ, ಯೋಜನೆ, ಆಡಳಿತ ವ್ಯವಸ್ಥೆ ಹಾಗೂ ಶಾಸನಬದ್ಧ ಚೌಕಟ್ಟುಗಳನ್ನು ಒಳಗೊಂಡಂತೆ ಒಂದು ಅಧಿನಿಯಮವನ್ನು ಜಾರಿಗೆ ತರುವುದನ್ನು ಬಾಕಿ ಇಟ್ಟು ಸರ್ಕಾರವು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರದ ಕಾರ್ಯ ನಿರ್ವಹಣೆಗಾಗಿ ಈ ಕೆಳಕಂಡ 07 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲು ಮಂಜೂರಾತಿ ನೀಡಿದೆ.

| | **ಹುದ್ದೆಗಳ ವಿವರ** | **ವೇತನ ಶ್ರೇಣಿ** | **ಸಂಖ್ಯೆ** |
|---|---|---|---|
| 1. | ಆಯುಕ್ತರು (ವಿಶೇಷ ಜಿಲ್ಲಾಧಿಕಾರಿಗಳ ದರ್ಜೆಯ ಕೆ.ಎ.ಎಸ್, ಹಿರಿಯ ಶ್ರೇಣಿ ಅಧಿಕಾರಿ) | 20025–28275 | 1 |
| 2. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 10800–20025 | 1 |
| 3. | ಪ್ರಥಮ ದರ್ಜೆ ಸಹಾಯಕ | 7275–13350 | 1 |
| 4. | ಶೀಘ್ರಲಿಪಿಗಾರರು | 7275–13350 | 1 |
| 5. | ಬೆರಳಚ್ಚುಗಾರರು | 5800–10500 | 1 |
| 6. | ಗ್ರೂಪ್ ಡಿ | 4800–7275 | 1 |
| 7. | ವಾಹನ ಚಾಲಕರು | 5800– 10500 | 1 |
| | **ಒಟ್ಟು** | | **07** |

2) ಮೇಲಿನ ಹುದ್ದೆಗಳು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತವೆ :

(i) ಈ ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

(ii) ಕ್ರ. ಸಂ. (1) ರಿಂದ (3) ರಲ್ಲಿನ ಹುದ್ದೆಗಳನ್ನು ನಿಯೋಜನೆ ಮೂಲಕ ಹಾಗೂ ಕ್ರ. ಸಂ. (4) ರಿಂದ (7) ರಲ್ಲಿನ ಹುದ್ದೆಗಳನ್ನು ಹೊರ ಗುತ್ತಿಗೆ ಮೂಲಕ ತುಂಬತಕ್ಕದ್ದು.

(iii) ಈ ಹುದ್ದೆಗಳ ವೆಚ್ಚವನ್ನು ಕಿತ್ತೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ನೀಡಲಾದ ಅನುದಾನದಿಂದ ಭರಿಸತಕ್ಕದ್ದು.

3) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/230/ವೆಚ್ಚ–7/2009, ದಿನಾಂಕ:2/6/2009ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 1594

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪುನರ್ವಸತಿ & ಭೂ ಸ್ವಾಧೀನ–2)

## ಸಹಕಾರ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಕೋಲಾರ ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರು, ಇವರ ಪತ್ರ ಸಂಖ್ಯೆ: ಸಿಆರ್‌ಡಿ/81/ಸಿಎಬಿ–1/2003–04 ದಿನಾಂಕ:23.03.2009

**ಪ್ರಸ್ತಾವನೆ:**

ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ವ್ಯಸ್ಥಾಪಕ ನಿರ್ದೇಶಕರು ದಿನಾಂಕ:5.3.2009ರ ಪತ್ರದಲ್ಲಿ ಚುನಾವಣಾ ಆಯೋಗವು ಲೋಕಸಭಾ ಚುನಾವಣಾ ದಿನಾಂಕವನ್ನು ಪ್ರಕಟಿಸಿರುವುದರಿಂದ ಹಾಗೂ ಮಾದರಿ ನೀತಿ ಸಂಹಿತೆ ದಿನಾಂಕ:2.3.2009 ರಿಂದ ಜಾರಿಯಲ್ಲಿರುವುದರಿಂದ ಸದರಿ ಬ್ಯಾಂಕಿನ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು

ದಿನಾಂಕ:30.09.2009ರ ವರೆಗೆ ಮುಂದೂಡಲು ಅನುಮತಿ ನೀಡುವಂತೆ ಕೋರಿರುವುದಾಗಿ ವರದಿ ಮಾಡುತ್ತಾ ಸದರಿ ಬ್ಯಾಂಕಿನ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ:30.09.2009ರ ವರೆಗೆ ಮುಂದೂಡಲು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 97 ಸಿಎಲ್‌ಎಂ 2009, ಬೆಂಗಳೂರು, ದಿನಾಂಕ: 4ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 30–09–2009 ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 ಸದರಿ ಸಂಸ್ಥೆಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ :

**27ರ ಪ್ರಕರಣದಲ್ಲಿ :**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30–09–2009ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1596

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾಯದರ್ಶಿ, ಸಹಕಾರ ಇಲಾಖೆ

**ವಿಷಯ:** ಸಮಾಪನೆಗೊಂಡಿರುವ ಹಾಸನ ತಾಲ್ಲೂಕು ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಹಾಸನ ಇದರ ಸರ್ಕಾರಿ ಷೇರು ಸಾಲ, ಬಡ್ಡಿಗಳನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು, ಇವರ ಪತ್ರ ಸಂಖ್ಯೆ:ಆರ್‌ಸಿಎಸ್/ಎಲ್‌ಕ್ಯೂಡಿ/6/2008–09 ದಿನಾಂಕ: 16–5–2008 ಮತ್ತು 4.3.2009

**ಪ್ರಸ್ತಾವನೆ:**

ಹಾಸನ ತಾಲ್ಲೂಕು ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಹಾಸನ ಇದನ್ನು ಮೈಸೂರು ವಿಭಾಗದ ಸಹಕಾರ ಸಂಘಗಳ ಜಂಟಿ ನಿಬಂಧಕರು, ದಿನಾಂಕ: 23.04.1999 ರಂದು ಸಮಾಪನೆಗೊಳಿಸಿದ್ದು, ಸದರಿ ಸಂಘವು ಸರ್ಕಾರದ ಷೇರು ಬಂಡವಾಳ ರೂ. 8000.00, ಸರ್ಕಾರದ ಸಾಲ ರೂ. 25,000.00 ಮತ್ತು ಸಾಲದ ಮೇಲಿನ ಬಡ್ಡಿ ರೂ. 13,120.00 ಒಟ್ಟು ರೂ. 46,120.00 ಗಳನ್ನು ಸರ್ಕಾರಕ್ಕೆ ಪಾವತಿಸಬೇಕಾಗಿದ್ದು, ಸದರಿ ಮೊತ್ತವನ್ನು ಪಾವತಿಸಲು ಸಂಘದಲ್ಲಿ ಯಾವುದೇ ರಹ ಇಲ್ಲದಿರುವುದರಿಂದ ಅದನ್ನು ಮನ್ನಾ ಮಾಡಬೇಕೆಂದು ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 31 ಸಿಹೆಚ್‌ಎಸ್ 2008, ಬೆಂಗಳೂರು, ದಿನಾಂಕ: 4ನೇ ಜುಲೈ 2009**

ಮೇಲ್ಕಂಡ ವಿವರಗಳ ಹಿನ್ನೆಲೆಯಲ್ಲಿ ಸಮಾಪನೆಗೊಂಡಿರುವ ಹಾಸನ ತಾಲ್ಲೂಕು ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಹಾಸನ ಇದು ಸರ್ಕಾರಕ್ಕೆ ಪಾವತಿಸಬೇಕಾದ ಷೇರು ಬಂಡವಾಳ ರೂ. 8,000.00, ಸರ್ಕಾರದ ಸಾಲ ರೂ. 25,000.00 ಮತ್ತು ಸಾಲದ ಮೇಲಿನ ಬಡ್ಡಿ ರೂ. 13,120.00 ಒಟ್ಟು ರೂ. 46,120.00 (ನಲವತ್ತಾರು ಸಾವಿರದ ಒಂದು ನೂರ ಇಪ್ಪತ್ತು ರೂಪಾಯಿಗಳು ಮಾತ್ರ) ಗಳನ್ನು ಮನ್ನಾ ಮಾಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ/1/ಟಿಎಫ್‌ಪಿ/2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1597

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾಯದರ್ಶಿ, ಸಹಕಾರ ಇಲಾಖೆ

**ವಿಷಯ:** ಕೋಲಾರ ಜಿಲ್ಲಾ ಸಹಕಾರ ಒಕ್ಕೂಟ, ಕೋಲಾರ ಇದರ ಆಡಳಿತ ಮಂಡಳಿ ಚುನಾವಣೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರ ಪತ್ರ ಸಂಖ್ಯೆ:ಅನಿ/ಕೈಸಸಂ/ಚು/60/2009–10 ದಿನಾಂಕ:25.06.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 25/06/2009ರ ಪತ್ರದಲ್ಲಿ ಕೋಲಾರ ಜಿಲ್ಲಾ ಸಹಕಾರ ಒಕ್ಕೂಟ, ಕೋಲಾರ ಇದರ ಆಡಳಿತ ಮಂಡಳಿಯ ವ್ಯಾಪ್ತಿಯಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ವ್ಯಾಪ್ತಿಯನ್ನು ಪ್ರತ್ಯೇಕಗೊಳಿಸಿ ಆಡಳಿತ ಮಂಡಳಿಯನ್ನು ರಚಿಸುವ ಬಗ್ಗೆ ವಿಶೇಷ ಮಹಾ ಸಭೆ ನಿರ್ಣಯ ಅಸಮಂಜಸವೆಂದು ಕಂಡು ಬಂದ ಕಾರಣ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ್ಯ ಇವರು ತಿದ್ದುಪಡಿಯನ್ನು ತಿರಸ್ಕರಿಸಿರುತ್ತಾರೆ. ಈ ಲೋಪದೋಷಗಳನ್ನು ಸರಿಪಡಿಸಿಕೊಂಡು ಆಡಳಿತ ಮಂಡಳಿಯ ರಚನೆ ಕುರಿತು ಸಹಕಾರ ಸಂಘಗಳ ಕಾಯ್ದೆ ಕಲಂ 12 (5) ರನ್ವಯ 12.06.2009ರಂದು ಕೋಲಾರ ಜಿಲ್ಲಾ ಸಹಕಾರ ಒಕ್ಕೂಟಕ್ಕೆ ನೋಟೀಸು ಜಾರಿಮಾಡಲಾಗಿದೆ. ಈ ಹೊಸ ಆಡಳಿತ ಮಂಡಳಿಯ ರಚನೆಗೆ ಒಪ್ಪಿಗೆ ನೀಡಲು ಕನಿಷ್ಠ 45 ದಿನಗಳ ಕಾಲಾವಕಾಶ ಇರುತ್ತದೆಯೆಂದು ತಿಳಿಸಿರುತ್ತಾರೆ.

ಆದರೆ ಹೊಸ ಆಡಳಿತ ಮಂಡಳಿಯ ಚುನಾವಣೆಯನ್ನು 03.07.2009ರ ಒಳಗೆ ಜರುಗಿಸಬೇಕಾಗಿರುತ್ತದೆ. ಈ ಕಾನೂನಿನ ತಾಂತ್ರಿಕ ತೊಂದರೆಯಿಂದ ಆಡಳಿತ ಮಂಡಳಿಯನ್ನು ಉಪ ನಿಯಮ ತಿದ್ದುಪಡಿಯಾಗುವವರೆಗೆ ಮುಂದುವರೆಸುವುದು ಅವಶ್ಯವಿರುತ್ತದೆ. ಈ ವಿಷಯವನ್ನು 15.06.2009 ರ ಆಡಳಿತ ಮಂಡಳಿಯ ಸಭೆಯಲ್ಲಿ ತೀರ್ಮಾನಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 121 ರಡಿ ವಿಶೇಷ ಪ್ರಕರಣವೆಂದು ಪರಿಗಣಿಸಿ ಆಡಳಿತ ಮಂಡಳಿಯ ಸದಸ್ಯರ ಪುನರ್ ರಚನೆ ಆಗುವವರೆಗೆ ಚುನಾವಣಾ ಕಾಲವನ್ನು ವಿಸ್ತರಿಸಲು ವಿನಂತಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಈ ಸನ್ನಿವೇಶದಲ್ಲಿ 03.07.2009ರಂದು ಜರುಗಬೇಕಾದ ಚುನಾವಣೆಯನ್ನು ಆ ದಿನದಿಂದ 45 ದಿನಗಳವರೆಗೆ ಅಥವಾ ಈ ಒಕ್ಕೂಟ ಆಡಳಿತ ಮಂಡಳಿಯ ಸದಸ್ಯರ ಪುನರ್‌ರಚನೆ ಬೈಲಾ ತಿದ್ದುಪಡಿಯಾಗಿ ಚುನಾವಣೆ ಜರುಗಿಸಲು ಬೇಕಾದ ಕನಿಷ್ಠ ಸಮಯಕ್ಕೆ ಹೊಂದುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959., ಕಲಂ 121 ರಡಿ ಚುನಾವಣಾ ಕಾಲಾವಧಿಯನ್ನು ವಿಸ್ತರಿಸಲು ಸೂಕ್ತ ಆದೇಶವನ್ನು ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಗಳನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 89 ಸಸಂನೋ 2009, ಬೆಂಗಳೂರು, ದಿನಾಂಕ: 6ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39–ಎ (4) ಮತ್ತು ಪ್ರಕರಣ 121ರ ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕೋಲಾರ ಜಿಲ್ಲಾ ಸಹಕಾರ ಒಕ್ಕೂಟ (ನಿ) ಕೋಲಾರ ಇದರ 2009–10 ರಿಂದ 2013–14ನೇ ಸಾಲುಗಳ ಆಡಳಿತ ಮಂಡಳಿ ಚುನಾವಣೆಯನ್ನು ನಡೆಸಲು ದಿನಾಂಕ:30.09.2009ರ ವರೆಗೆ ಕಾಲಾವಕಾಶವನ್ನು ವಿಸ್ತರಿಸಲು ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1598

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ದಿ ನರ್ಸರಿಮೆನ್ ಕೋ–ಆಪರೇಟಿವ್ ಸೊಸೈಟಿ (ಲಿ), ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು, ಇವರ ಪತ್ರ ಸಂಖ್ಯೆ:ಒಟಿಎಸ್/169/ಹೆಚ್‌ಓಟಿ/2008–09, ದಿನಾಂಕ: 21.04.2009

**ಪ್ರಸ್ತಾವನೆ:**

ದಿ ನರ್ಸರಿಮೆನ್ ಕೋ–ಆಪರೇಟಿವ್ ಸೊಸೈಟಿ (ಲಿ.,) ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 25.03.2009ರಂದು ನಡೆಸಲು ನಿಗದಿಪಡಿಸಿದ್ದು, ಲೋಕಸಭಾ ಚುನಾವಣಾ ನೀತಿ ಸಂಹಿತೆಯು ಜಾರಿಯಲ್ಲಿರುವುದರಿಂದ ದಿನಾಂಕ: 25.03.2009 ರಂದು ನಡೆಯಲಿರುವ ವಾರ್ಷಿಕ ಮಹಾಸಭೆಯನ್ನು ಮುಂದೂಡುವಂತೆ ನೀಡಲಾದ ನಿರ್ದೇಶನದನ್ವಯ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಸಾಧ್ಯವಾಗದ ಪ್ರಯುಕ್ತ 2008–09ನೇ ಸಾಲಿನ ವಾರ್ಷಿಕ ಮಹಾಸಭೆಯೊಂದಿಗೆ ನಡೆಸಲು ಅನುಮತಿ ನೀಡಬೇಕಾಗಿ ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 113 ಸಿಎಲ್ಎಂ 2009, ಬೆಂಗಳೂರು, ದಿನಾಂಕ: 3ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ದಿ ನರ್ಸರಿಮೆನ್ ಕೋ–ಆಪರೇಟಿವ್ ಸೊಸೈಟಿ (ಲಿ.) ಬೆಂಗಳೂರು ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 30–09–2009ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 ಸದರಿ ಸಂಸ್ಥೆಗೆ ಈ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ :

**27ರ ಪ್ರಕರಣದಲ್ಲಿ:**

27ನೇ ಪ್ರಕರಣದ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30–09–2009 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1599

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾಯದರ್ಶಿ, ಸಹಕಾರ ಇಲಾಖೆ

**ವಿಷಯ:** ಕರ್ನಾಟಕ ಆರ್ಯ ವೈಶ್ಯ ಮಹಾಸಭೆ (ರಿ) ಬೆಂಗಳೂರು ಈ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರ ಪತ್ರ ಸಂ:ಡಿಆರ್/ಎಸ್ಓಆರ್/ಪಿಟಿಷನ್–124/09–10, ದಿನಾಂಕ:11.06.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:11/06/2009 ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಇವರು ಕರ್ನಾಟಕ ಆರ್ಯ ವೈಶ್ಯ ಮಹಾಸಭೆ (ರಿ) ಬೆಂಗಳೂರು ಇದರ ಕಾರ್ಯಕಾರಿ ಸಮಿತಿಯ ಅವಧಿ ಮುಗಿದಿದ್ದರೂ ಚುನಾವಣೆ ನಡೆಸಿಲ್ಲವೆಂದು ಹಾಗೂ ಅನಧಿಕೃತವಾಗಿ ಮುಂದುವರೆದಿರುವುದಾಗಿ ಪಿ. ಶ್ರೀನಿವಾಸ ಮತ್ತಿತರರು 11.05.2009 ರಂದು ದೂರು ಅರ್ಜಿ ಸಲ್ಲಿಸಿದ್ದು, ದೂರಿನ ಬಗೆ ಲಿಖಿತ ವಿವರಣೆ ಸಲ್ಲಿಸುವಂತೆ ಸಂಘಕ್ಕೆ ಸೂಚಿಸಲಾಗಿತ್ತು. ಸಂಘದವರಿಂದ ಯಾವುದೇ ವಿವರಣೆ ಸ್ವೀಕೃತಿಯಾಗದಿದ್ದುದರಿಂದ ಅರ್ಜಿ ಬಗ್ಗೆ ಗಮನಿಸಿ ಸಂಘಕೆ ಖುದ್ದು ಭೇಟಿ ನೀಡಿ ವರದಿಯನ್ನು ಸಲ್ಲಿಸಲು ಶ್ರೀ ಎಸ್. ಮೆಹಬೂಬ, ಸಹಕಾರ ಸಂಘಗಳ ಸಹಾಯಕ ನಿಬಂಧಕರು 2ನೇ ವಲಯ ಬೆಂಗಳೂರು ಇವರಿಗೆ ತಿಳಿಸಲಾಗಿದ್ದು ಅದರಂತೆ ವರದಿಯನ್ನು ಸಲ್ಲಿಸಿರುವುದಾಗಿ ವರದಿ ಮಾಡಿರುತ್ತಾರೆ.

ದೂರು ಅರ್ಜಿ ಹಾಗೂ ವರದಿಯನ್ನು ಮತ್ತು ಸಂಘದ ಕಾರ್ಯದರ್ಶಿಯವರ ವಿವರಣೆಯನ್ನು ಗಮನಿಸಿದಾಗ ಕರ್ನಾಟಕ ಆರ್ಯ ವೈಶ್ಯ ಮಹಾಸಭೆ (ರಿ) ಇದು ನಿಯಮಾನುಸಾರ ಚುನಾವಣೆ ನಡೆಸದೆ ಇರುವುದು ಮತ್ತು ವಾರ್ಷಿಕ ಸರ್ವ ಸದಸ್ಯರ ಸಭೆ ನಡೆಸದಿರುವುದು ಕಂಡು ಬಂದಿದೆ ಈ ಹಿನ್ನೆಲೆಯಲ್ಲಿ ಸದರಿ ಸಂಘಕ್ಕೆ ಸಂಘಗಳ ನೊಂದಣಿ ಕಾಯ್ದೆ 1960ರ ಕಲಂ 27(ಎ) ರೀತ್ಯಾ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಗಳನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 83 ಸಸಂನೋ 2009, ಬೆಂಗಳೂರು, ದಿನಾಂಕ: 4ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್ಯ ವೈಶ್ಯ ಮಹಾಸಭೆ (ರಿ) ಬೆಂಗಳೂರು ಇದರ ಅವಧಿ ಮುಗಿದಿದ್ದರೂ ನಿಯಮಾನುಸಾರ ಚುನಾವಣೆ ನಡೆಸದೆ ವಾರ್ಷಿಕ ಸದಸ್ಯರ ಸಭೆಯನ್ನು ನಡೆಸದಿರುವುದು ಕಂಡು ಬಂದಿರುವುದರಿಂದ ಸದರಿ ಸಂಘಕ್ಕೆ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರ ಕಲಂ 27 (ಎ) ರೀತ್ಯಾ ಸಹಕಾರ ಸಂಘಗಳ ಉಪ ನಿಬಂಧಕರು–1 ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರನ್ನು ಮೂರು ತಿಂಗಳ ಅವಧಿಗೆ ಹಾಲಿ ಇರುವ ಸದಸ್ಯರಿಂದ ಕೂಡಲೇ ಸಂಘಕ್ಕೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1600

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ಸಮಾಜ ಕಲ್ಯಾಣ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಕಇ 123 ಬಿಸಿಎ 2009, ಬೆಂಗಳೂರು, ದಿನಾಂಕ: 1ನೇ ಜುಲೈ 2009**

**ವಿಷಯ:** ಇತರೆ ಹಿಂದುಳಿದ ವರ್ಗಗಳ ಮೀಸಲಾತಿ ಕೆನೆಪದರದಡಿ ವಾರ್ಷಿಕ ಆದಾಯ ಮಿತಿಯನ್ನು ರೂ. 4.50 ಲಕ್ಷಗಳಿಗೆ ಭಾರತ ಸರ್ಕಾರವು ಪರಿಷ್ಕರಿಸುವ ರೀತ್ಯಾ ಓ.ಬಿ.ಸಿ. ಪ್ರಮಾಣ ಪತ್ರ ನೀಡುವ ಕುರಿತು.

**ಉಲ್ಲೇಖ:** ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ:36033/3/2004 Estt.(Res) ದಿನಾಂಕ 14–10–2008

ಭಾರತ ಸರ್ಕಾರದ ಸಿಬ್ಬಂದಿ ಮತ್ತು ತರಬೇತಿ ಇಲಾಖೆಯ ದಿನಾಂಕ 14.10.2008ರ ಅಧಿಕೃತ ಜ್ಞಾಪನದನ್ವಯ ಹಿಂದುಳಿದ ವರ್ಗಗಳ ಅಭ್ಯರ್ಥಿಗಳು ಕೇಂದ್ರ ಸರ್ಕಾರದ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯಲು ಅಥವಾ ಕೇಂದ್ರ ಸರ್ಕಾರದ ಹುದ್ದೆಗಳು, ಯೋಜನೆಗಳು ಹಾಗೂ ಸವಲತ್ತುಗಳನ್ನು ಪಡೆಯುವ ಉದ್ದೇಶಕ್ಕಾಗಿ ಪ್ರಮಾಣ ಪತ್ರ ಕೋರಿ ಅರ್ಜಿ ಸಲ್ಲಿಸಿದ ಸಂದರ್ಭಗಳಲ್ಲಿ ಹಿಂದುಳಿದ ವರ್ಗಗಳ ಪ್ರಮಾಣ ಪತ್ರಗಳನ್ನು ನೀಡುವ ಸಕ್ಷಮ ಪ್ರಾಧಿಕಾರಗಳು ರೂ. 4.50 ಲಕ್ಷಗಳ ಪರಿಷ್ಕೃತ ವಾರ್ಷಿಕ ಆದಾಯ ಮಿತಿಯೊಳಗೆ ಬರುವ ಅಭ್ಯರ್ಥಿಗಳಿಗೆ, ನಿಗದಿಪಡಿಸಿರುವ ಕೆನೆಪದರ ನೀತಿಯ ಇನ್ನಿತರ ನಿರ್ಣಾಯಕ ಅಂಶಗಳೊಂದಿಗೆ ಪರಿಶೀಲಿಸಿ, ಅರ್ಹ ಅಭ್ಯರ್ಥಿಗಳಿಗೆ ಈ ಕೆಳಕಂಡಂತೆ ಪರಿಶೀಲಿಸಿ ಹಿಂದುಳಿದ ವರ್ಗಗಳ ಪ್ರಮಾಣ ಪತ್ರವನ್ನು ನೀಡತಕ್ಕದ್ದು.

**“Son(s) and Daughter(s) of :**

a) Persons having cross annual income Rs. 4.5 lakh or above or possessing wealth above the exemption limit as prescribed in the Wealth Tax Act for a period of three consecutive years.

b) Persons in categories I, II, III and V-A who are not disentitled to the benefit of reservation but have income from other sources of wealth which will bring them within the income/wealth criteria mentioned in (a) above.

**Explanation:**

Income from salaries or Agricultural land shall not be clubbed.

**ಬಿ. ರಾಮಸ್ವಾಮಿ**

ಪಿ.ಆರ್. 1608 ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ), ಸಮಾಜ ಕಲ್ಯಾಣ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಕಂದಾಯ ಇಲಾಖೆಯ ಗ್ರೂಪ್ –ಸಿ ವೃಂದದ ವರ್ಗಾವಣೆ ಮಾಡುವ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರ ರಚಿಸುವ ಕುರಿತು.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಎಸ್‌ಪಿಆರ್ 2001 ದಿನಾಂಕ: 22/11/2001

**ಪ್ರಸ್ತಾವನೆ:**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 4 ಎಸ್‌ಪಿಆರ್ 2001 ದಿನಾಂಕ: 22/11/2001 ರಲ್ಲಿ ಸರ್ಕಾರಿ ಅಧಿಕಾರಿ/ನೌಕರರ ವರ್ಗಾವಣೆಗಳನ್ನು ಸದರಿ ಆದೇಶದಲ್ಲಿ ಸೂಚಿಸಿರುವ ವೃಂದ ನಿರ್ವಹಣಾ ಪ್ರಾಧಿಕಾರದ ಮೂಲಕ ವರ್ಗಾವಣೆಗಳನ್ನು ಮಾಡಬೇಕಾಗಿರುತ್ತದೆ. ಗ್ರೂಪ್–ಸಿ ವೃಂದದ ನೌಕರರ ವರ್ಗಾವಣೆಗಳನ್ನು ಒಂದು ಜಿಲ್ಲೆಯಿಂದ ಇನ್ನೊಂದು ಜಿಲ್ಲೆಗೆ ಮಾಡುವ ವೃಂದ ಪ್ರಾಧಿಕಾರದಲ್ಲಿ ಸರ್ಕಾರದಿಂದ ನಾಮ ನಿರ್ದೇಶಿತವಾದ ಇಲಾಖಾ ಮುಖ್ಯಸ್ಥರು ಇರಬೇಕಾಗುತ್ತದೆ. ರಾಜ್ಯದಲ್ಲಿ 2005ನೇ ಸಾಲಿನಲ್ಲಿ ಪ್ರಾದೇಶಿಕ ಆಯುಕ್ತರ ಹುದ್ದೆಯು ರಚನೆಯಾದ ನಂತರ ಶಿರಸ್ತೇದಾರರ ವೃಂದಕ್ಕೆ ವೃಂದ ನಿರ್ವಹಣಾ ಪ್ರಾಧಿಕಾರವನ್ನು ರಚನೆ ಮಾಡಿರುವುದಿಲ್ಲ. ಶಿರಸ್ತೇದಾರರ ವೃಂದಕ್ಕೆ ಪ್ರಾದೇಶಿಕ ಆಯುಕ್ತರು ಇಲಾಖಾ ಮುಖ್ಯಸ್ಥರಾಗಿರುವುದರಿಂದ ಆಯಾ ವಿಭಾಗದ ಹಿರಿಯ ಜಿಲ್ಲಾಧಿಕಾರಿಗಳನ್ನು ಸದಸ್ಯರನ್ನಾಗಿ ಹಾಗೂ ಹೆಚ್ಚುವರಿ ಪ್ರಾದೇಶಿಕ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಇವರನ್ನು ಸಂಚಾಲಕರನ್ನಾಗಿ ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿ ಶಿರಸ್ತೇದಾರರ ವೃಂದಕ್ಕೆ ವೃಂದ ನಿರ್ವಹಣಾ ಪ್ರಾಧಿಕಾರ ರಚಿಸಲು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಕಂಇ 191 ಬಿಎಂಎಂ 2009, ಬೆಂಗಳೂರು, ದಿನಾಂಕ: 24ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೆಂಗಳೂರು, ಮೈಸೂರು, ಬೆಳಗಾಂ, ಹಾಗೂ ಗುಲ್ಬರ್ಗಾ ವಿಭಾಗದ ಶಿರಸ್ತೇದಾರರ ವೃಂದಕ್ಕೆ ಈ ಕೆಳಕಂಡ ವೃಂದ ನಿರ್ವಹಣಾ ಪ್ರಾಧಿಕಾರವನ್ನು ಈ ಕೂಡಲೇ ಜಾರಿಗೆ ಬರುವಂತೆ ರಚಿಸಲಾಗಿದೆ.

| | | |
|---|---|---|
| ಪ್ರಾದೇಶಿಕ ಆಯುಕ್ತರು | : | ಅಧ್ಯಕ್ಷರು |
| ವಿಭಾಗದ ಹಿರಿಯ ಜಿಲ್ಲಾಧಿಕಾರಿಗಳು | ; | ಸದಸ್ಯರು |
| ಹೆಚ್ಚುವರಿ ಪ್ರಾದೇಶಿಕ ಆಯುಕ್ತರು | : | ಸಂಚಾಲಕರು |
| ಪ್ರಾದೇಶಿಕ ಆಯುಕ್ತರ ಕಛೇರಿ. | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1610 **ಎಂ.ಎಸ್. ದೇಸಾಯಿ**

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು & ವಿ.ನಿ.)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಧಾರವಾಡ ತಾಲ್ಲೂಕು, ಅತ್ತಿಕೊಳ್ಳ ಗ್ರಾಮದ ರೈಲ್ವೆ ಇಲಾಖೆಯ ಜಾಗದಲ್ಲಿ ವಾಸಿಸುತ್ತಿರುವ ಗ್ರಾಮಸ್ಥರಿಗೆ ಪರ್ಯಾಯ ವ್ಯವಸ್ಥೆ ಕಲ್ಪಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ. LAQ/CR-134+149/2008-09, ದಿನಾಂಕ: 3.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ರವರು ಧಾರವಾಡ ಕಂಬಾರ–ಗಣವಿ ವರೆಗೆ ರೈಲ್ವೆ ಹಳಿ ನಿರ್ಮಾಣಕ್ಕಾಗಿ ರೈಲ್ವೆ ಸಚಿವಾಲಯವು ಕಾಮಗಾರಿಯನ್ನು ಪ್ರಾರಂಭಿಸಿದ್ದು, ಧಾರವಾಡದ ಅತ್ತಿಕೊಳ್ಳ ಗ್ರಾಮದಲ್ಲಿ ಒಟ್ಟು 7 ಎಕರೆ 7 ಗುಂಟೆ ಜಮೀನಿನಲ್ಲಿ 262 ಕುಟುಬಗಳು ವಾಸವಾಗಿದ್ದು, ಈ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಲಾಗಿದೆ. ಸದರೀ ಕೊಳಚೆ ಪ್ರದೇಶದಲ್ಲಿನ ಕುಟುಂಬಗಳನ್ನು ಬೇರೆಡೆಗೆ ಸ್ಥಳಾಂತರಿಸಿ, ಈ ಪ್ರದೇಶವನ್ನು ರೈಲ್ವೆ ಯೋಜನೆಗಾಗಿ ಭೂ ಸ್ವಾಧೀನ ಪಡಿಸಿಕೊಳ್ಳಬೇಕಾಗಿರುತ್ತದೆ. ಆದ್ದರಿಂದ ಕೊಳಚೆ ಪ್ರದೇಶದಲ್ಲಿನ 262 ಕುಟುಂಬಗಳಿಗೆ ಪುನರ್ ವಸತಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಹುಬ್ಬಳ್ಳಿ–ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರವು ದಿನಾಂಕ: 29.12.2008 ರಂದು ನಡೆದ ಸಭೆಯ ವಿಷಯ ಸಂಖ್ಯೆ. 7 ರಲ್ಲಿ ಧಾರವಾಡ ಕಂಬಾರ–ಗಣವಿ ವರೆಗೆ ಜೋಡಿ ರೈಲ್ವೆ ಮಾರ್ಗದ ಅಭಿವೃದ್ಧಿ ಭೂ ಸ್ವಾಧೀನ ಪ್ರಕ್ರಿಯೆಯಡಿಯಲ್ಲಿನ ಬರುವ 262 ಕೊಳಚೆ ನಿವಾಸಿಗಳಿಗೆ ಪ್ರಾಧಿಕಾರವು ನಿರ್ಮಿಸಿರುವ ಲಕಮನಹಳ್ಳಿ ವಸತಿ ಬಡಾವಣೆಯಲ್ಲಿ 20x30 ಅಳತೆಯ ನಿವೇಶಗಳನ್ನು ಸರ್ಕಾರವು ನಿಗದಿಪಡಿಸಿರುವ ರೂ.20,800.00 ಮೊತ್ತಕ್ಕಿಂತ ಶೇ.10 ರಷ್ಟು ಹೆಚ್ಚಿನ ಮೊತ್ತವನ್ನು ಪ್ರಾಧಿಕಾರಕ್ಕೆ ಪಾವತಿಸಿಕೊಂಡು ಹಂಚಿಕೆ ಮಾಡಲು ನಿರ್ಣಯಿಸಿರುತ್ತದೆ.

ಅದರಂತೆ, ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 51 ಬೆಮಪ್ರಾ 2009, ಬೆಂಗಳೂರು, ದಿನಾಂಕ: 17ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದ ಲಕ್ಕಮನಹಳ್ಳಿ ಗ್ರಾಮದ ರಿ.ಸರ್ವೆ ನಂ. 165/ಅ/166 ರಲ್ಲಿ ಅಭಿವೃದ್ಧಿ ಪಡಿಸಿರುವ ವಸತಿ ಬಡಾವಣೆಯಲ್ಲಿ 20x30 ಅಳತೆಯ 364 ಖಾಲಿ ನಿವೇಶನಗಳನ್ನು ಪ್ರತಿ ನಿವೇಶನಕ್ಕೆ ಸರ್ಕಾರವು ನಿಗದಿಪಡಿಸಿರುವ ದರ ರೂ.20,800/– ಮೊತ್ತಕ್ಕಿಂತ ಶೇ.10 ರಷ್ಟು ಹೆಚ್ಚಿನ ದರ ವಿಧಿಸಿ ಅತ್ತಿಕೊಳ್ಳ ಗ್ರಾಮದಲ್ಲಿ ರೈಲ್ವೆ ಹಳಿ ವಿಸ್ತರಣೆ ಮತ್ತು ಅಭಿವೃದ್ಧಿ ಕಾಮಗಾರಿಗಳಿಗಾಗಿ ನಿವೇಶನ ಕಳೆದುಕೊಳ್ಳುವ 262 ಕೊಳಚೆ ನಿವಾಸಿಗಳಿಗೆ ಪುನರ್ ವಸತಿ ಕಲ್ಪಿಸುವ ಉದ್ದೇಶಕ್ಕಾಗಿ ಹಂಚಿಕೆ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1611

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಚಿತ್ರದುರ್ಗ ಜಿಲ್ಲೆ, ಹಿರಿಯೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I) ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ:ನಅಇ 01 ಬೆಂರೂಪ್ರಾ 2008 ದಿ:13.02.2008.
2) ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ ಚಿತ್ರದುರ್ಗ ಇವರ ಪತ್ರ ಸಂ:ನಯೋಚಿ/ಸನಿ/ಹಿರಿಯೂರು/ಮಯೋ.ಪ/08–09/637 ದಿನಾಂಕ:12.02.2009.
3) ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂ.ನಯೋ (13)/ಜಂನಿ(ಬೆಂ.ವಿ) ಮಯೋ(ಪರಿಷ್ಕೃತ–I) ಅಂತಿಮ/555/2008–09 ದಿನಾಂಕ:1.04.2009.

**ಪ್ರಸ್ತಾವನೆ:**

ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹಿರಿಯೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I)ಕ್ಕೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಪತ್ರದಲ್ಲಿ ನಗರ ಯೋಜನಾ ಸಹಾಯಕ ನಿರ್ದೇಶಕರು, ಚಿತ್ರದುರ್ಗ ಇವರು ಹಿರಿಯೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I)ರ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ಶಿಫಾರಸ್ಸಿನೊಂದಿಗೆ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ನಗರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಹಿರಿಯೂರು ಪಟ್ಟಣದ ಜನಸಂಖ್ಯೆಯು 2021 ರಲ್ಲಿ 1,00,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ

(ಪರಿಷ್ಕೃತ–I) ಯನ್ನು ತಯಾರಿಸಲಾಗಿದೆ ಹಿರಿಯೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 2734.74 ಹೆಕ್ಟೇರ್ ಪ್ರದೇಶದಲ್ಲಿ 1520.92 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನೆ (ಪರಿಷ್ಕೃತ–I) ಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಹಿರಿಯೂರು ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 1520.92 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 649.51 ಹೆಕ್ಟೇರ್ (ಶೇ.44.97), ವಾಣಿಜ್ಯಕ್ಕಾಗಿ 40.59 ಹೆಕ್ಟೇರ್ (ಶೇ.2.81),, ಕೈಗಾರಿಕೆಗಾಗಿ 122.62 ಹೆಕ್ಟೇರ್ (ಶೇ.8.49) ಸಾರ್ವಜನಿಕ /ಅರೆ ಸಾರ್ವಜನಿಕ ಉಪಯೋಗಕ್ಕಾಗಿ 127.05 ಹೆಕ್ಟೇರ್ (ಶೇ.8.80), ಉದ್ಯಾನವನ/ ಬಯಲು ಜಾಗಗಳಿಗೆ 133.27 ಹೆಕ್ಟೇರ್ (ಶೇ.9.23) ನಾಗರೀಕ ಸೌಲಭ್ಯಕ್ಕಾಗಿ 57.51 ಹೆಕ್ಟೇರ್ (ಶೇ.3.98) ಹಾಗೂ ಸಾರಿಗೆ ಸಂಪರ್ಕ ವಲಯಕ್ಕಾಗಿ 313.68 ಹೆಕ್ಟೇರ್ (ಶೇ.21.72) ಮತ್ತು ಜಲಾವೃತ ಪ್ರದೇಶಕ್ಕಾಗಿ 76.59 ಹೆಕ್ಟೇರ್ ಪ್ರದೇಶ ಒಳಗೊಂಡಿರುತ್ತದೆ. ಮಹಾ ಯೋಜನೆ (ಪರಿಷ್ಕೃತ–I) ಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರಕಲಂ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆ ನೀಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ನಅಇ 106 ಬೆಂರೂಪ್ರಾ 09, ಬೆಂಗಳೂರು, ದಿನಾಂಕ: 16ನೇ ಜೂನ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ–ಹಿರಿಯೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1612 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಕೋಲಾರ ಜಿಲ್ಲೆ, ಮುಳಬಾಗಿಲು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂ:ನಅಇ 355 ಟಿಟಿಪಿ 96 ದಿನಾಂಕ:02.09.1996.

2) ಮುಖ್ಯಾಧಿಕಾರಿ, ಪುರಸಭಾ ಸ್ಥಳೀಯ ಯೋಜನಾ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಪು.ಸ.ಮು. ಮಹಾಯೋಜನೆ:01:07–08 ದಿನಾಂಕ:11.01.2008.

3) ನಗರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ:ನಯೋ(22):ಉನಿ:(ಕೇಕಾ)ಮುಳಬಾಗಿಲು: ಮ.ಯೋ:445:2007–08 ದಿನಾಂಕ:16.02.2009 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕೋಲಾರ ಜಿಲ್ಲೆ ಮುಳಬಾಗಿಲು ಪಟ್ಟಣದ ಪುರಸಭೆ ವ್ಯಾಪ್ತಿಯನ್ನೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಕಾಯ್ದೆ 1961ರ ಕಲಂ 4(ಎ) ರಡಿಯಲ್ಲಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಮುಳಬಾಗಿಲು ಪುರಸಭೆಯ ಯೋಜನಾ ಪ್ರಾಧಿಕಾರವು ಮುಳಬಾಗಿಲು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಕಾಯ್ದೆ 1961ರ ಕಲಂ (5) ಮತ್ತು (10) ರನ್ವಯ ಕ್ರಮ ಜರುಗಿಸಿ ಮಹಾಯೋಜನೆಯನ್ನು ರೂಪಿಸಿ ನಕ್ಷೆ ಹಾಗೂ ವರದಿಗಳೊಂದಿಗೆ, ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸಿರುತ್ತದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಬೆಂಗಳೂರು ರವರು ಮುಳಬಾಗಿಲು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಜನಸಂಖ್ಯೆಯು 2021ರಲ್ಲಿ 1,75,000 ರಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮುಳಬಾಗಿಲು ಸ್ಥಳೀಯ ಯೋಜನಾ ಪ್ರದೇಶದ 850.0 ಹೆಕ್ಟೇರ್ ಪ್ರದೇಶದಲ್ಲಿ 750.0 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದೆ. ಮುಳಬಾಗಿಲು ಪಟ್ಟಣ ಜನಸಂಖ್ಯೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆಯ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ (12) ರನ್ವಯ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ

ನಗರದ ಮುಂದಿನ ಬೆಳವಣಿಗೆಗೆ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಭೂಮಿಯನ್ನು ಕಾಯ್ದಿರಿಸಿ ನಗರೀಕರಣದ ಎಲ್ಲೆಯ 750.0 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 418.52 ಹೆಕ್ಟೇರ್ (ಶೇಕಡ 55.80), ವಾಣಿಜ್ಯಕ್ಕಾಗಿ 36.17 ಹೆಕ್ಟೇರ್ (ಶೇಕಡ 4.80), ಕೈಗಾರಿಕೆಗಾಗಿ 36.68 ಹೆಕ್ಟೇರ್ (ಶೇಕಡ 4.,35), ಸಾರ್ವಜನಿಕ:ಅರೆ ಸಾರ್ವಜನಿಕ ವಲಯಕ್ಕೆ 45.34 ಹೆಕ್ಟೇರ್ (ಶೇಕಡ 6.05), ಉದ್ಯಾನವನ:ಬಯಲು ಜಾಗಗಳಿಗೆ 80.80 ಹೆಕ್ಟೇರ್ (ಶೇಕಡ 10.78), ನಾಗರೀಕ ಸೌಲಭ್ಯಕ್ಕಾಗಿ 0.66 ಹೆಕ್ಟೇರ್ (ಶೇ.0.08) ಹಾಗೂ ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 135.83 ಹೆಕ್ಟೇರ್ (ಶೇಕಡ 18.14) ಜಾಗೆಯನ್ನು ನಿಗದಿಪಡಿಸಲಾಗಿದೆ. ಹಾಗೂ ಮಹಾಯೋಜನೆ ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಿ ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ನಅಇ 78 ಬೆಂರೂಪ್ರಾ 2009, ಬೆಂಗಳೂರು, ದಿನಾಂಕ: 16ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೋಲಾರ ಜಿಲ್ಲೆ, ಮುಳಬಾಗಿಲು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1613

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ರಾಜ್ಯ ಮಹಾನಗರ ಪಾಲಿಕೆಗಳ ಮೇಲುಸ್ತುವಾರಿಗೆ ಪೌರಾಡಳಿತ ಆಯುಕ್ತರನ್ನು ಇಲಾಖಾ ಮುಖ್ಯಸ್ಥರನ್ನಾಗಿ ಅಧಿಕಾರಗಳನ್ನು ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 132 ಎಂಎಲ್ಆರ್ 2008, ದಿನಾಂಕ: 23.08.2008.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 01 ಟಿಸಿಟಿ 2009, ದಿನಾಂಕ: 30.05.2009.

**ಪ್ರಸ್ತಾವನೆ:**

ರಾಜ್ಯದ ಮಹಾನಗರ ಪಾಲಿಕೆಗಳ ಕಾರ್ಯಗಳ ಪರಿಶೀಲನೆಗೆ ದಿನಾಂಕ:20.05.2009 ರಂದು ಮಾನ್ಯ ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ರಾಜ್ಯದ ಮಹಾನಗರ ಪಾಲಿಕೆಗಳಲ್ಲಿ ಕಾರ್ಯ ಬಾಹುಳ್ಯಗಳು ಹೆಚ್ಚಾಗಿದ್ದು ತಾಂತ್ರಿಕ ಮತ್ತು ಆಡಳಿತಾತ್ಮಕ ವಿಷಯಗಳಲ್ಲಿ ಪಾಲಿಕೆಗಳು ಸಲ್ಲಿಸುವ ಪ್ರಸ್ತಾವನೆಗಳನ್ನು ಸಚಿವಾಲಯದ ಮಟ್ಟದಲ್ಲಿ ವಿಶ್ಲೇಷಿಸಿ ನಿರ್ಧರಿಸುವುದಕ್ಕೆ ಅಗತ್ಯವಾದ ತಾಂತ್ರಿಕ ಪರಿಣಿತಿ ಇತ್ಯಾದಿ ಸೌಲಭ್ಯಗಳು ಇಲ್ಲದೆ ಇರುವುದರಿಂದ ಪೌರಾಡಳಿತ ನಿರ್ದೇಶನಾಲಯದಲ್ಲಿ ಅವಶ್ಯಕ ತಾಂತ್ರಿಕ ಮತ್ತು ಆಡಳಿತಾತ್ಮಕವಾಗಿ ಪ್ರಸ್ತಾವನೆಗಳನ್ನು ಪರಿಶೀಲಿಸಲು ಅವಶ್ಯಕ ಸಿಬ್ಬಂದಿ ಮತ್ತಿತರೆ ಸೌಲಭ್ಯಗಳು ಲಭ್ಯವಿರುವುದರಿಂದ ಮಹಾನಗರಪಾಲಿಕೆಗಳಿಗೆ ಪೌರಾಡಳಿತ ನಿರ್ದೇಶನಾಲಯವನ್ನು ಇಲಾಖಾ ಮುಖ್ಯಸ್ಥರನ್ನಾಗಿ ಮಾಡಿ ಅವರ ಮೂಲಕ ಪ್ರಸ್ತಾವನೆಗಳು ಪರಿಶೀಲಿಸಲ್ಪಟ್ಟು ತದನಂತರ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಿದಾಗ ತ್ವರಿತವಾಗಿ ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಾಧ್ಯವಾಗುತ್ತದೆ ಎಂಬ ಒಮ್ಮತದ ಅಭಿಪ್ರಾಯ ಮೂಡಿ ಬಂದಿರುತ್ತದೆ., ಮುಂದುವರೆದು, ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಮೂಲಭೂತ ಸೌಕರ್ಯಗಳನ್ನು ಒದಗಿಸುವ ದೃಷ್ಟಿಯಿಂದ ಎಲ್ಲಾ ಮಹಾನಗರ ಪಾಲಿಕೆಗಳಿಗೂ ವಿಶೇಷ ಅನುದಾನವನ್ನು ಬಿಡುಗಡೆ ಮಾಡಲಾಗಿದ್ದು, ಈ ಪಾಲಿಕೆಗಳು ಈ ಕಾಮಗಾರಿಗಳನ್ನು ಗುಣಾತ್ಮಕ ಹಾಗೂ ಕಾಲಮಿತಿಯೊಳಗೆ ಜಾರಿಗೊಳಿಸಬೇಕಾಗಿರುವುದರಿಂದ ನಗರಪಾಲಿಕೆಗಳ ಮೇಲೆ ಪೌರಾಡಳಿತ ನಿರ್ದೇಶನಾಲಯದ ಉಸ್ತುವಾರಿಯು ಅವಶ್ಯಕವಾಗಿರುತ್ತದೆ.

ಇದಕ್ಕೂ ಮಿಗಿಲಾಗಿ ಈ ಹಿಂದೆಯೇ ಉಲ್ಲೇಖ (1)ರ ಅಧಿಸೂಚನೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ ಉಳಿದ ಮಹಾನಗರ ಪಾಲಿಕೆಗಳಿಗೆ ಅನ್ವಯಿಸುವಂತೆ ಕೆಲವೊಂದು ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸಲಾಗಿದೆ. ಪೌರಾಡಳಿತ ನಿರ್ದೇಶನಾಲಯವು ಕರ್ನಾಟಕ ಮುನಿಸಿಪಾಲಿಟಿ ಕಾಯ್ದೆ 1964ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಹಾನಗರಪಾಲಿಕೆಗಳನ್ನು ಹೊರತುಪಡಿಸಿ ಇನ್ನುಳಿದ ನಗರ ಸ್ಥಳೀಯ ಸಂಸ್ಥೆಗಳ ಕಾರ್ಯ ಚಟುವಟಿಕೆಗಳನ್ನು ನಿಯಂತ್ರಿಸುವ ಸಕ್ಷಮ ಪ್ರಾಧಿಕಾರವಾಗಿ ಕಾರ್ಯ ನಿರ್ವಹಿಸುತ್ತಿದೆ. ಪ್ರಸ್ತುತ ಪೌರಾಡಳಿತ ನಿರ್ದೇಶನಾಲಯವನ್ನು ಉಲ್ಲೇಖ (2) ರಲ್ಲಿನ ದಿನಾಂಕ: 30.05.2009 ರ ತಿದ್ದುಪಡಿಯಂತೆ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ನಿಯಮ 1977ರಲ್ಲಿ ಮಹಾನಗರಪಾಲಿಕೆಗಳ ಮೇಲುಸ್ತುವಾರಿಯ ಉದ್ದೇಶಕ್ಕಾಗಿ ಸದರಿ ನಿಯಮದ ವ್ಯಾಪ್ತಿಯೊಳಗೆ ತರಲಾಗಿದೆ. ಇದರಿಂದಾಗಿ ಪೌರಾಡಳಿತ ನಿರ್ದೇಶಕರು ಶಾಸನಬದ್ಧವಾಗಿ ನಗರ ಪಾಲಿಕೆಗಳ ಕಾರ್ಯ ಕಲಾಪಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳಲು ಅವಕಾಶವನ್ನು ಕಲ್ಪಿಸಿದಂತಾಗಿದೆ.

ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಮಹಾನಗರಪಾಲಿಕೆಗಳು ಒಂದೇ ಪ್ರಾಧಿಕಾರದ ನಿಯಂತ್ರಣಕ್ಕೆ ಒಳಪಡುವುದರಿಂದ ಏಕರೂಪದ ನಗರಾಡಳಿತ ನೀತಿಯನ್ನು (Uniform Urban Governance Policy) ಮತ್ತಷ್ಟು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಸಾಧ್ಯವಾಗುತ್ತದೆ. ಅಂತೆಯೇ ಇನ್ನು ಮುಂದೆ ಬೃಹತ್ ಬೆಂಗಳೂರು ಮಹಾನಗರಪಾಲಿಕೆಯನ್ನು ಹೊರತುಪಡಿಸಿ ರಾಜ್ಯದ ಇನ್ನುಳಿದ ಎಲ್ಲಾ ಮಹಾನಗರಪಾಲಿಕೆಗಳು ಅವರ ಆರ್ಥಿಕ ಪ್ರತ್ಯಾಯೋಜನೆಯನ್ನು ಮೀರಿದಂತಹ ಎಲ್ಲಾ ಪ್ರಸ್ತಾವನೆಗಳನ್ನು ಪೌರಾಡಳಿತ ನಿರ್ದೇಶನಾಲಯದ ಮೂಲಕವೇ ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 30 ಎಬಿಸಿ 2009, ಬೆಂಗಳೂರು, ದಿನಾಂಕ: 22ನೇ ಜೂನ್ 2009**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ:23.08.2008ರ ಅಧಿಕಾರ ಪ್ರತ್ಯಾಯೋಜನೆಯ ಅಧಿಸೂಚನೆಯ ದಿನಾಂಕದಿಂದ ಜಾರಿಗೆ ಬರುವಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ ಇನ್ನುಳಿದ ಎಲ್ಲಾ ಮಹಾನಗರ ಪಾಲಿಕೆಗಳನ್ನು ಪೌರಾಡಳಿತ ನಿರ್ದೇಶಕರ ಆಡಳಿತಾತ್ಮಕ ನಿಯಂತ್ರಣಕ್ಕೆ ಒಳಪಡಿಸಿ, ಇಲಾಖಾ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸಲು ಆದೇಶಿಸಲಾಗಿದೆ. ಅದರಂತೆ ಇನ್ನು ಮುಂದೆ ಎಲ್ಲಾ ಮಹಾನಗರ ಪಾಲಿಕೆಗಳು ಸಕ್ಷಮ ಪ್ರಾಧಿಕಾರವಾಗಿ ಸರ್ಕಾರದ ಹಂತದಲ್ಲಿ ಅನುಮೋದನೆಯಾಗಬೇಕಾದಂತಹ ಈ ಕೆಳಕಂಡ ವಿಷಯಗಳನ್ನು ಒಳಗೊಂಡಂತೆ ಎಲ್ಲಾ ಪ್ರಸ್ತಾವನೆಗಳನ್ನು ಪೌರಾಡಳಿತ ನಿರ್ದೇಶಕರ ಮೂಲಕವೇ ಸರ್ಕಾರಕ್ಕೆ ಸಲ್ಲಿಸುವುದು.

1. ರಾಜ್ಯದ ಮಹಾನಗರ ಪಾಲಿಕೆಗಳ ಆಡಳಿತ ವಿಷಯಗಳಿಗೆ ಸಂಬಂಧಿಸಿದಂತೆ ಪೌರಾಡಳಿತ ನಿರ್ದೇಶಕರು, ಬೆಂಗಳೂರು, ಇವರು ಇಲಾಖಾ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು.
2. ಪಾಲಿಕೆಗಳ ವ್ಯಾಪ್ತಿಯಲ್ಲಿ ಕೈಗೆತ್ತಿಕೊಳ್ಳಲಾಗುವ ಕಾಮಗಾರಿಗಳ ಅಂದಾಜು ಪಟ್ಟಿಗಳ ತಾಂತ್ರಿಕ ಅನುಮೋದನೆಯನ್ನು ಪೌರಾಡಳಿತ ನಿರ್ದೇಶಕರ ಕಛೇರಿಯ ಅಧೀಕ್ಷಕ ಅಭಿಯಂತರರ ಮೂಲಕ ತಾಂತ್ರಿಕ ಅನುಮೋದನೆಯನ್ನು ಪಡೆಯುವುದು.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 01 ಟಿಸಿಟಿ 2009. 30.05.2009ರಲ್ಲಿನ ಆರ್ಥಿಕ ಅಧಿಕಾರಗಳ ಪ್ರತ್ಯಾಯೋಜನೆಯನ್ವಯ ಅಂದಾಜು ಪಟ್ಟಿಗಳು ಮತ್ತು ಟೆಂಡರ್‌ಗಳಿಗೆ ಪೌರಾಡಳಿತ ನಿರ್ದೇಶಕರ ಅನುಮೋದನೆಯನ್ನು ಪಡೆಯುವುದು.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 132 ಎಂಎಲ್‌ಆರ್ 2008, ದಿನಾಂಕ:23.08.2008ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರಗಳನ್ವಯ ಪಾಲಿಕೆಗಳ ಆಡಳಿತಾತ್ಮಕ ವಿಷಯಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸುವುದು.
5. ಪಾಲಿಕೆಗಳ ಏಕರೂಪ ವೃಂದ ಮತ್ತು ನೇಮಕಾತಿ ನಿಯಮಗಳ ಅನುಷ್ಠಾನದ ನಂತರ ಪೌರಾಡಳಿತ ಸೇವೆಯ ಮಾದರಿಯಲ್ಲಿ ಪಾಲಿಕೆಗಳ ನೌಕರರ ಸೇವಾ ವಿಷಯಗಳನ್ನು ಏಕರೂಪದಲ್ಲಿ ನಿರ್ವಹಿಸುವುದು.
6. ಪಾಲಿಕೆಗಳ ವ್ಯಾಪ್ತಿಯಲ್ಲಿ ಕೈಗೆತ್ತಿಕೊಳ್ಳಲಾಗಿರುವ ವಿಶೇಷ ಅನುದಾನದ ಎಸ್‌ಎಫ್‌ಸಿ ಅನುದಾನದ ಇನ್ನಿತರೆ ಯೋಜನೆಗಳ ಕಾರ್ಯಪ್ರಗತಿಯ ವರದಿಗಳನ್ನು ನಿಯಮಿತವಾಗಿ ಪೌರಾಡಳಿತ ನಿರ್ದೇಶಕರಿಗೆ ಸಲ್ಲಿಸುವುದು.
7. ಎಲ್ಲಾ ಪಾಲಿಕೆಗಳಲ್ಲಿ ಓರ್ವ ನೋಡಲ್ ಅಧಿಕಾರಿಯನ್ನು ಗುರುತಿಸಿ ಅವರ ಮೂಲಕ ಆಯುಕ್ತರುಗಳ ಅನುಮೋದನೆಯೊಂದಿಗೆ ಕಾಮಗಾರಿಗಳ ಪ್ರಗತಿ ವರದಿಗಳನ್ನು ಪೌರಾಡಳಿತ ನಿರ್ದೇಶನಾಲಯದಲ್ಲಿ ಅನುಷ್ಠಾನಗೊಳಿಸಿರುವ ವೆಬ್ ಸೈಟ್‌ಗೆ ಮಾಹಿತಿಗಳನ್ನು ಒದಗಿಸುವುದು ಮತ್ತು ಅವುಗಳನ್ನು ಕಾಲಕಾಲಕ್ಕೆ ಉನ್ನತೀಕರಿಸುವುದು.
8. ಕಾಲಕಾಲಕ್ಕೆ ಸರ್ಕಾರವು ನಿರ್ದೇಶಿಸುವ ಇನ್ನಿತರೆ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಪಾಲಿಕೆಗಳು ಪೌರಾಡಳಿತ ನಿರ್ದೇಶಕರ ಮೂಲಕ ಮತ್ತು ಅವರ ನಿರ್ದೇಶನದಲ್ಲಿ ಕಾರ್ಯನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1615

**ಎಂ.ಆರ್. ಮಹೇಶ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿತ ಕಾಮಗಾರಿಗಳನ್ನು ಕರ್ನಾಟಕ ಭೂಸೇನಾ ನಿಗಮದ ವತಿಯಿಂದ ಅನುಷ್ಠಾನಗೊಳಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 37 ಎಸ್.ಎಫ್.ಸಿ 2008, ದಿನಾಂಕ: 21.08.2008.

2) ಸರ್ಕಾರಿ ಆದೇಶ ಸಂ. ನಅಇ 42 ಎಫ್.ಎಫ್.ಸಿ 2008, ದಿನಾಂಕ: 25.09.2008.

3) ಸರ್ಕಾರಿ ಆದೇಶ ಸಂ. ನಅಇ 61 ಜಿಇಎಲ್ 2009, ದಿನಾಂಕ: 21.02.2009.

4) ಸರ್ಕಾರಿ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ 567 ಎಫ್‌ಸಿ–3/07 ದಿನಾಂಕ: 07.01.2008.

**ಪ್ರಸ್ತಾವನೆ:**

ಮೇಲೆ ಓದಲಾದ(1) ಮತ್ತು (2)ರ ಆದೇಶದಲ್ಲಿ 2008–09ನೇ ಸಾಲಿನಲ್ಲಿ ಹಂಚಿಕೆಯಾಗಿರುವ ಎಸ್.ಎಫ್.ಸಿ ಮುಕ್ತನಿಧಿ ಅನುದಾನವನ್ನು ತುರ್ತಾಗಿ ಹಾಗೂ ಕಾಲಮಿತಿಯೊಳಗಾಗಿ ಪರಿಣಾಮಕಾರಿ ಹಾಗೂ ಗುಣಾತ್ಮಕವಾಗಿ ಅನುಷ್ಠಾನ ಮಾಡಲು ಅನುಕೂಲವಾಗುವಂತೆ ನಗರ ಸ್ಥಳೀಯ ಸಂಸ್ಥೆಗಳ ನಿರ್ಣಯದ ಆಧಾರದ ಮೇಲೆ ಸದರಿ ಕಾಮಗಾರಿಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಲೋಕೋಪಯೋಗಿ ಇಲಾಖೆ ಹಾಗೂ ನಿರ್ಮಿತಿ ಕೇಂದ್ರಗಳ ಮುಖಾಂತರ ನಿರ್ವಹಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ 2008–09ನೇ ಸಾಲಿನಲ್ಲಿ ಹಂಚಿಕೆಯಾಗಿರುವ ಎಸ್.ಎಫ್.ಸಿ.ಮುಕ್ತನಿಧಿ ಅನುದಾನದಲ್ಲಿ ಕಾಮಗಾರಿಗಳ ಅನುಷ್ಠಾನವನ್ನು ಕೈಗೊಳ್ಳಲು ನಗರ ಸ್ಥಳೀಯ ಸಂಸ್ಥೆಗಳ ನಿರ್ಣಯದ ಆಧಾರದ ಮೇಲೆ ಸದರಿ ಕಾಮಗಾರಿಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಲೋಕೋಪಯೋಗಿ ಇಲಾಖೆ, ನಿರ್ಮಿತಿ ಕೇಂದ್ರ ಹಾಗೂ ಕರ್ನಾಟಕ ಭೂ ಸೇನಾ ನಿಗಮದ ಮುಖಾಂತರ ನಿರ್ವಹಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.

ಕರ್ನಾಟಕ ಭೂಸೇನಾ ನಿಗಮವು ಸಹಾ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವ ನಿಟ್ಟಿನಲ್ಲಿ ಪರಿಣತಿ ಹೊಂದಿರುವ ನಿಟ್ಟಿನಲ್ಲಿ ಈಗಾಗಲೇ ನಿಗದಿಮಾಡಿರುವ ಇಲಾಖೆಗಳ/ಸಂಸ್ಥೆಗಳ ಜೊತೆಗೆ ಕರ್ನಾಟಕ ಭೂಸೇನಾ ನಿಗಮವನ್ನು ಸಹಾ ಸೇರಿಸಿ 2008–09ನೇ ಸಾಲಿನ ಎಸ್.ಎಫ್.ಸಿ. ವಿಶೇಷ ಅನುದಾನದ ಕಾಮಗಾರಿಗಳನ್ನು ಒಳಪಡಿಸಿ, ಮಾರ್ಪಾಡು ಆದೇಶ ಹೊರಡಿಸಲು ಕೋರಿ ಪೌರಾಡಳಿತ ನಿರ್ದೇಶಕರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 61 ಜಿಇಎಲ್ 2009, ಬೆಂಗಳೂರು, ದಿನಾಂಕ: 23ನೇ ಜೂನ್ 2009**

ಇದೇ ಸಮ ಸಂಖ್ಯೆಯ ಆದೇಶ ದಿನಾಂಕ: 18.6.2009ರನ್ನು ಕೂಡಲೆ ಹಿಂದಕ್ಕೆ ಪಡೆಯಲಾಗಿದೆ ಹಾಗೂ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಿಗೆ ರಾಜ್ಯ ಹಣಕಾಸು ಆಯೋಗದ ಅನುದಾನದ ಕಾಮಗಾರಿಗಳನ್ನು ಶೀಘ್ರ ಅನುಷ್ಠಾನಗೊಳಿಸಲು ನಗರ ಸ್ಥಳೀಯ ಸಂಸ್ಥೆಗಳು ಆರ್ಥಿಕ ಇಲಾಖೆಯ ಪಾರದರ್ಶಕತೆ ನಿಯಮದಡಿಯಲ್ಲಿಯ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 567 ಎಫ್‌ಸಿ–3/07, ಬೆಂಗಳೂರು, ದಿನಾಂಕ: 07.01.2008ಗೆ ಒಳಪಟ್ಟಿರುವ ಕಾಮಗಾರಿಗಳನ್ನು ಕರ್ನಾಟಕ ಭೂಸೇನಾ ನಿಗಮದ ವತಿಯಿಂದ ನಗರ ಸ್ಥಳೀಯ ಸಂಸ್ಥೆಗಳ ಹಾಗೂ ಜಿಲ್ಲಾಧಿಕಾರಿಗಳ ಸಹಮತಿಯ ಮೇರೆಗೆ ಎಲ್ಲಾ ಕಾಮಗಾರಿಗಳನ್ನು ನಿರ್ವಹಿಸಲು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1616

**ಸಿ.ಆರ್. ರವೀಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I) ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ:ನಅಇ 78 ಬೆಂರೂಪ್ರಾ 2006 ದಿ:12.07.2006.
2) ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಚಿತ್ರದುರ್ಗ ಇವರ ಪತ್ರ ಸಂ:ಚಿನಪ್ರಾ/ನಯೋ/718/ಮಯೋ.ಪ–1:2008–09 ದಿ:25.02.2009.
3) ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂ.ನಯೋ (13)/ಜಂನಿ(ಬೆಂ.ವಿ) ಮಯೋ(ಪರಿಷ್ಕೃತ–I) ಅಂತಿಮ/563/2008–09 ದಿನಾಂಕ:1.04.2009.

**ಪ್ರಸ್ತಾವನೆ:**

ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಚಿತ್ರದುರ್ಗ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I)ಕ್ಕೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಚಿತ್ರದುರ್ಗ ಇವರು ಚಿತ್ರದುರ್ಗ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I)ರ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ಶಿಫಾರಸ್ಸಿನೊಂದಿಗೆ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ನಗರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಚಿತ್ರದುರ್ಗ ನಗರದ ಜನಸಂಖ್ಯೆಯು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ–I) ಯನ್ನು ತಯಾರಿಸಲಾಗಿದೆ ಚಿತ್ರದುರ್ಗ ನಗರದ ಸ್ಥಳೀಯ ಯೋಜನಾ ಪ್ರದೇಶದ 13123.40 ಹೆಕ್ಟೇರ್ ವಿಸ್ತೀರ್ಣದಲ್ಲಿ 2964.268 ಹೆಕ್ಟೇರ್ ಪ್ರದೇಶವನ್ನು

ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನೆ (ಪರಿಷ್ಕೃತ–I) ಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಚಿತ್ರದುರ್ಗ ನಗರದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಪ್ರದೇಶದಲ್ಲಿ ವಸತಿಗಾಗಿ 1163.037 ಹೆಕ್ಟೇರ್ (ಶೇ.43.35), ವಾಣಿಜ್ಯಕ್ಕಾಗಿ 119.719 ಹೆಕ್ಟೇರ್ (ಶೇ.4.46), ಕೈಗಾರಿಕೆಗಾಗಿ 318.907 ಹೆಕ್ಟೇರ್ (ಶೇ.11.89) ಸಾರ್ವಜನಿಕ /ಅರೆ ಸಾರ್ವಜನಿಕ ಉಪಯೋಗಕ್ಕಾಗಿ 226.311 ಹೆಕ್ಟೇರ್ (ಶೇ.8.43), ಉದ್ಯಾನವನ/ ಬಯಲು ಜಾಗಗಳಿಗೆ 101312 ಹೆಕ್ಟೇರ್ (ಶೇ.11.63) ಹಾಗೂ ಸಾರಿಗೆ ಸಂಪರ್ಕ ವಲಯಕ್ಕಾಗಿ 437.799 ಹೆಕ್ಟೇರ್ (ಶೇ.17.66) ನಾಗರೀಕ ಸೌಲಭ್ಯಕ್ಕಾಗಿ 37.034 ಹೆಕ್ಟೇರ್ (ಶೇ.1.38) ಮತ್ತು ಜಲಾವೃತ್ತ ಪ್ರದೇಶವಾಗಿ 32.260 ಹೆಕ್ಟೇರ್ (ಶೇ 1.20) 213.00 ಹೆಕ್ಟೇರ್ ಸಂರಕ್ಷಿತ ಪ್ರದೇಶವೆಂದು, ಹಾಗೂ 68.10 ಹೆಕ್ಟೇರ್ ವಿಸ್ತೀರ್ಣದ ಹಾಲಿ ಚೋಳಗುಡ್ಡದ ಪ್ರದೇಶ ಒಳಗೊಂಡಂತೆ ನಿಗದಿಪಡಿಸಲಾಗಿದೆ. ಮಹಾ ಯೋಜನೆ (ಪರಿಷ್ಕೃತ–I) ಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆ ನೀಡುವಂತೆಯನ್ನು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ನಅಇ 105 ಬೆಂರೂಪ್ರಾ 09, ಬೆಂಗಳೂರು, ದಿನಾಂಕ: 19ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ–ಚಿತ್ರದುರ್ಗ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–I) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1617

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿನ ಶ್ರೀ ಶಿವಣ್ಣ, ವಾಹನ ಚಾಲಕ ಮತ್ತು ಶ್ರೀ ಕೆ.ಎನ್. ಲಿಂಗಣ್ಣಗೌಡ, ದ್ವಿ.ದ.ಸ., ಇವರುಗಳ ಸೇವೆಯನ್ನು ದಿನಾಂಕ:30.07.88 ರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ರವರ ಪತ್ರ ಸಂಖ್ಯೆ:ಶಿನಪ್ರಾ/ಸಿಬ್ಬಂದಿ/ವಿವ/57/2007–08/878 ದಿನಾಂಕ:22.8.2007.
2) ಕರ್ನಾಟಕ ಉಚ್ಛ ನ್ಯಾಯಾಲಯದ (ರಿಟ್ ಅರ್ಜಿ ಸಂಖ್ಯೆ:17862/2005 ಎಸ್.ಆರ್.ಇ.ಜಿ) ರ ಆದೇಶ ದಿನಾಂಕ:14.6.2007.
3) ಶ್ರೀ ಶಿವಣ್ಣ ಮತ್ತು ಶ್ರೀ ಲಿಂಗಣ್ಣಗೌಡ ರವರುಗಳು ದಿನಾಂಕ:11.12.2008 ಪತ್ರ ದಿನಾಂಕ:12.12.2007 ರಂದು ಸಲ್ಲಿಸಿದ ಲಿಖಿತ ಮನವಿ ಅರ್ಜಿಗಳು.

**ಪ್ರಸ್ತಾವನೆ:**

ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಶ್ರೀ ಶಿವಣ್ಣ, ವಾಹನ ಚಾಲಕರು ಹಾಗೂ ಶ್ರೀ ಕೆ.ಎನ್. ಲಿಂಗಣ್ಣಗೌಡ, ದ್ವಿ.ದ.ಸ., ರವರುಗಳು ಮೂಲತಃ ಕ್ರಮವಾಗಿ ದಿನಾಂಕ:20.04.1987 ರಂದು ಹಾಗೂ 7.1.1986 ರಿಂದ ದಿನಗೂಲಿ ನೌಕರರಾಗಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕ್ರಮವಾಗಿ ವಾಹನ ಚಾಲಕ ಹಾಗೂ ಅಕ್ಷರಸ್ಥ ಸಹಾಯಕ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಾ ಬಂದಿದ್ದು, ಸದರಿ ನೌಕರರುಗಳ ಸೇವೆಯನ್ನು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ದಿನಾಂಕ:20.2.1992ರಲ್ಲಿ ಜರುಗಿದ ಸಭೆಯಲ್ಲಿ ಕೈಗೊಂಡ ತೀರ್ಮಾನದಂತೆ ಸದರಿ ನೌಕರರುಗಳನ್ನು ದಿನಾಂಕ:30.07.1988 ರಿಂದ ಪ್ರಾಧಿಕಾರದಲ್ಲಿ ಖಾಲಿ ಇದ್ದ ವಾಹನ ಚಾಲಕ ಮತ್ತು ದ್ವಿ.ದ.ಸ., ಹುದ್ದೆಗಳಿಗೆ ಎದುರಾಗಿ ಸಕ್ರಮಗೊಳಿಸಲಾಗಿರುತ್ತದೆ. ಆದರೆ, ಸದರೀ ಸಕ್ರಮಾತಿಯ ಆದೇಶವನ್ನು ಅನುಮೋದಿಸಲು ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ರವರು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಗೆ ಸಂಬಂಧಿಸಿದಂತೆ, ಸರ್ಕಾರವು ಶ್ರೀ ಶಿವಣ್ಣ ರವರಿಗೆ ಸಂಬಂಧಿಸಿದಂತೆ, ಪತ್ರದ ಸಂಖ್ಯೆ:ನಅಇ 134 ಅಪ್ರಾಸೇ 98 ದಿನಾಂಕ:25.3.1999ರಲ್ಲಿ ಈ ನೌಕರರ ಸೇವೆಯನ್ನು ದಿನಾಂಕ:1.4.1995 ರಿಂದ ಸಕ್ರಮಗೊಳಿಸಿ, ಆರ್ಥಿಕ ಸೌಲಭ್ಯಗಳನ್ನು ನೀಡುವಂತೆ ಮತ್ತು ಶ್ರೀ ಕೆ.ಎನ್. ಲಿಂಗಣ್ಣಗೌಡ, ದ್ವಿ.ದ.ಸ., ಅವರಿಗೆ ಸಂಬಂಧಿಸಿದಂತೆ, ಪತ್ರದ ಸಂಖ್ಯೆ:ನಅಇ 162 ಅಪ್ರಾಸೇ 1999

ದಿನಾಂಕ:8.11.1999 ರಲ್ಲಿ ಈ ನೌಕರರ ಸೇವೆಯನ್ನು ದಿನಾಂಕ:7.1.1996 ರಿಂದ ಸಕ್ರಮಗೊಳಿಸಲು ಕ್ರಮವಹಿಸುವಂತೆ ಆದೇಶಿಸಿರುತ್ತದೆ.

ಆದುದರಿಂದ, ಈ ಬಗ್ಗೆ ಪ್ರಸ್ತಾವನೆಯಲ್ಲಿನ ನೌಕರರುಗಳು ಮೇಲ್ಕಂಡ ಆದೇಶಗಳ ವಿರುದ್ಧ ಮೇಲೆ ಓದಲಾದ ಕ್ರಮ ಸಂಖ್ಯೆ (2)ರನ್ವಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು (ರಿಟ್ ಅರ್ಜಿ ಸಂಖ್ಯೆ:17862/2005 ಎಸ್.ಆರ್.ಇ.ಜಿ) ದಿನಾಂಕ: 14.6.2007 ರಂದು ನೀಡಿದ ತೀರ್ಪಿನಲ್ಲಿ ಬಹು ಮುಖ್ಯವಾಗಿ ಈ ಕೆಳಕಂಡಂತೆ ಆದೇಶ ನೀಡಿರುತ್ತದೆ.

" (i) Petitioners herein are permitted to submit their additional detailed representations with all necessary authenticated documents along with copy of notification/order/circular that is applicable to their case for regularization from 1st April 1985 and 6th July 1985 respectively. Within four weeks from the date of receipt of a copy of this order;

(ii) if such representations are filed by petitioners herein, Respondents herein are directed to receive the same and pass appropriate order in accordance with law and in the light of the case made out by these petitioners and dispose of the same, as expeditiously as possible, within four months from the date of receipt of representation from petitioners."

ಮೇಲ್ಕಂಡಂತೆ ಮಾನ್ಯ ಉಚ್ಚ ನಾಯಾಲಯವು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಅರ್ಜಿದಾರ ನೌಕರರುಗಳಾದ ಶ್ರೀ ಶಿವಣ್ಣ ರವರು ದಿನಾಂಕ:11.12.2007 ರಂದು ಮತ್ತು ಶ್ರೀ ಕೆ.ಎನ್.ಲಿಂಗಣ್ಣಗೌಡ ರವರು ದಿನಾಕ:12.12.2008ರಂದು ಮೇಲೆ ಓದಲಾದ ಕ್ರಮ ಸಂಖ್ಯೆ (3)ರನ್ವಯ ಸಲ್ಲಿಸಿದ ಮನವಿ ಅರ್ಜಿಗಳಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ದಿನಾಂಕ:30.07.1988 ರಿಂದ ಖಾಲಿ ಇದ್ದ ವಾಹನ ಚಾಲಕ ಹಾಗೂ ದ್ವಿ.ದ.ಸ., ಹುದ್ದೆಗಳಲ್ಲಿ ಅರ್ಜಿದಾರರುಗಳಾದ ತಮ್ಮ ದಿನಗೂಲಿ ಸೇವೆಯನ್ನು ಪ್ರಾಧಿಕಾರವು ದಿನಾಂಕ:20.02.1992ರಲ್ಲಿ ಜರುಗಿದ ಸಭೆಯಲ್ಲಿ ಸಕ್ರಮಗೊಳಿಸಲು ತೀರ್ಮಾನ ಕೈಗೊಂಡಿರುವುದನ್ನು ಸ್ಥಿರೀಕರಿಸಲು ಸರ್ಕಾರದ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಅರ್ಜಿದಾರರುಗಳಾದ ಶ್ರೀ ಶಿವಣ್ಣ ಹಾಗೂ ಕೆ.ಎನ್. ಲಿಂಗಣ್ಣಗೌಡ ರವರುಗಳ ಕೋರಿಕೆ ಮೇರೆಗೆ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ:14.06.2007 ರಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ದಿನಾಂಕ:12.12.2008 ರಂದು ವೈಯಕ್ತಿಕ ವಿಚಾರಣಾ ಅವಕಾಶವನ್ನು ನೀಡಿದ್ದು, ಸದರಿ ನೌಕರರುಗಳು ಸಲ್ಲಿಸಿದ ದಾಖಲೆಗಳು ಹಾಗೂ ನೀಡಿರುವ ಲಿಖಿತ ಮನವಿ ಅರ್ಜಿಗಳಲ್ಲಿ ಸರ್ಕಾರವು ಶ್ರೀ ನಿತ್ಯಾನಂದರಾವ್ ಜಾದವ್ 'ಡಿ' ಗ್ರೂಪ್ ನೌಕರರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ರವರನ್ನು ಪ್ರಾಧಿಕಾರದಲ್ಲಿ ಸದರಿ ಹುದೆ ಖಾಲಿ ಇದ್ದ ದಿನಾಂಕದಿಂದಲೇ ಜಾರಿಗೆ ಬರುವಂತೆ ಪತ್ರದ ಸಂಖ್ಯೆ:ನಅಇ 91 ಬೆಂರೂಪ್ರಾ 2008 ದಿನಾಂಕ:19.2.2008ರಲ್ಲಿ ಆದೇಶ ನೀಡಿರುತ್ತದೆ. ಅದೇ ರೀತಿ ನಮ್ಮಗಳ ಸೇವೆಯನ್ನು ಸಹ ಪ್ರಾಧಿಕಾರದಲ್ಲಿ ಸದರಿ ವಾಹನ ಚಾಲಕ ಮತ್ತು ದ್ವಿ.ದ.ಸ., ಹುದ್ದೆಗಳು ಖಾಲಿ ಇದ್ದ ದಿನಾಂಕದಿಂದ ಅಂದರೆ 30.7.1988 ರಿಂದ ಜಾರಿಗೆ ಬರುವಂತೆ ಪ್ರಾಧಿಕಾರವು ಸಕ್ರಮಗೊಳಿಸಿ ವೇತನ ಇನ್ನಿತರೇ ಆರ್ಥಿಕ ಸೌಲಭ್ಯಗಳನ್ನು ನಮಗೂ ನೀಡಲು ಸರ್ಕಾರದ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ. ಈ ಪ್ರಕರಣವನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 260 ಅಪ್ರಾ 2005, ಬೆಂಗಳೂರು, ದಿನಾಂಕ: 1ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ದಿನಗೂಲಿ ಮೇರೆಗೆ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಶಿವಣ್ಣ, ವಾಹನ ಚಾಲಕರು ಹಾಗೂ ಶ್ರೀ ಕೆ.ಎನ್.ಲಿಂಗಣ್ಣಗೌಡ, ದ್ವಿ.ದ.ಸ., ರವರುಗಳ ಸೇವೆಯನ್ನು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಸದರಿ ವಾಹನ ಚಾಲಕ ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳು ಖಾಲಿ ಇದ್ದ ದಿನಾಂಕ:30.07.1988 ರಿಂದ ಜಾರಿಗೆ ಬರುವಂತೆ ಸಕ್ರಮಗೊಳಿಸಿರುವ ಪ್ರಾಧಿಕಾರದ ಕ್ರಮಕ್ಕೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 51ರನ್ವಯ ಸರ್ಕಾರದ ಪೂರ್ವಾನುಮತಿಯನ್ನು ನೀಡಲಾಗಿದೆ.

**ಜಾವೀದ್ ಅಖ್ತರ್**

ಪಿ.ಆರ್. 1618 ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ:** ಶ್ರೀ ಎನ್. ರವಿಶಂಕರ್, ಅಕ್ಷರಸ್ಥ ಸಹಾಯಕ, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ಇವರು ಸೇವೆಯನ್ನು ದಿನಾಂಕ:30.07.88 ರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ರವರ ಪತ್ರ ಸಂಖ್ಯೆ:ಶಿನಪ್ರಾ/ಸಿಬ್ಬಂದಿ/ವಿವ/43/ 2007–08/ದಿನಾಂಕ:27.08.2007.

2) ಸರ್ಕಾರಿ ಆದೇಶ ಸಂಖ್ಯೆ: ನಅಇ 7 ಬೆಂರೂಪ್ರಾ/2001, ದಿನಾಂಕ:13.08.2002.

3) ಕರ್ನಾಟಕ ಉಚ್ಚ ನ್ಯಾಯಾಲಯದ (ರಿಟ್ ಅರ್ಜಿ ಸಂಖ್ಯೆ:17863/2005 (ಎಸ್) ರ ಆದೇಶ ದಿನಾಂಕ: 14.6.2007.

**ಪ್ರಸ್ತಾವನೆ:**

ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ತಮ್ಮ ಪತ್ರದಲ್ಲಿ ಶ್ರೀ ಎನ್. ರವಿಶಂಕರ್‌ರವರು ಈ ಹಿಂದಿನ ನಗರ ಯೋಜನಾ ಪ್ರಾಧಿಕಾರದಲ್ಲಿ ಅಕ್ಷರಸ್ಥ ಸಹಾಯಕರಾಗಿ ದಿನಾಂಕ: 1.1.1985 ರಿದ ದಿನಗೂಲಿ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿದ್ದು, ಪ್ರಾಧಿಕಾರವು ದಿನಾಂಕ: 20.02.1992 ರಲ್ಲಿ ಜರುಗಿದ ಸಭೆಯಲ್ಲಿ ಸದರಿ ನೌಕರರ ಸೇವೆಯನ್ನು ಅಕ್ಷರಸ್ಥ ಸಹಾಯಕ ಹುದ್ದೆ ಪ್ರಾಧಿಕಾರದಲ್ಲಿ ಖಾಲಿ ಇದ್ದ ದಿನಾಂಕದಿಂದ ಅಂದರೆ 30.7.1988 ರಿಂದ ಜಾರಿಗೆ ಬರುವಂತೆ ಸಕ್ರಮಗೊಳಿಸಿದೆ. ಆದರೆ, ಸದರಿ ಸಕ್ರಮಾತಿ ಆದೇಶಕ್ಕೆ ಸರ್ಕಾರದ ಅನುಮೋದನೆ ಪಡೆಯಲು ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದವರು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಉಲ್ಲೇಖ (2)ರ ಆದೇಶದಲ್ಲಿ ಸದರಿ ನೌಕರರಿಗೆ ದಿನಾಂಕ: 1.1.1986 ಕ್ಕಿಂತ ಮೊದಲು ದಿನಗೂಲಿ ಆಧಾರದ ಮೇರೆಗೆ ನೇಮಕಗೊಂಡವರಾಗಿದ್ದು, ಇವರನ್ನು 10 ವರ್ಷಗಳನ್ನು ಪೂರೈಸುವ ಮುನ್ನವೆ ಸಕ್ರಮಗೊಳಿಸಿರುವುದು ನಿಯಮ ಬಾಹಿರವೆಂದು ತಿಳಿಸಿ, ನೌಕರರಿಗೆ ನೀಡಿದ ಹೆಚ್ಚುವರಿ ಆರ್ಥಿಕ ಸೌಲಭ್ಯಗಳನ್ನು ಹಿಂದಕ್ಕೆ ಪಡೆಯುವಂತೆ ಮತ್ತು 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿದ ದಿನಾಂಕದಿಂದ ಸಕ್ರಮಗೊಳಿಸಲು ಅನುಮೋದನೆ ನೀಡಿರುತ್ತದೆ. ಅದರಂತೆ ಪ್ರಾಧಿಕಾರವು ಅಧಿಕೃತ ಜ್ಞಾಪನಾ ದಿನಾಂಕ: 07.09.2002 ರಲ್ಲಿ ದಿನಗೂಲಿ ನೌಕರರಿಗೆ ನೀಡಿರುವ ಆರ್ಥಿಕ ಹೆಚ್ಚುವರಿ ಸೌಲಭ್ಯಗಳನ್ನು ಹಿಂಪಡೆದು ವೇತನವನ್ನು ನಿಗದಿಗೊಳಿಸಿರುತ್ತದೆ.

ಈ ಆದೇಶಗಳ ವಿರುದ್ಧ ನೌಕರರಾದ ಶ್ರೀ ಎನ್. ರವಿಶಂಕರ್‌ರವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 17863/2005 (ಎಸ್) ಸಲ್ಲಿಸಲಾಗಿ, ಮಾನ್ಯ ನ್ಯಾಯಾಲಯವು ದಿನಾಂಕ:14.6.2007ರಂದು ನೀಡಿದ ತೀರ್ಪಿನಲ್ಲಿ ಬಹುಮುಖ್ಯವಾಗಿ ಈ ಕೆಳಕಂಡಂತೆ ಆದೇಶಿಸಿದೆ.

i) The writ petition filed by petitioner is allowed in part;

ii) The order passed by second respondent dated 7th September 2002 bearing No.Shi Na.Pra/ Sibbandi/VVA/72/2002-03 vide annexure G.order dated 1st July 2003 passed by first respondent bearing No.NA.A.E.7/ Bem. Rupra. 2001 vide Annexure H and the order dated 5th September 2003 bearing No.Shi.Na.Pra/Sibbandi/VVA/75/2003-04 passed by second respondent vide Annexure J are hereby set aside and the matter stands remitted back to respondents to reconsider the matter in accordance with law, only in so far as petitioner herein is concerned;

iii) Petitioner herein is directed to submit an additional detailed representation with all necessary authenticated documents for consideration of the request of petitioner for regularization of the services on par with others as directed by this Court in respect of the Co-employees of petitioner herein, as referred above, within four weeks from the date of receipt of a copy of this order;

iv) In case such representation is submitted by petitioner herein, Respondents 1 and 2 are herein are directed to receive the same and pass appropriate order in accordance with law and in the light of the Notification/order/circular issued by Government from time to time that is applicable to petitioner and also in the light of the direction issued by this Court dated 17th January 2003 passed in W.P.No.37662-37664/2002 and dispose of the same, as expeditiously as possible, within an outer limit of four months from the date of receipt of representation from petitioner.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಅರ್ಜಿದಾರರ ಕೋರಿಕೆ ಮೇರೆಗೆ ಈ ಪ್ರಕರಣದಲ್ಲಿ ದಿನಾಂಕ:12.12.2008ರಂದು ಅರ್ಜಿದಾರರಿಗೆ ವೈಯಕ್ತಿಕ ವಿಚಾರಣಾ ಅವಕಾಶ ನೀಡಲಾಗಿ, ಸದರಿ ವಿಚಾರಣಾ ಸಮಯದಲ್ಲಿ ಅರ್ಜಿದಾರರು ಸಲ್ಲಿಸಿದ ಲಿಖಿತ ಮನವಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ (37662 ರಿಂದ 37664/2002) ದಿನಾಂಕ:17.1.2003ರ ಆದೇಶದಲ್ಲಿ ಶ್ರೀ ಡಿ.ಎಂ.ಅಬ್ದುಲ್ ಮುನಾಫ್ ಹಾಗೂ ಇತರರ ಪ್ರಕರಣದಲ್ಲಿ ನ್ಯಾಯಾಲಯವು ನೀಡಿದ ಆದೇಶದ ಹಿನ್ನೆಲೆಯಲ್ಲಿ ತಮ್ಮ ಸೇವೆಯನ್ನು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ದಿನಾಂಕ:20.2.1992ರ ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ಅವರುಗಳ ಸೇವೆಯನ್ನು ದಿನಾಂಕ:20.2.1992ರ ಸಭೆಯಲ್ಲಿ ನಗರಾಭಿವೃದ್ಧಿ ಪ್ರಾಧಿಕಾರವು ಕೈಗೊಂಡ ನಿರ್ಣಯದ ಮೇರೆಗೆ ಹಾಗೂ ಸರ್ಕಾರವು ದಿನಾಂಕ:24.5.2003 ರ ಪತ್ರದಲ್ಲಿ ತಿಳಿಸಿದಂತೆ ಸದರೀ ನೌಕರರುಗಳಿಗೆ ಎಲ್ಲಾ ಆರ್ಥಿಕ ಸೌಲಭ್ಯಗಳನ್ನು ನೀಡಿರುವ ಹಿನ್ನೆಲೆಯಲ್ಲಿ ನನ್ನ ಸೇವೆಯನ್ನು ದಿನಾಂಕ:30.7.1988 ರಿಂದ ಜಾರಿಗೆ ಬರುವಂತೆ ಸಕ್ರಮಗೊಳಿಸಿರುವ ಪ್ರಾಧಿಕಾರದ ಕ್ರಮಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಈ ಪ್ರಕರಣವನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 259 ಅಪ್ರಾ 2005, ಬೆಂಗಳೂರು, ದಿನಾಂಕ: 1ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್. ರವಿಶಂಕರ್, ಅಕ್ಷರಸ್ಥ ಸಹಾಯಕ ಇವರ ದಿನಗೂಲಿ ಸೇವೆಯನ್ನು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಅಕ್ಷರಸ್ಥ ಸಹಾಯಕ ಹುದ್ದೆ ಖಾಲಿ ಇದ್ದು, ದಿನಾಂಕ: 30.7.1988 ರಿಂದ ಜಾರಿಗೆ ಬರುವಂತೆ ಸಕ್ರಮಗೊಳಿಸಿ ಆದೇಶಿಸಿರುವ ಪ್ರಾಧಿಕಾರದ ಕ್ರಮಕ್ಕೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1988ರ ಕಲಂ 51ರನ್ವಯ ಸರ್ಕಾರದ ಪೂರ್ವಾನುಮತಿಯನ್ನು ನೀಡಲಾಗಿದೆ.

**ಜಾವೀದ್ ಅಖ್ತರ್**

ಪಿ.ಆರ್. 1619 ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## INFRASTRUCTURE DEVELOPMENT SECRETARIAT

**Sub:** Natural Gas demand Assessment Studies for Karnataka–Compliation of data by TECSOK.

**Read:**
1. Proceedings of the meeting held on 6.11.2008 under the Chaimanship of Chief Secretary to Govt. of Karnataka
2. Proceedings of the meeting held on 9.4.2009 under the Chairmanship of Principal Secretary to Govt. of Karnataka, IDD
3. MoU for Natural Gas Infrastructure and City Gas Distribution entered in to between GAIL India Ltd., and Infrastructure Development Department on 29.4.2009
4. Letter No.GAIL/BBO/NG/TECSOK/2009/221 dated 16.5.2009 from DGM (Mktg) GAIL India Ltd., addressed to CEO and Chief Adviser, TECSOK
5. Proceedins of the meeting held on 27.5.2009 under the Chairmanship of Princiapal Secretary to Govt. of Karnataka, IDD.
6. Letter No.TECSOK/IDD-NG/2009/270 dated 30.5.2009 from CEO, and Chief Adviser, TECSOK.
7. Letter No. GAIL/BBO/NG/TECSOK/2009/221 dated 30.5.2009 from DGM (Mktg) GAIL India Ltd.,

**Preamble:**

In the proceedings read at (1) above, the following decisions were taken for implementation of projects for transmission and distribution of Natural Gas :-

(i) Infrastructure Development Department (IDD) will be the nodal agency to interact with PNGRB;

(ii) IDD to convene a meeting with M/s. GAIL, Reliance, Adani, GSPC to examine whether the Gujarat model could be adopted;

(iii) IDD to respond PNGRB queries before end of November 2008;

(iv) Right of Way for laying gas pipelines to be given by PWD and local bodies on priority as per the Master Plan approved by PNGR.

2. In the proceedings read at (2) above, a meeting was held with all the concerned departments and GAIL regarding laying Gas Pipeline from Maharashtra Border to Bidadi near Bangalore by GAIL and a decision was taken to request Tecsok to update the market survey report (prepared for GAIL in 2005) and to provide the latest data on future projects. Karnataka Udyoga Mitra (KUM) was advised to identify the location of the proposed industries. GAIL to prepare an MoU to be signed between GAIL and GoK (KSIIDC).

3. Accordingly, an MoU was entered into between GAIL India Ltd., and IDD on 29.4.2009 to undertake jointly for promotion of CNG and PNG in transport and domestic sector and IDD will act as a nodal agency for coordinating all necessary permissions and clearances from various departments/authorities. The role of IDD is limited to facilitate the GAIL to lay the pipeline by providing the land for RoW on payment basis and no additional financial is expected to exchequer of the State

Government. The MoU will be in effect for a period of 3 years, which may be extended with mutual consent.

4. In the letter read at (4) above, GAIL India Ltd., has requested to update the report on market potential for Natural Gas in Karnataka conducted by M/s. Tecsok in 2005 for GAIL India Ltd.,

5. In proceedings read at (5) above, decision was taken to request the Tecsok to update the available information and to furnish a ToR to IDD and the expenditure towards this will be met by IDD.

6. In the letter read at (6) above, Tecsok has sent the proposal for taking up the assignment and also said that it has started the collection of information from Karnataka Udyoga Mitra and Road Transport Corporation. It is said that the professional fee for the assignment is Rs.4.00 lakhs and has requested to release Rs.2.00 lakhs on confirmation of the assignment and the balance on submission of the report.

7. In the letter read at (7) above, GAIL requested to include the information relating to availability of Natural Gas and willingness of existing industries to convert the Natural Gas and also whether the industry is Natural Gas based or needs to be converted to Natural Gas in future.

8. The proposal has been examined in detail and the following orders are issued.

**Government Order No. IDD 14 UIP 2008, Bangalore, Dated: 22nd June 2009**

Approval is hereby given for Tecsok to take up the assignment of compilation of data required to be provided as an input to GAIL and to update the available information and to furnish a Terms of Reference (ToR) to Infrastructure Development Department. ToR should also include the following points:-

(i) To provide the available Natural Gas information for requirement of gas in two categories namely existing and expansion/upcoming/future consumers

(ii) Willingness of existing industries to convert to natural gas, if, willing by which year?

(iii) In respect to expansion/upcoming/future consumers, whether the industry is natural gas based or need based and to be converted to natural gas in future and the likely year of gas consumption.

2. Sanction of the Government is hereby accorded for release of Rs. 2.00 lakhs (Rupees Two lakhs) only to Tecsok towards the assignment. Final cost would be decided based on man-days/hrs to be furnished by Tecsok.

3. This expenditure shall be met from the Head of Account **"3451-00-090-1-06-059-Infrastructure Preliminary Studies Other Expenditure"** out of the budget provision of Rs. 881.00 lakhs in 2009-10.

4. The CEO and Chief Adviser TECSOK is authorized to draw the amount on a Payees Receipt duly countersigned by the Under Secretary to Government, Infrastructure Development Department.

5. This order is issued in accordance with the delegation of powers to the Principal Secretaries/ Secretaries to Govt. vide G.O. No. FD 1 TFP 2008 dated 16.5.2008.

By Order and in the name of the Governor of Karnataka,

**N. MANJULA GEETHA**

P.R. 1620

Under Secretary to Government,

Infrastructure Development Department.

**ಇಂಧನ ಸಚಿವಾಲಯ**

**ವಿಷಯ:** ಮೆ:: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 26 ಎನ್‌ಸಿಇ 1999 ದಿನಾಂಕ: 13.5.1999.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 27.12.2008.

4) ಮೆ:: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಇವರ ಪತ್ರ ಸಂಖ್ಯೆ : ಎಎಂಟಿಎಲ್/ಸಿಟಿಎ/2008–2009 ದಿನಾಂಕ: 6.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 4 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು 5 ವರ್ಷಕ್ಕೆ ಮೇಲ್ಪಟ್ಟ ಯಾವುದೇ ಪ್ರಗತಿ ಸಾಧಿಸದ ಕಂಪನಿಗಳ ಪಟ್ಟಿಯನ್ನು ಕಳುಹಿಸುತ್ತಾ, ಸದರಿ ಕಂಪನಿಗಳ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪಟ್ಟಿಯಲ್ಲಿ ಮೆ :: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿ ಒಂದಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಕಾರಣ ಕೇಳುವ ನೋಟಿಸನ್ನು ಅಭಿವೃದ್ಧಿದಾರರಿಗೆ ಯೋಜನೆಯ ಅನುಷ್ಠಾನನಿಟ್ಟಿನಲ್ಲಿ ಮೆ:: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಯೋಜನೆಯ ಹಂಚಿಕೆಯನ್ನು ಏಕೆ ರದ್ದುಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ನೀಡಲಾಗಿತ್ತು.

ಮೆ:: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯು ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಸದರಿ ನೋಟೀಸಿಗೆ ಉತ್ತರವನ್ನು ಸಲ್ಲಿಸಿರುತ್ತಾರೆ. ಸದರಿ ಉತ್ತರವನ್ನು ಅಭಿವೃದ್ಧಿದಾರರು ಪರಿಶೀಲಿಸಲಾಯಿತು, ಉತ್ತರಗಳು ಸಮರ್ಥನೀಯವಾಗಿರುವುದಿಲ್ಲ. ನಿಗಧಿತ ಅವಧಿಯಲ್ಲಿ ಯೋಜನೆ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ತೆಗೆದುಕೊಳ್ಳದಿರುವುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008, ಬೆಂಗಳೂರು, ದಿನಾಂಕ: 20ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 26 ಎನ್‌ಸಿಇ 1999 ದಿನಾಂಕ: 13.5.1999 ರಲ್ಲಿ ಮೆ:: ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1633

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀಮತಿ ಯು. ವಿನಯರಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂಎಫ್.ಸಿ. ನ್ಯಾಯಾಲಯ, ಚಾಮರಾಜನಗರ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ, ತೃಪ್ತಿಕರವೆಂದು ಘೋಷಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 3.5.2006

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಡಿಪಿಎನ್/ಸಿಶಾ.1/37 (4)/2008–09 ದಿನಾಂಕ 5.3.2009.

**ಪ್ರಸ್ತಾವನೆ:**

ಶ್ರೀಮತಿ ಯು. ವಿನಯರಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಾಮರಾಜನಗರ, ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 3.5.2006 (ಕ್ರ.ಸಂ.40) ಅಧಿಸೂಚನೆಯಲ್ಲಿ

ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ: 12.5.2006ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ದಿನಾಂಕ: 2.5.2008ಕ್ಕೆ ಪೂರ್ಣಗೊಂಡಿರುತ್ತದೆ. ಹುದ್ದೆಗೆ ನಿಗಧಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಒಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯನ್ನು ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣತೆ ಹೊಂದದೆ, ದಿನಾಂಕ: 11.6.2008 ರಂದು ನಡೆದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಸದರಿ ಪರೀಕ್ಷಾ ಫಲಿತಾಂಶವು ದಿನಾಂಕ: 6.11.2008 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುತ್ತದೆ. ಅಧಿಕಾರಿಯವರು ಸದರಿ ಅವಧಿಯಲ್ಲಿ ಇಲಾಖೆಯ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯೂ ಇರುವುದಿಲ್ಲ. ಆದುದರಿಂದ ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಅನ್ವಯ ದಿನಾಂಕ: 12.5.2008 ರಿಂದ 6.11.2008ರವರೆಗೆ ವಿಸ್ತರಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂ. ಒಇ 191 ಪಿಪಿಇ 2009, ಬೆಂಗಳೂರು, ದಿನಾಂಕ: 1ನೇ ಜುಲೈ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1) ರನ್ವಯ ಶ್ರೀಮತಿ ಯು. ವಿನಯರಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಚಾಮರಾಜನಗರ ಅವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 12.5.2008 ರಿಂದ 6.11.2008ರವರೆಗೆ ವಿಸ್ತರಿಸಿ, 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1) (ಎ)ರ ಅನ್ವಯ ದಿನಾಂಕ: 7.11.2008 ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1635

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ ಧಾರವಾಡ ಉಪ ವಿಭಾಗ, ಹುಬ್ಬಳ್ಳಿ–ಧಾರವಾಡರವರು ಅಕ್ರಮ ಆಸ್ತಿ ಹೊಂದಿರುವವರೆಂಬ ಆರೋಪದ ಮೇಲೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿದ್ದು ಲೀನ್‌ನ್ನು ಬದಲಾಯಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಒಇ 299 ಪೊಸಿಪ 2008 ದಿನಾಂಕ: 18–11–2008.

2) ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ : ಸಿಬಿ (5):31:2008–09 ದಿನಾಂಕ: 7.1.2009, ಮತ್ತು 26–03–2009 & 13–5–2009

**ಪ್ರಸ್ತಾವನೆ:**

ಶ್ರೀ ಸಿ. ಕೃಷ್ಣಪ್ಪ, ಡಿವೈ.ಎಸ್.ಪಿ, ಧಾರವಾಡ ಉಪ ವಿಭಾಗ, ಹುಬ್ಬಳ್ಳಿ–ಧಾರವಾಡ ರವರು ನಿಗಧಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದರ ಬಗ್ಗೆ ಖಚಿತ ಮಾಹಿತಿಯ ಹಿನ್ನೆಲೆಯಲ್ಲಿ ಅವರ ವಿರುದ್ಧ ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊ.ಸಂ. 10/2008ರ ಕಲಂ 13(1) (ಇ)) r/w 13(2) ರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ರೀತ್ಯಾ ಪ್ರಕರಣವನ್ನು ದಾಖಲಿಸಿಕೊಳ್ಳಲಾಗಿದ್ದು, ಈ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಮೇಲೆ (1) ರಲ್ಲಿ ಓದಲಾದ ಸರ್ಕಾರದ ದಿನಾಂಕ 18–11–2008ರ ಆದೇಶದಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸಿ. ಕೃಷ್ಣಪ್ಪ, (ಹಿಂದೆ ಡಿವೈ.ಎಸ್.ಪಿ, ಧಾರವಾಡ ಉಪ ವಿಭಾಗ, ಹುಬ್ಬಳ್ಳಿ–ಧಾರವಾಡ) ಪ್ರಸ್ತುತ ಸಹಾಯಕ ನಿರ್ದೇಶಕರು, ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು. ಸದರಿ ಆದೇಶದಲ್ಲಿ ಇವರ ಲೀನ್ ಅನ್ನು ಡಿ.ಸಿ.ಆರ್.ಬಿ. ಚಿತ್ರದುರ್ಗ ಇಲ್ಲಿನ ಡಿವೈ. ಎಸ್.ಪಿ. ಹುದ್ದೆಗೆ ಸ್ಥಳಾಂತರಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ (2) ರಲ್ಲಿ ಓದಲಾದ ಪತ್ರಗಳಲ್ಲಿ ಶ್ರೀ ಎನ್ ರುದ್ರಮುನಿ, ಡಿವೈ. ಎಸ್.ಪಿ. ರವರನ್ನು ಡಿಸಿಆರ್‌ಬಿ, ಚಿತ್ರದುರ್ಗ ಇಲ್ಲಿಗೆ ವರ್ಗಾಯಿಸಿದ್ದು, ಶ್ರೀಯುತರು ಡಿಸಿಆರ್‌ಬಿ, ಚಿತ್ರದುರ್ಗ ಇಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದರಿಂದ, ಪ್ರಸ್ತುತ, ಡಿಸಿಆರ್‌ಬಿ, ಚಿತ್ರದುರ್ಗ ಇಲ್ಲಿ ಡಿವೈ.ಎಸ್.ಪಿ ಹುದ್ದೆ ಖಾಲಿ ಇರುವುದಿಲ್ಲವೆಂದೂ ಶ್ರೀ ಸಿ. ಕೃಷ್ಣಪ್ಪ, ಡಿವೈ. ಎಸ್.ಪಿ. ಅಮಾನತ್ತು ಇವರ ಲೀನನ್ನು ಡಿ.ಸಿ.ಆರ್.ಬಿ. ಬಿಜಾಪುರ ಇಲ್ಲಿಗೆ

ಸ್ಥಳಾಂತರಿಸುವಂತೆ ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 299 ಪೊಸಿಪ 2008, ಬೆಂಗಳೂರು, ದಿನಾಂಕ: 22ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಸಿ. ಕೃಷ್ಣಪ್ಪ, ಡಿವೈ. ಎಸ್.ಪಿ (ಸಿವಿಲ್) (ಹಾಲಿ ಸೇವೆಯಿಂದ ಅಮಾನತ್ತಿನಲ್ಲಿರುವವರು) ಇವರ ಲೀನ್ ಅನ್ನು ಡಿ.ಸಿ.ಆರ್.ಬಿ. ಚಿತ್ರದುರ್ಗದಲ್ಲಿ ರದ್ದುಪಡಿಸಿ ಖಾಲಿಯಿರುವ ಡಿ.ಸಿ.ಆರ್.ಬಿ. ಬಿಜಾಪುರದಲ್ಲಿನ ಡಿವೈ. ಎಸ್.ಪಿ. ಹುದ್ದೆಗೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1636

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಯುದ್ಧ/ಯುದ್ಧದಂತಹ ಕಾರ್ಯಾಚರಣೆಯಲ್ಲಿ ಮಡಿದ/ಗಾಯಗೊಂಡ ಯೋಧರ ಅವಲಂಬಿತರಿಗೆ ಉಚಿತವಾಗಿ ಮನೆ ನಿರ್ಮಿಸಿ ಕೊಡಲು ನೀಡುತ್ತಿರುವ ಅನುದಾನವನ್ನು ಹೆಚ್ಚಿಗೆ ಮಾಡುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ರವರ ಪತ್ರ ಸಂಖ್ಯೆ ಸೈಕಪುಇ/14/ಬಿಸಿ/ಪಾಲಿಸಿ/2009 ದಿನಾಂಕ: 19–8–2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ದಿನಾಂಕ: 10–7–2008 ರಂದು ಘನತೆವೆತ್ತ ರಾಜ್ಯಪಾಲರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಪಾಲರ ರಕ್ಷಣಾ ನಿಧಿಯ ಮ್ಯಾನೇಜಿಂಗ್ ಕಮಿಟಿ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದಂತೆ ಪ್ರಸ್ತುತ ಯುದ್ಧ/ಯುದ್ಧದಂತಹ ಕಾರ್ಯಾಚರಣೆಯಲ್ಲಿ ಮಡಿದ/ಗಾಯಗೊಂಡ ಯೋಧರ ಅವಲಂಬಿತರಿಗೆ ಉಚಿತವಾಗಿ ಮನೆ ನಿರ್ಮಿಸಿ ಕೊಡಲು ರಾಜ್ಯಪಾಲರ ರಕ್ಷಣಾ ನಿಧಿಯಿಂದ ಪ್ರಸಕ್ತ ನೀಡುತ್ತಿರುವ ಅನುದಾನವನ್ನು ಅಧಿಕಾರಿ/ಜೆ.ಸಿ.ಓ ಸ್ ರವರಿಗೆ ರೂ. 4.5 ಲಕ್ಷದಿಂದ ರೂ. 6.0 ಲಕ್ಷ ಗಳಿಗೆ ಹಾಗೂ ಇತರರಿಗೆ ರೂ. 3.0 ಲಕ್ಷದಿಂದ ರೂ. 4.5 ಲಕ್ಷಗಳಿಗೆ ಹೆಚ್ಚಿಸಿ ದಿನಾಂಕ: 1–4–2008 ರಿಂದ ಅನ್ವಯವಾಗುವಂತೆ ಜಾರಿಗೊಳಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ನಿರ್ದೇಶಕರು ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 101 ಕಸೈಸೇ 2008, ಬೆಂಗಳೂರು, ದಿನಾಂಕ: 23ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಯುದ್ಧ/ಯುದ್ಧದಂತಹ ಕಾರ್ಯಾಚರಣೆಯಲ್ಲಿ ಮಡಿದ/ಗಾಯಗೊಂಡ ಯೋಧರ ಅವಲಂಬಿತರಿಗೆ ಉಚಿತವಾಗಿ ಮನೆ ನಿರ್ಮಿಸಿ ಕೊಡಲು ರಾಜ್ಯಪಾಲರ ರಕ್ಷಣಾ ನಿಧಿಯಿಂದ ಪ್ರಸಕ್ತ ನೀಡುತ್ತಿರುವ ಅನುದಾನವನ್ನು ಅಧಿಕಾರಿ/ಜೆ.ಸಿ.ಓಸ್ ಗಳಿಗೆ ರೂ. 4.5 (ನಾಲ್ಕು ಲಕ್ಷ ಐವತ್ತು ಸಾವಿರ) ಲಕ್ಷಗಳಿಂದ ರೂ. 6.0 (ಆರು) ಲಕ್ಷಗಳಿಗೆ ಹಾಗೂ ಇತರರಿಗೆ ಪ್ರಸಕ್ತ ನೀಡುತ್ತಿರುವ ಅನುದಾನವನ್ನು ರೂ. 3.00 (ಮೂರು) ಲಕ್ಷಗಳಿಂದ ರೂ. 4.5 (ನಾಲ್ಕು ಲಕ್ಷ ಐವತ್ತು ಸಾವಿರ) ಲಕ್ಷಗಳಿಗೆ ಹೆಚ್ಚಿಸಲು ಹಾಗೂ ಸದರಿ ವೆಚ್ಚವನ್ನು ಪ್ರಸಕ್ತ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2235–60–200–1–99 (104) ಅಂಶದಾನಗಳು (ಯೋಜನೇತರ) ಇದರ ಅಡಿಯಲ್ಲಿ ಒದಗಿಸಲಾದ ಅನುದಾನದ ಮಿತಿಯೊಳಗೆ ಭರಿಸಬೇಕೆಂಬ ಷರತ್ತಿನೊಂದಿಗೆ ಸರ್ಕಾರದ ಮುಂಜೂರಾತಿಯನ್ನು ನೀಡಿದೆ.

ಮೇಲ್ಕಂಡ ಸೌಲಭ್ಯವು ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 574 ವೆಚ್ಚ–11/2009 ದಿನಾಂಕ: 18–06–2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಲಕ್ಷ್ಮೀನಾರಾಯಣ**

ಪಿ.ಆರ್. 1637

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸಹಾಯಕ ಸೇವೆಗಳು)

## HOME SECRETARIAT

**Sub:** Strengthening of Bangalore City Police Traffic Warden Organization.

**Read:** Letter No.CTRS/98/2007-08 , Dated 04/01/2008 from the DG & IGP, Bangalore.

**Premable:**

The DG & IGP, Bangalore in his letter read above has stated that in Government Order No.HD 14 SHG 84 dated 30/08/1985 sanction was accorded for formation of Bangalore City Traffic Warden

Organization and to incur an expenditure of Rs.30,000/- per annum towards providing complaint cards to the traffic warden for reporting traffic violations to Traffic Police. However with the unprecedented increase in vehicle population and tremendous pressure on the traffic police, he has suggested for strengthening the Bangalore City Traffic Warden Organization so as to make it more effective in supplementing the duties and responsibilities of traffic police particularly with regard to Enforcement, Education, Planning and Traffic Engineering and to increase the lump sum provision of Rs.30,000/- p.a. to Rs. 27.25 lakhs to provide Uniform, TA and DA, Office expenditure etc.,

Primarily the Traffic Warden Organization is a Government sponsored voluntary organization. The annual grant of Rs.30,000/- was initially sanctioned way back when the organization was constituted during 1985. Considering the role of the Bangalore City Police Traffic Warden Organization in assisting Traffic Police, it was felt that there is an urgent need to strengthen the organizational set up and provide additional funds for effective implementation.

Hence this order.

**Government Order No. HD 5 EFS 2008, Bangalore, Dated: 16th June 2009**

In the circumstances explained in the preamble, sanction is accorded to increase the lump-sum provision of Rs.30,000/- p.a. to Rs.3.00 lakhs (Rupees Three lakhs only) per annum, without agreeing to the individual proposals and components with effect from 01/04/2009 during the Financial Year 2009-10.

Above enhanced expenditure shall be met under Budget Head 2055-00-108-0-01-051 General Expenditure.

This order issues with the concurrence of Finance Department vide their U.O. Note No.FD 193 Exp.6/2008 dated 15/04/2008.

By Order and in the name of President of India,

**B.M. LAKSHMINARAYANA**

Under Secretary to Government,

Home Department (Police Expenditure)

P.R. 1638

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಸಿ.ಪಿ. ರವೀಂದ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಂಗಳೂರು, ಗ್ರಾಮಾಂತರ (ಅಮಾನತ್ತಿನಲ್ಲಿರುವವರು) ಇವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವ ಕುರಿತು – ಆದೇಶ.

**ಓದಲಾಗಿದೆ:**

1) ಸಹಾಯಕ ಚುನಾವಣಾಧಿಕಾರಿಗಳು ಹಾಗೂ ಸಹಾಯಕ ಆಯುಕ್ತರು, ಮಂಗಳೂರು ರವರ ಕಛೇರಿಯು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರಿಗೆ ಹೆಸರಿಸಿರುವ ಪತ್ರ ಸಂಖ್ಯೆ ಎ.ಎಲ್.ಎನ್/ಸಿಆರ್(3) 2009–2010 ದಿ: 24–4–2009.
2) ಜಿಲ್ಲಾ ಚುನಾವಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ರವರ ಕಛೇರಿಯ ಪತ್ರ ಸಂಖ್ಯೆ ಎ.ಎಲ್.ಎನ್.(1) ಸಿಆರ್/15/2008–09 ದಿ: 24–4–2009ರ ಫ್ಯಾಕ್ಸ್ ಸಂದೇಶ.
3) ಸರ್ಕಾರದ ಆದೇಶ ಸಂಖ್ಯೆ ಮಮಇ 214 ಎಸ್‌ಜೆಡಿ 2009 ದಿ: 28–4–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿ: 24–4–2009ರ ಸಹಾಯಕ ಚುನಾವಣಾಧಿಕಾರಿಗಳು ಹಾಗೂ ಸಹಾಯಕ ಆಯುಕ್ತರು ಮಂಗಳೂರು ರವರ ಪತ್ರದಲ್ಲಿ 204 ಮಂಗಳೂರು ವಿಧಾನಸಭಾ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಂಟ್ರೋಲ್ ರೂಂನಿಂದ ಮತಗಟ್ಟೆ ಸಂಖ್ಯೆ 41 ರ ಬಿ.ಎಲ್.ಓ ಆದ ಅಂಗನವಾಡಿ ಕಾರ್ಯಕರ್ತೆ ಶ್ರೀಮತಿ ಶಶಿಕಲಾರವರಿಂದ ಮಾಹಿತಿ ಸಂಗ್ರಹಿಸುತ್ತಿರುವ ಸಂದರ್ಭದಲ್ಲಿ ಶ್ರೀಮತಿ ಶಶಿಕಲಾ, ಅಂಗನವಾಡಿ ಕಾರ್ಯಕರ್ತೆರವರ ಮೇಲಾಧಿಕಾರಿಯಾದ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ಅಂಗನವಾಡಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಮೊದಲು ನಿರ್ವಹಿಸಿ ಚುನಾವಣಾ ಕೆಲಸ ಕಾರ್ಯಗಳನ್ನು ನಂತರ ನಿರ್ವಹಿಸಲು ಮತ್ತು ಚುನಾವಣಾ ಕೆಲಸ ನಿರ್ವಹಿಸಲು ನೀಡಿದ ಆದೇಶ ಒದಗಿಸಲು ತಿಳಿಸಿರುವುದಾಗಿ ಮಾಹಿತಿ ಸಂಗ್ರಹಿಸುತ್ತಿರುವ ಶ್ರೀಮತಿ ಚಂದ್ರಕಲಾ ರವರಲ್ಲಿ ಹೇಳಿಕೊಂಡಿರುತ್ತಾರೆಂದು, ಅಂಗನವಾಡಿ ಕಾರ್ಯಕರ್ತೆಯವರಿಗೆ ಸಿ.ಡಿ.ಪಿ.ಓ. ರವರಲ್ಲಿ ಈ ರೀತಿ ಒತ್ತಡ ಹೇರುತ್ತಿರುವುದರಿಂದ

ಚುನಾವಣಾ ಕೆಲಸ ಕಾರ್ಯಗಳಿಗೆ ತೊಂದರೆಯಾಗುವ ಸಂದರ್ಭವಿರುವುದರಿಂದ, ಸಂಬಂಧಪಟ್ಟ ಗ್ರಾಮಾಂತರ ಶಿಶು ಅಭಿವೃದ್ಧಿ ಯೋಜನಾಧಿಕಾರಿಯವರಿಗೆ ಸೂಕ್ತ ನಿರ್ದೇಶನ ನೀಡಬೇಕೆಂದು ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರನ್ನು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿ: 24–4–2009ರ ಜಿಲ್ಲಾ ಚುನಾವಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರ ಫ್ಯಾಕ್ಸ್ ಸಂದೇಶದಲ್ಲಿ ಸಹಾಯಕ ಚುನಾವಣಾಧಿಕಾರಿಗಳು, ಹಾಗೂ ಸಹಾಯಕ ಆಯುಕ್ತರು, ಮಂಗಳೂರು ರವರ ಪ್ರಸ್ತಾವನೆಯಂತೆ, ಶ್ರೀ ಸಿ.ಪಿ.ರವೀಂದ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಇವರು ಚುನಾವಣೆ ಕೆಲಸಕ್ಕೆ ಆದ್ಯತೆ ನೀಡದೆ ಕರ್ತವ್ಯ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅವರನ್ನು ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಜಿಲ್ಲಾ ಚುನಾವಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರ ಪ್ರಸ್ತಾವನೆ/ಶಿಫಾರಸ್ಸನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ:28.04.2009ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ) ರನ್ವಯ ಅಮಾನತ್ತಿನಲ್ಲಿಡಲಾಗಿದೆ.

ಸರ್ಕಾರವು ಶ್ರೀ ಸಿ.ಪಿ. ರವೀಂದ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಂಗಳೂರು ಗ್ರಾಮಾಂತರ (ಅಮಾನತ್ತಿನಲ್ಲಿರುವವರು) ಇವರ ಅಮಾನತ್ತಿನ ಪ್ರಕರಣವನ್ನು ಮರುಪರಿಶೀಲಿಸಿ ಸದರಿಯವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಸದರಿಯವರನ್ನು ಅಮಾನತ್ತಿನಿಂದ ತೆರವುಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 24 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ: 20ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಶ್ರೀ ಸಿ.ಪಿ. ರವೀಂದ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಂಗಳೂರು ಗ್ರಾಮಾಂತರ (ಅಮಾನತ್ತಿನಲ್ಲಿರುವವರು) ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೆಳ್ತಂಗಡಿ ಇಲ್ಲಿನ ಖಾಲಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 1650

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ:** ಅಧಿಕೃತ ಸಭೆಗಳಲ್ಲಿ ನೀಡುವ ಟೀ/ಕಾಫೀ/ಅಲ್ಪೋಪಹಾರದ ಸಲುವಾಗಿ ಮಾಡುವ ವೆಚ್ಚದ ಪರಿಷ್ಕೃತ ಆರ್ಥಿಕ ಮಿತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಸಿಇ2000 ದಿ: 3–1–2001.

2) ಸರ್ಕಾರಿ ಆದೇಶ ಸಂಖ್ಯೆ : ಆಇ:6:ಟಿ.ಸಿ.ಇ. 2005 ದಿ: 3.11.2005.

**ಪ್ರಸ್ತಾವನೆ:**

ಸಾದಿಲ್ವಾರು ವೆಚ್ಚ ಕೈಪಿಡಿ 1958 ರ ನಿಯಮ 55 (51) ರ ಪ್ರಕಾರ ಮುಖ್ಯ ಮಂತ್ರಿಗಳು, ಸಚಿವರು, ರಾಜ್ಯ ಸಚಿವರು, ಉಪ ಸಚಿವರು, ಅಧಿಕಾರಿಗಳು ಹಾಗೂ ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳು ಅಧಿಕೃತ ಸಭೆಗಳಲ್ಲಿ ನೀಡುವ ಟೀ/ಕಾಫಿ/ಅಲ್ಪೋಪಹಾರದ ಸಲುವಾಗಿ ಮಾಡುವ ವೆಚ್ಚದ ಆರ್ಥಿಕ ಮಿತಿಯನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ:3.1.2001ರ ಆದೇಶದಲ್ಲಿ ಪರಿಷ್ಕರಿಸಿ ನಿಗದಿಗೊಳಿಸಲಾಗಿತ್ತು. ಹಾಗೆಯೇ ಸದರಿ ಆದೇಶದ ಕ್ರಮ ಸಂಖ್ಯೆ (5) ರಲ್ಲಿ ನಿಗದಿಗೊಳಿಸಲಾಗಿದ್ದ ಮಿತಿಯನ್ನು ವಾರ್ಷಿಕ 4000/– ರೂ. ಗಳಿಂದ 5000/– ರೂ. ಗಳಿಗೆ ಏರಿಸಿ ಮೇಲೆ (2) ರಲ್ಲಿ ಓದಲಾದ ದಿನಾಂಕ 3.11.2005ರ ಆದೇಶವನ್ನು ಹೊರಡಿಸಲಾಗಿತ್ತು. ದಿನೇ ದಿನೇ ಹೆಚ್ಚುತ್ತಿರುವ ಬೆಲೆ ಏರಿಕೆಯ ಕಾರಣದಿಂದ ಹಾಗೂ ಹೆಚ್ಚು ಹೆಚ್ಚು ಸಭೆಗಳನ್ನು ನಡೆಸಬೇಕಾಗಿರುವುದರಿಂದ ಮತ್ತು ಈ ಮಿತಿಗಳನ್ನು 2001ರಲ್ಲಿ ನಿಗಡಿಪಡಿಸಿರುವುದನ್ನು ಗಮನದಲ್ಲಿರಿಸಿಕೊಂಡು ಮಿತಿಯನ್ನು ಹೆಚ್ಚಿಸುವ ವಿಷಯವನ್ನು ಸರ್ಕಾರವು ಪರಿಶೀಲಿಸಿ ಪರಿಷ್ಕರಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ01 (ಬಾ) ಟಿಸಿಇ 2009, ಬೆಂಗಳೂರು, ದಿನಾಂಕ: 2ನೇ ಜುಲೈ 2009**

ಅಧಿಕೃತ ಸಭೆಗಳಲ್ಲಿ ನೀಡುವ ಟೀ/ಕಾಫಿ/ಅಲ್ಪೋಪಹಾರದ ಸಲುವಾಗಿ ಮುಖ್ಯ ಕಾರ್ಯದರ್ಶಿಗಳು, ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರು ಹಾಗೂ ಇತರೆ ಅಧಿಕಾರಿಗಳು ಮಾಡಬಹುದಾದ ವೆಚ್ಚದ ಮಿತಿಯನ್ನು ಪರಿಷ್ಕರಿಸಿ ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

| | | | |
|---|---|---|---|
| 1. | ಮುಖ್ಯ ಕಾರ್ಯದರ್ಶಿ, ಅಪರ ಮುಖ್ಯ ಕಾರ್ಯದರ್ಶಿ, ಹಾಗೂ ಸಮಾನಾಂತರ ಅಧಿಕಾರಿಗಳು, ಮಹಾ ನಿರ್ದೇಶಕರು, ಹಾಗೂ ಆರಕ್ಷಕ ಮಹಾ ನಿರೀಕ್ಷಕರು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 20,000.00 |
| 2. | ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ವಿಶೇಷ ಕಾರ್ಯದರ್ಶಿಗಳು, ಪ್ರಾದೇಶಿಕ ಆಯುಕ್ತರು, ವಾಣಿಜ್ಯ ತೆರಿಗೆ ಆಯುಕ್ತರು, ಅಬಕಾರಿ ಆಯುಕ್ತರು, ಕೈಗಾರಿಕಾ ಅಭಿವೃದ್ಧಿ ಆಯುಕ್ತರು, ಹಾಗೂ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ನಿರ್ದೇಶಕರು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು, ಮತ್ತು ನಿರ್ದೇಶಕರು, ಅಪರ ಆರಕ್ಷಕ ಮಹಾ ನಿರೀಕ್ಷಕರು, ಆರಕ್ಷಕ ಆಯುಕ್ತರು, ಪ್ರಧಾನ ಮುಖ್ಯ ಅರಣ್ಯಪಾಲಕರು, ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ.15,000.00 |
| 3. | ಅಪರ ಕಾರ್ಯದರ್ಶಿಗಳು, ಜಂಟಿ ಕಾರ್ಯದರ್ಶಿಗಳು, ಮುಖ್ಯ ಮಂತ್ರಿಯವರ ಪತ್ರಿಕಾ ಕಾರ್ಯದರ್ಶಿ, ಇಲಾಖಾ ಮುಖ್ಯಸ್ಥರು (ಮೇಲೆ (2) ರಲ್ಲಿ ತಿಳಿಸಿರುವವರನ್ನು ಹೊರತುಪಡಿಸಿ) | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 10,000.00 |
| 4. | ಜಿಲ್ಲಾಧಿಕಾರಿಗಳು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 15,000.00 |
| 5. | ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳು | ಪ್ರತಿಯೊಂದಕ್ಕೆ ಒಂದು ವರ್ಷಕ್ಕೆ | ರೂ. 5,000.00 |

ನಿಗದಿಪಡಿಸಿರುವ ಪರಿಷ್ಕೃತ ದರಗಳು ಕೂಡಲೇ ಜಾರಿಗೆ ಬರುತ್ತದೆ. ಈ ಬಗ್ಗೆ ಸಾದಿಲ್ವಾರು ವೆಚ್ಚ ಕೈಪಿಡಿ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶಾಮರಾವ್**

ಪಿ.ಆರ್. 1652

ಸರ್ಕಾರದ ಅಧೀನ ಕಾರ್ಯದರ್ಶಿ,

(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ) ಆರ್ಥಿಕ ಇಲಾಖೆ.

**ವಿಷಯ:** ಹೊಸದಾಗಿ ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ಅಬಕಾರಿ ಚೆಕ್‌ಪೋಸ್ಟ್‌ಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಅಬಕಾರಿ ಆಯುಕ್ತರ ಪ್ರಸ್ತಾವನೆ ಸಂಖ್ಯೆ : ಇಸಿಇ/28/ಟಿಎಂಪಿ/2008 ದಿನಾಂಕ: 11.8.08

2) ಸರ್ಕಾರದ ಅಧೀನ ಕಾರ್ಯದರ್ಶಿ (ಸಿಬ್ಬಂದಿ) ರವರ ಟಿಪ್ಪಣಿ ಸಂಖ್ಯೆ: ಸಿಆಸುಇ 11 ಶಿಸಾಸೇ 2009 ದಿನಾಂಕ: 5.6.2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರ ಪತ್ರದಲ್ಲಿ ಅಬಕಾರಿ ಆಯುಕ್ತರು, ರಾಜ್ಯದಲ್ಲಿ ಇತ್ತೀಚೆಗೆ ವಿಷಪೂರಿತ ಮದ್ಯ ಸೇವನೆಯಿಂದ ಆದ ಸಾವು–ನೋವುಗಳ ಹಿನ್ನೆಲೆಯಲ್ಲಿ ಕುಖ್ಯಾತ ಕಳ್ಳಭಟ್ಟಿ ಹಾಗೂ ವಿಷಪೂರಿತ ಮದ್ಯ ಮಾರಾಟ ಕೇಂದ್ರಗಳಿರುವ ಪ್ರದೇಶಗಳಲ್ಲಿ ಹಾಗೂ ಹೊರ ರಾಜ್ಯ ಅಥವಾ ಹೊರ ಜಿಲ್ಲಾ ಪ್ರದೇಶಗಳಿಂದ ವಿಷಪೂರಿತ ಮದ್ಯ ಸರಬರಾಜಾಗುವ ಸ್ಥಳಗಳಲ್ಲಿ 24 ಗಂಟೆಗಳ ಕಾಲ ಕಾರ್ಯ ನಿರ್ವಹಿಸುವ ಚೆಕ್‌ಪೋಸ್ಟ್‌ಗಳನ್ನು ಸ್ಥಾಪಿಸಿದರೆ ವಿಷಪೂರಿತ ಮದ್ಯ ಮಾರಾಟ ಹಾಗೂ ತಯಾರಿಕೆಯನ್ನು ನಿಯಂತ್ರಿಸಬಹುದೆಂದು ಅಭಿಪ್ರಾಯ ವ್ಯಕ್ತಪಡಿಸಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ 03 ಪ್ರದೇಶಗಳಲ್ಲಿ ಚೆಕ್‌ಪೋಸ್ಟ್‌ಗಳನ್ನು ಸ್ಥಾಪಿಸಲು ಅಗತ್ಯವಿರುವ ವಿವಿಧ ವರ್ಗಗಳ 39 ಹುದ್ದೆಗಳನ್ನು ಸೃಜಿಸಲು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ ಅದರನ್ವಯ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಇ 51 ಇಎಎ 2008, ಬೆಂಗಳೂರು, ದಿನಾಂಕ: 17ನೇ ಜೂನ್ 2009**

ಅಬಕಾರಿ ಇಲಾಖೆಯು ನಿರ್ವಹಿಸಬೇಕಾದ ಕರ್ತವ್ಯಗಳಲ್ಲಿ ಒಂದಾದ ವಿಷಪೂರಿತ ಹಾಗೂ ನಕಲಿ ಮದ್ಯ ಮಾರಾಟವನ್ನು ನಿಯಂತ್ರಿಸಲು ಪರಿಣಾಮಕಾರಿಯಾದ ಕ್ರಮ ತೆಗೆದುಕೊಳ್ಳಲು ಈ ಕೆಳಕಂಡ ಅಬಕಾರಿ ಚೆಕ್‌ಪೋಸ್ಟ್‌ಗಳನ್ನು ಸ್ಥಾಪಿಸಲು ಹಾಗೂ ಅಗತ್ಯವಿರುವ ಈ ಕೆಳಕಂಡ ವಿವಿಧ ವರ್ಗಗಳ 39 ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮಾತ್ರ ಸೃಜಿಸಲು ಸರ್ಕಾರವು ಆದೇಶಿಸಿದೆ.

| ಕ್ರ. ಸಂ. | ಚೆಕ್‌ಪೋಸ್ಟ್ ಕಛೇರಿ ಹೆಸರು | ಹುದ್ದೆಗಳ ವಿವರ | | |
|---|---|---|---|---|
| | | ಅಬಕಾರಿ ನಿರೀಕ್ಷಕರು | ಅಬಕಾರಿ ಉಪ ನಿರೀಕ್ಷಕರು | ಅಬಕಾರಿ ರಕ್ಷಕರು |
| 1 | ಬೈಲನರಸಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ | 1 | 2 | 10 |
| 2 | ಕಟ್ಟಿಗೇನಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ | 1 | 2 | 10 |
| 3 | ಅಡಿಗಾರಕಲ್ಲಹಳ್ಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ. | 1 | 2 | 10 |
| | | **3** | **6** | **30** |
| | | **ಒಟ್ಟು 39 ಹುದ್ದೆಗಳು** | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1653

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಅಬಕಾರಿ)

## ಕಾರ್ಮಿಕ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಇಲ್ಲಿಗೆ ಮಂಜೂರು ಮಾಡಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಕೊಪ್ಪ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1) ಆದೇಶ ಸಂಖ್ಯೆ : ಕಾಇ 287 ಇಟಿಐ 2008 (ಭಾಗ) ದಿನಾಂಕ: 06/09/2008.

2) ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ ಉತನಿ/ತರಬೇತಿ/ಯೋ–2/ವಿವ–04/2008–09 ದಿನಾಂಕ 1/10/2008 ಮತ್ತು 6/2/2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ 2008–09ನೇ ಸಾಲಿನಲ್ಲಿ 10 ಸ್ಥಳಗಳಲ್ಲಿ ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿತ್ತು. ಈ 10 ಸ್ಥಳಗಳ ಪೈಕಿ ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿಗೆ ಹೊಸದಾಗಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಮಂಜೂರು ಮಾಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಉದ್ಯೋಗ ಮತ್ತು ತರಬೇತಿ ಇಲಾಖೆ ರವರ ಪತ್ರದಲ್ಲಿ ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿಗೆ ಮಂಜೂರಾಗಿರುವ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಕೊಪ್ಪ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿಗೆ ಬದಲಾಯಿಸಿ ಪ್ರವೇಶ ಅಧಿಸೂಚನೆಯನ್ನು ನೀಡಲಾಗಿರುತ್ತದೆ ಎಂದೂ, ಆದ್ದರಿಂದ ಈ ಬದಲಾವಣೆಗೆ ಘಟನೋತ್ತರ ಅನುಮೋದನೆ ನೀಡಿ ಪರಿಷ್ಕೃತ ಸರ್ಕಾರಿ ಆದೇಶ ಜಾರಿ ಮಾಡುವಂತೆ ಕೋರಿರುತ್ತಾರೆ.

ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 73 ಇಟಿಐ 2009, ಬೆಂಗಳೂರು, ದಿನಾಂಕ: 24ನೇ ಜೂನ್ 2009**

ಆದೇಶ ಸಂಖ್ಯೆ ಕಾಇ 287 ಇಟಿಐ 2008 (ಭಾಗ) ದಿನಾಂಕ: 6/9/2008 ರಲ್ಲಿ ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿಗೆ ಮಂಜೂರು ಮಾಡಿರುವ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಕೊಪ್ಪ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿಗೆ ಸ್ಥಳಾಂತರಿಸಲು ಘಟನೋತ್ತರ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1656

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ವಸತಿ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಕೊನಿಮ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಕೊನಿಮ/ಲೆಪಶಾ/ಅನುದಾನ/2009–10, ದಿನಾಂಕ: 7.5.2009

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರ ಪತ್ರದಲ್ಲಿ, 2009–10ನೇ ಸಾಲಿನ ಆಯವ್ಯಯದ ಸವಿವರ ವೆಚ್ಚದ ಅಂದಾಜುಗಳ ಪುಸ್ತಕ ಸಂಪುಟ–5 ರಲ್ಲಿ ರೂ. 6900.00 ಲಕ್ಷಗಳನ್ನು ಯೋಜನೆಯಡಿಯಲ್ಲಿ ಹಾಗೂ ರೂ. 3275.63 ಲಕ್ಷಗಳನ್ನು ಯೋಜನೇತರದಡಿಯಲ್ಲಿ ಒಟ್ಟು ರೂ. 10175.63 ಲಕ್ಷಗಳನ್ನು ಒದಗಿಸಲಾಗಿರುವುದರಿಂದ 2009–10ನೇ ಸಾಲಿನ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರದಡಿ) ರೂ. 143.91 ಲಕ್ಷಗಳು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿಗಾಗಿ 682.67 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 75.00 ಲಕ್ಷಗಳು ಹಾಗೂ ಯೋನೇತರದಡಿಯಲ್ಲಿ ರೂ. 751.58 ಲಕ್ಷಗಳು ಒಟ್ಟು ರೂ. 826.58 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ ಮೊದಲನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 11 ಕೊಮಂಲೆ 2009, ಬೆಂಗಳೂರು, ದಿನಾಂಕ: 23ನೇ ಜೂನ್ 2009**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2009–10ನೇ ಸಾಲಿಗೆ ಮೊದಲನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗು ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ಒಟ್ಟು ರೂ. 826.57517 ಲಕ್ಷಗಳು (ಎಂಟು ಕೋಟಿ ಇಪ್ಪತ್ತಾರು ಲಕ್ಷದ ಐವತ್ತೇಳು ಸಾವಿರದ ಐದು ನೂರ ಹದಿನೇಳು ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ರೂ. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೊದಲನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1 | ಸಿಬ್ಬಂದಿ ವೆಚ್ಚ<br>2217–04–191–2–01 | 75.00 | 68.91 | 143.91 |
| 2 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ<br>4217–60–800–3–01 | – | 682.67 | 682.66517 |
| | **ಒಟ್ಟು** | | | **826.57517** |

ಈ ಅನುದಾನವನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆಗೊಳಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು, ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು, ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಎಫ್‌ಡಿ 376 ವೆಚ್ಚ–9/2009 ದಿನಾಂಕ:20/06/2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1657

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಮೀನುಗಾರಿಕೆ ಯಾಂತ್ರಿಕ ದೋಣಿಗಳ ನಿರ್ಮಾಣಕ್ಕಾಗಿ ಸಾಧ್ಯತಾ ಪ್ರಮಾಣ ಪತ್ರ ನೀಡುವ ವಾರ್ಷಿಕ ಗುರಿಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** ಮೀನುಗಾರಿಕೆ ನಿರ್ದೇಶಕರು, ಬೆಂಗಳೂರುರವರ ಪತ್ರ ಸಂಖ್ಯೆ: ಎಂಇಎಫ್/4/2009–10 ದಿನಾಂಕ:8/6/2009.

**ಪ್ರಸ್ತಾವನೆ:**

ಮೀನುಗಾರಿಕೆ ನಿರ್ದೇಶಕರು ಮೇಲೆ ಓದಲಾದ ಪತ್ರದಲ್ಲಿ ಇತ್ತೀಚಿನ ದಿನಗಳಲ್ಲಿ ಕಡಲ ಮೀನುಗಾರಿಕೆಯಲ್ಲಿ ಕರಾವಳಿ ತೀರ ಪ್ರದೇಶದಲ್ಲಿ ದೊರಕುವ ಮೀನಿನ ಪ್ರಮಾಣ ಕಡಿಮೆಯಾಗುತ್ತಿದ್ದು, ಯಾಂತ್ರಿಕ ದೋಣಿಗಳ ಮೀನುಗಾರರು ಆಳ ಸಮುದ್ರ ಮೀನುಗಾರಿಕೆಯತ್ತ ಹೆಚ್ಚಿನ ಗಮನ ಹರಿಸಿದ್ದು, ಈ ಉದ್ದೇಶಕ್ಕೆ ಆಳ ಸಮುದ್ರದಲ್ಲಿ ಮೀನುಗಾರಿಕೆಯನ್ನು ಮಾಡಲು ಸುಸಜ್ಜಿತ ಅರ್ಹ ಹಾಗೂ ದೊಡ್ಡ ಗಾತ್ರದ ದೋಣಿಗಳ ಅವಶ್ಯಕತೆ ಇದ್ದು, ಇತ್ತೀಚಿನ ವರ್ಷಗಳಲ್ಲಿ ಬಹುದಿನ ಮೀನುಗಾರಿಕೆಯು (8–12 ದಿನಗಳ ಮೀನುಗಾರಿಕೆ) ಹೆಚ್ಚಾಗುತ್ತಿದ್ದು, ಈ ಉದ್ದೇಶಕ್ಕೆ "Sea Worthy" ಇರುವ ಯಾಂತ್ರಿಕ ದೋಣಿಗಳ ಅವಶ್ಯಕತೆ ಹೆಚ್ಚಾಗಿದ್ದು, ಈ ದೋಣಿಗಳಲ್ಲಿ ಫಿಶ್ ಹೋಲ್ಡ್, ಐಸ್ ಹೋಲ್ಡ್ ಮತ್ತು ಅಧಿಕ ಪ್ರಮಾಣದ ಡೀಸೆಲ್ ಮತ್ತು ನೀರನ್ನು ಶೇಖರಿಸಿಟ್ಟುಕೊಳ್ಳುವ ವ್ಯವಸ್ಥೆಯೂ ಸಹ ಯಾಂತ್ರಿಕ ದೋಣಿಗಳಲ್ಲಿರಬೇಕಾಗುತ್ತದೆಂದು, ಹೀಗಾಗಿ ಯಾಂತ್ರಿಕ ದೋಣಿಗಳ ಮಾಲೀಕರು ಆಳ ಸಮುದ್ರ ಮೀನುಗಾರಿಕೆ ಮಾಡಬಲ್ಲ ದೊಡ್ಡ ಗಾತ್ರದ ಬೋಟುಗಳನ್ನು ನಿರ್ಮಿಸಲು ಸಾಧ್ಯತಾ ಪತ್ರಗಳನ್ನು ವಿತರಿಸುವಂತೆ ಕೋರಿರುತ್ತಾರೆ.

ಪ್ರಸ್ತುತ ರಾಜ್ಯದಲ್ಲಿರುವ ಯಾಂತ್ರಿಕ ದೋಣಿಗಳ ಸಂಖ್ಯೆ 3124 ಆಗಿದ್ದು, ಕೇಂದ್ರ ಸರ್ಕಾರವು ವಿವಿಧ ರಾಜ್ಯಗಳಲ್ಲಿ ಕಡಲ ಮೀನುಗಾರಿಕೆಗೆ ಬೇಕಾದ ಯಾಂತ್ರಿಕ ದೋಣಿಗಳ ಸಂಖ್ಯೆಯನ್ನು ಪರಾಮರ್ಶಿಸಿ ನಿಗದಿಪಡಿಸಲು ರಚಿತವಾದ ಸಮಿತಿಯೂ ಸಹ ಕರ್ನಾಟಕ ರಾಜ್ಯದಲ್ಲಿ 9ನೇ ಪಂಚವಾರ್ಷಿಕ ಯೋಜನೆ ಅಂತ್ಯದ ವೇಳೆಗೆ ಯಾಂತ್ರಿಕ ದೋಣಿಗಳ ಸಂಖ್ಯೆಯನ್ನು ಗರಿಷ್ಠ 3955ರೊಳಗೆ ಸೀಮಿತಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿದ್ದು, ಅದರಂತೆ ಕರ್ನಾಟಕ ರಾಜ್ಯದಲ್ಲಿ ದೋಣಿಗಳ ಸಂಖ್ಯೆಯನ್ನು ಹೆಚ್ಚಿಸಬಹುದಾಗಿದ್ದು, 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪತ್ರ ನೀಡುವ ವಾರ್ಷಿಕ ಗುರಿಯನ್ನು ಸಹ ಪರಿಷ್ಕರಿಸಲು ಕೋರಿರುತ್ತಾರೆ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಪಸಂಮೀ 114 ಮೀಇಯೋ 2009, ಬೆಂಗಳೂರು, ದಿನಾಂಕ: 23ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳನ್ನು ನಿರ್ಮಿಸಲು ಸಾಧ್ಯತಾ ಪತ್ರ ನೀಡುವ ವಾರ್ಷಿಕ ಗುರಿಯನ್ನು ಹೆಚ್ಚಿಸಿ ಈ ಕೆಳಕಾಣಿಸಿದ ಎರಡು ಜಿಲ್ಲೆಗಳಲ್ಲಿ ಅವುಗಳ ಮುಂದೆ ನಮೂದಿಸಿರುವಂತೆ ಆದೇಶ ಹೊರಡಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ಹಾಲಿ ಇರುವ ವಾರ್ಷಿಕ ಮಿತಿ | ಪರಿಷ್ಕರಿಸಿದ ವಾರ್ಷಿಕ ಮಿತಿ |
|---|---|---|---|
| 1) | ದಕ್ಷಿಣ ಕನ್ನಡ | 15 | 50 |
| 2) | ಉಡುಪಿ | 15 | 100 |

ಸಾಧ್ಯತಾ ಪ್ರಮಾಣ ಪತ್ರ ನೀಡಲು ರಚಿಸಲಾಗಿರುವ ಸಮಿತಿಯು ಅನುಸರಿಸಬೇಕಾದ ಮಾರ್ಗದರ್ಶನವನ್ನು ಸರ್ಕಾರದ ಆದೇಶ ಸಂಖ್ಯೆ: ಎಹೆಚ್ಎಫ್/481/ಎನ್ಎಫ್ಎಂ/94, ದಿನಾಂಕ: 15/12/1994 ಮತ್ತು ಅದರ ಅನುಬಂಧದಲ್ಲಿ ನೀಡಿರುವ ಸೂಚನೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಂ. ರಾಜಣ್ಣ**

ಪಿ.ಆರ್. 1658 ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಾಲ – ಅಸಲು ಮತ್ತು ಬಡ್ಡಿಯ ಮರುಪಾವತಿಗಾಗಿ 2009ರ ಜೂನ್ ಅಂತ್ಯದ 18ನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 22 ಪಿಆರ್ಎಂ 2002 ದಿನಾಂಕ:6.3.03.

2) ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂನಿ/ಲೆಕ್ಕ–1/58/ಹುಡ್ಕೋ ಲೋನ್/ಡೆಬಿಟ್ಸ್ ಸರ್ವೀಸಸ್/180/2008–09, ದಿ: 16/6/2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 6–3–2003ರಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ (Housing and Urban Development Corporation) ಸಂಸ್ಥೆಯಿಂದ ರೂ. 20.00 ಕೋಟಿ ಸಾಲವನ್ನು ಎತ್ತುವಳಿ ಮಾಡಲು ಮಂಜೂರಾತಿ ನೀಡಲಾಗಿತ್ತು.

2005ನೇ ವರ್ಷದಿಂದ ಹುಡ್ಕೋ ಸಂಸ್ಥೆಯ ಅಸಲು, ಬಡ್ಡಿಯ ಮರುಪಾವತಿಸಲು ಕೆಬಿಟ್ಸ್ ಸಂಸ್ಥೆಗೆ ತ್ರೈಮಾಸಿಕ ಅನುದಾನಗಳನ್ನು ಸರ್ಕಾರವು ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

2009–10ನೇ ಸಾಲಿನ ಆಯವ್ಯಯದಲ್ಲಿ ಸದರಿ ಸಾಲವನ್ನು ಮರುಪಾವತಿಸಲು ಲೆಕ್ಕಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ರೂ. 360.00 ಲಕ್ಷಗಳನ್ನು ಒದಗಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರದಲ್ಲಿ ಹುಡ್ಕೋ ಸಂಸ್ಥೆಗೆ 18ನೇ ಕಂತಿನ ಬಾಬ್ತು ಅಸಲು ರೂ. 62,50,000/– + ಬಡ್ಡಿ ಬಾಬ್ತು ರೂ. 22,72,328/– ಒಟ್ಟು ರೂ. 85,22,328/– ಗಳನ್ನು 2009ರ ಜೂನ್ ಅಂತ್ಯದೊಳಗಾಗಿ ಪಾವತಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ, ಸದರಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 07 ಪಿಆರ್‌ಎಂ 2009, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಡ್ಕೋ ಸಾಲದ ಬಾಬ್ತು ಹುಡ್ಕೋ ಸಂಸ್ಥೆಗೆ ಅಸಲು ಮತ್ತು ಬಡ್ಡಿಯ ಬಾಬ್ತು ಪಾವತಿಸಲು ದಿನಾಂಕ 30–06–2009ರ ಅಂತ್ಯದ 18ನೇ ತ್ರೈಮಾಸಿಕ ಕಂತಿನ ಹಣ ರೂ. 85,22,328/–ಗಳ [ಎಂಭತ್ತೈದು ಲಕ್ಷದ ಇಪ್ಪತ್ತೆರಡು ಸಾವಿರದ ಮುನ್ನೂರ ಇಪ್ಪತ್ತೆಂಟು ರೂಪಾಯಿಗಳು ಮಾತ್ರ] ಅನುದಾನವನ್ನು ಬಿಡುಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ'** ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.5.2008 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1659 ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ವಿಷಯ:** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಬಗ್ಗೆ

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 19–1–2009
2) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, (1), ದಿನಾಂಕ : 4–2–2009
3) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, (2), ದಿನಾಂಕ 4–2–2009
4) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 30–3–2009
5) ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಹಾಗೂ ಅಧ್ಯಕ್ಷರು, ಬಿಪಿಓ ಸ್ಕ್ರೀನಿಂಗ್ ಕಮಿಟಿ ಇವರ ಪತ್ರದ ಸಂಖ್ಯೆ : ಕೆಬಿಟ್ಸ್/ಪಿಇ/ಗ್ರಾಮೀಣ ಬಿಪಿಓ ಕೇಂದ್ರ/42/09–10, ದಿನಾಂಕ:16–6–2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು/ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಗೆ 2008–09ನೇ ಸಾಲಿನಿಂದ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ ಹಾಗೂ ಅರ್ಜಿಯ ನಮೂನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಸಂಬಂಧದ ಅರ್ಜಿಗಳನ್ನು ಪರಿಶೀಲಿಸಿ, ಸರ್ಕಾರಕ್ಕೆ ಅರ್ಹ ಅರ್ಜಿಗಳನ್ನು ಶಿಫಾರಸ್ಸು ಮಾಡುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸ್ಕ್ರೀನಿಂಗ್ ಕಮಿಟಿಯನ್ನು ರಚಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳು 059 ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ರೂ. 100 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (5) ರಲ್ಲಿ ಓದಲಾದ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರದಲ್ಲಿ ಸರ್ಕಾರದ ಮಾರ್ಗಸೂಚಿಯನ್ವಯ ಕೆಬಿಟ್ಸ್ ಸಂಸ್ಥೆಯವರು ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ:21–2–2009 ರೊಳಗೆ 100 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ಸರ್ಕಾರಿ ಆದೇಶ ದಿನಾಂಕ:4–2–2009ರಲ್ಲಿ ರಚಿಸಲಾದ ಸ್ಕ್ರೀನಿಂಗ್ ಕಮಿಟಿಯು ಸರ್ಕಾರದ ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ ಅರ್ಹರಾದ 27 ಅರ್ಜಿದಾರರನ್ನು ವೈಯಕ್ತಿಕ ಸಂದರ್ಶನ ನಡೆಸಿ, ಈ ಕೆಳಕಂಡ ನಾಲ್ಕು ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಶಿಫಾರಸ್ಸು ಮಾಡಿ ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| **ಕ್ರಮ ಸಂಖ್ಯೆ** | **ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ** | **ಬಿ.ಪಿ.ಓ. ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ** |
|---|---|---|
| 1 | ರತ್ನಾ ಶ್ರೀನಿವಾಸ್,<br>ಎಂ.ಪ್ರೋ ಸಲೂಷನ್, ನಂ. 92, 1ನೇ ಮತ್ತು 2ನೇ ಮಹಡಿ,<br>ಎಂ. ಪ್ರೋ ಟವರ್, 60, ಅಡಿ ರಸ್ತೆ, 6ನೇ ಬ್ಲಾಕ್, ಕೋರಮಂಗಲ,<br>ಬೆಂಗಳೂರು–95. | ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ |
| 2 | ಮಂಜುನಾಥ ಇ.<br>ಅರ್ಮನ್ ಇನ್ಫೋಟೆಕ್, ನಂ. 24, 1ನೇ ಮಹಡಿ,<br>7ನೇ ಕ್ರಾಸ್, ಸಂಪಂಗಿ ರೋಡ್, ಕೆ.ಆರ್. ಪುರಂ, ಹಾಸನ | ಸಾಲೆಗಾಮೆ, ಹಾಸನ ಜಿಲ್ಲೆ |
| 3 | ಶ್ರೀಕಾಂತ್ ವಿ ರಾವ್<br>ಇನ್‌ಟೆಕ್, ಸಿಹೆಚ್–26, 1ನೇ ಮಹಡಿ, 7ನೇ ಮೇನ್, 5ನೇ ಕ್ರಾಸ್,<br>ಸರಸ್ವತಿಪುರಂ, ಮೈಸೂರು | ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ |
| 4 | ಕುಮಾರಿ ಶಿಲ್ಪಾ ಎಂ.<br>ಡೈರೆಕ್ಟರ್, ಮೈಂಡ್‌ಗ್ಲೋ ಸಾಫ್ಟ್‌ವೇರ್, ನಂ.410, 3ನೇ ಮಹಡಿ,<br>65ನೇ ಕ್ರಾಸ್, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು. | ಶಿಗ್ಗಾಂವ್, ಧಾರವಾಡ ಜಿಲ್ಲೆ |

ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮೇಲಿನ ನಾಲ್ಕು ಅಭ್ಯರ್ಥಿಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ: 22ನೇ ಜೂನ್ 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ಈ ಕೆಳಕಂಡ ನಾಲ್ಕು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ:–

| **ಕ್ರಮ ಸಂಖ್ಯೆ** | **ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ** | **ಬಿ.ಪಿ.ಓ. ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ** |
|---|---|---|
| 1 | ರತ್ನಾ ಶ್ರೀನಿವಾಸ್,<br>ಎಂ.ಪ್ರೋ ಸಲೂಷನ್, ನಂ. 92, 1ನೇ ಮತ್ತು 2ನೇ ಮಹಡಿ,<br>ಎಂ. ಪ್ರೋ ಟವರ್, 60, ಅಡಿ ರಸ್ತೆ, 6ನೇ ಬ್ಲಾಕ್, ಕೋರಮಂಗಲ,<br>ಬೆಂಗಳೂರು–95. | ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ |
| 2 | ಮಂಜುನಾಥ ಇ.<br>ಅರ್ಮನ್ ಇನ್ಫೋಟೆಕ್, ನಂ. 24, 1ನೇ ಮಹಡಿ,<br>7ನೇ ಕ್ರಾಸ್, ಸಂಪಂಗಿ ರೋಡ್, ಕೆ.ಆರ್. ಪುರಂ, ಹಾಸನ. | ಸಾಲೆಗಾಮೆ, ಹಾಸನ ಜಿಲ್ಲೆ |
| 3 | ಶ್ರೀಕಾಂತ್ ವಿ ರಾವ್<br>ಇನ್‌ಟೆಕ್, ಸಿಹೆಚ್–26, 1ನೇ ಮಹಡಿ, 7ನೇ ಮೇನ್, 5ನೇ ಕ್ರಾಸ್,<br>ಸರಸ್ವತಿಪುರಂ, ಮೈಸೂರು. | ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ |

| ಕ್ರಮ ಸಂಖ್ಯೆ | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ | ಬಿ.ಪಿ.ಓ. ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ |
|---|---|---|
| 4 | ಕುಮಾರಿ ಶಿಲ್ಪಾ ಎಂ.<br>ಡೈರೆಕ್ಟರ್, ಮೈಂಡ್‌ಗ್ಲೋ ಸಾಫ್ಟ್‌ವೇರ್, ನಂ.410, 3ನೇ ಮಹಡಿ,<br>65ನೇ ಕ್ರಾಸ್, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು. | ಶಿಗ್ಗಾಂವ್, ಧಾರವಾಡ ಜಿಲ್ಲೆ |

1. ಕೆಬಿಟ್ಸ್ ಸಂಸ್ಥೆಯವರು ಉಲ್ಲೇಖ (1) ಮತ್ತು (2) ರಲ್ಲಿನ ಸರ್ಕಾರದ ಆದೇಶದನ್ವಯ ಹಾಗೂ ಮಾರ್ಗಸೂಚಿಯಂತೆ ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಪ್ರಗತಿಗೆ ಅನುಗುಣವಾಗಿ ಕಾಲಕಾಲಕ್ಕೆ ಹಂತಹಂತವಾಗಿ ಹಣ ಬಿಡುಗಡೆ ಮಾಡತಕ್ಕದ್ದು.
2. ಗ್ರಾಮೀಣ ಬಿಪಿಓ ಕಾರ್ಯವೈಖರಿಯನ್ನು ಆಗಿಂದಾಗ್ಗೆ ತಪಾಸಣೆ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.
3. ಬಿಪಿಓ ಕೇಂದ್ರಗಳಿಂದ ವಿನಿಯೋಗಿತ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಕಾಲದಲ್ಲಿ ಸಲ್ಲಿಸತಕ್ಕದ್ದು.
4. ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಬಿಡುಗಡೆ ಮಾಡುವ ಹಣ ದುರುಪಯೋಗವಾಗದಂತೆ ಹಾಗೂ ಯೋಜನೆಯ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ವಸೂಲಿ ಮಾಡುವ ಬಗ್ಗೆ/ಮೂಲಭೂತ ಸೌಕರ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ವಿಧಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1660 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು, ಮುಳಸಾವಳಗಿ ಮಂಡಲ ಪಂಚಾಯತ್ ವ್ಯಾಪ್ತಿಯಲ್ಲಿ 1993–94ನೇ ಸಾಲಿನಲ್ಲಿ ರೋಜಗಾರ್ ಆಹಾರ ಧಾನ್ಯ ವಿತರಣೆಯಲ್ಲಿನ ಅವ್ಯವಹಾರ ಕುರಿತಂತೆ ಜಂಟಿ ಇಲಾಖಾ ವಿಚಾರಣೆ – ಆರೋಪಿತರಿಗೆ ದಂಡನೆ ವಿಧಿಸುವ ಬಗ್ಗೆ – ಆದೇಶ.

**ಓದಲಾಗಿದೆ:** 1) ಮುಖ್ಯ ಕಾರ್ಯದರ್ಶಿಗಳು, ಜಿಲ್ಲಾ ಪಂಚಾಯತ್, ಬಿಜಾಪುರ ಇವರ ಪತ್ರ ಸಂಖ್ಯೆ ಜಿಪಅ/ಮಂಪಂ/ಸಿಬ್ಬಂದಿ/ಸಿಆರ್–131/94, ದಿನಾಂಕ 21–04–1995.

2) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ : ಗ್ರಾಅಪ 17 ಇಎನ್‌ಕ್ಯೂ 95, ದಿನಾಂಕ 8.1.1996.

3) ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 17 ಇಎನ್‌ಕ್ಯೂ 95, ದಿನಾಂಕ 07–06–1996.

4) ವಿಭಾಗಾಧಿಕಾರಿಗಳು, ಗುಲ್ಬರ್ಗಾ ಇವರ ಪತ್ರ ಸಂಖ್ಯೆ 22 ಸಿಸಿಎ : 96–97 ದಿನಾಂಕ 18–8–1996 ಮತ್ತು 29–12–1998.

5) ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 17 ಇಎನ್‌ಕ್ಯೂ 95, ದಿನಾಂಕ 21–9–2000.

6) ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ 30–3–2007.

7) ಸರ್ಕಾರಿ ಪತ್ರ ಸಂಖ್ಯೆ ಗ್ರಾಅಪ 17 ಇಎನ್‌ಕ್ಯೂ 95, ದಿನಾಂಕ 24–8–2007.

8) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಿಜಾಪುರ ಇವರ ಪತ್ರ ಸಂಖ್ಯೆ ಜಿಪಂಅ/ಗ್ರಾಪಂ/ಸಿಬ್ಬಂದಿ/ಸಿಆರ್–131/1994/6953 ದಿನಾಂಕ 28–8–2008.

9) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ PSC 195 CNS 08, ದಿನಾಂಕ 1–4–2009.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕಿನ ಮುಳಸಾವಳಗಿ ಮಂಡಲ ಪಂಚಾಯತ್‌ನಲ್ಲಿ ಕಾರ್ಯದರ್ಶಿಯಾಗಿದ್ದ ಶ್ರೀ ಎಸ್.ಕೆ. ಮಹಾಲಿಂಗಪೂರ ಹಾಗೂ ಸದರಿ ಮಂಡಲ ಪಂಚಾಯತ್‌ನಲ್ಲಿ ಆಡಳಿತಾಧಿಕಾರಿಯಾಗಿದ್ದ ಶ್ರೀ ಆರ್.ಎಸ್. ನಂದಿಕೂರ ಇವರುಗಳು ಜವಾಹರ್ ರೋಜಗಾರ್ ಯೋಜನೆಯಲ್ಲಿ ಮಂಜೂರಾದ ಹಣ ಹಾಗೂ ಆಹಾರ ಧಾನ್ಯ ದುರುಪಯೋಗ ಪಡಿಸಿಕೊಂಡಿದ್ದರಿಂದ ಅವರುಗಳು ವಿರುದ್ಧ ಜಂಟಿ ವಿಚಾರಣೆ ನಡೆಸಲು ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಮುಳಸಾವಳಗಿ ಮಂಡಲ ಪಂಚಾಯತ್‌ನ ಹಿಂದಿನ ಕಾರ್ಯದರ್ಶಿಯಾಗಿದ್ದ ಶ್ರೀ ಎಸ್.ಕೆ. ಮಹಾಲಿಂಗಪೂರ ಹಾಗೂ ಸದರಿ ಮಂಡಲ ಪಂಚಾಯತ್‌ನ ಹಿಂದಿನ ಆಡಳಿತಾಧಿಕಾರಿಗಳಾಗಿದ್ದ ಶ್ರೀ ಆರ್.ಎಸ್. ನಂದಿಕೂರ ಇವರುಗಳಿಗೆ ಅನುಬಂಧ 1 ರಿಂದ 4 ರವರೆಗಿನ ಆರೋಪ

ಪಟ್ಟಿಗಳೊಂದಿಗೆ ಮೇಲೆ (2) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು, ಸದರಿ ನೋಟೀಸಿಗೆ ಆರೋಪಿತರಾದ ಶ್ರೀ ಎಸ್.ಕೆ. ಮಹಾಲಿಂಗಪೂರ ಮತ್ತು ಶ್ರೀ ಆರ್.ಎಸ್. ನಂದಿಕೂರ ಇವರುಗಳು ತಮ್ಮ ಲಿಖಿತ ರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿ, ತಮ್ಮ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳನ್ನು ಅಲ್ಲಗಳೆದಿದ್ದರು.

ಈ ರೀತಿ ಆರೋಪಿತರು ಸಲ್ಲಿಸಿದ್ದ ರಕ್ಷಣಾ ಹೇಳಿಕೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಆಪಾದಿತರು ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕಿನ ಮುಳಸಾವಳಗಿ ಮಂಡಲ ಪಂಚಾಯತ್ ವ್ಯಾಪ್ತಿಯಲ್ಲಿ ಜವಾಹರ್ ರೋಜಗಾರ್ ಯೋಜನೆಯಲ್ಲಿ ಹಣ ಮತ್ತು ಆಹಾರ ಧಾನ್ಯ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಈ ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯಲು ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (3) ರಲ್ಲಿ ಓದಲಾದ ದಿನಾಂಕ:7.6.1996ರ ಸರ್ಕಾರಿ ಆದೇಶದಲ್ಲಿ ವಿಭಾಗಾಧಿಕಾರಿ, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಬಿಜಾಪುರ, ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ಪತ್ರಗಳಲ್ಲಿ ವಿಭಾಗಾಧಿಕಾರಿ, ಗುಲ್ಬರ್ಗಾ ಇವರು ತಮ್ಮನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವ ಆದೇಶವನ್ನು ಮಾರ್ಪಡಿಸಲು ಕೋರಿದ್ದರು. ಅದರಂತೆ, ಮೇಲೆ (5) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಜಿಲ್ಲಾಧಿಕಾರಿ, ಬಿಜಾಪುರ ಇವರನ್ನು ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಬಿಜಾಪುರ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (6) ರಲ್ಲಿ ಓದಲಾದ ಪತ್ರದೊಂದಿಗೆ ಜಿಲ್ಲಾಧಿಕಾರಿ, ಬಿಜಾಪುರ ಜಿಲ್ಲೆ, ಬಿಜಾಪುರ ಇವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು. ಸದರಿ ವರದಿಯಲ್ಲಿ ಶ್ರೀ ಎಸ್.ಕೆ. ಮಹಾಲಿಂಗಪೂರ, ಅಂದಿನ ಮಂಡಲ ಪಂಚಾಯತ್ ಕಾರ್ಯದರ್ಶಿ (ಪ್ರಸ್ತುತ ನಿವೃತ್ತ) ಇವರ ವಿರುದ್ಧ ಒಟ್ಟು ರೂ. 4,63.492–50 ಗಳ ಹಣ ದುರುಪಯೋಗದ ಆರೋಪಗಳು ರುಜುವಾತಾಗಿದ್ದು, ಜೊತೆಗೆ ಉಗ್ರಾಣ ಸಾಮಗ್ರಿಗಳು ಮತ್ತು ಆಹಾರ ಧಾನ್ಯ ದುರುಪಯೋಗಪಡಿಸಿಕೊಂಡಿರುವುದೂ ಸಹ ರುಜುವಾತಾಗಿರುತ್ತದೆ ಎಂದು ತಿಳಿಸಲಾಗಿದೆ. ಹಾಗೂ ಶ್ರೀ ಆರ್.ಎಸ್. ನಂದಿಕೂರ ಇವರ ಮೇಲೆ ಒಟ್ಟು 7 ಆಪಾದನೆಗಳನ್ನು ಮಾಡಲಾಗಿದ್ದು, ಅವುಗಳಲ್ಲಿ ಆಪಾದನೆ ಸಂಖ್ಯೆ 4 ಮಾತ್ರ ಭಾಗಶ: ಸ್ಥಿರಪಟ್ಟಿರುತ್ತದೆ ಎಂದೂ ಕೂಡ ತಿಳಿಸಲಾಗಿದೆ.

ಇಲಾಖಾ ವಿಚಾರಣಾ ವರದಿಯೊಂದಿಗೆ ಆರೋಪಿತ ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ:24–8–2007ನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಉತ್ತರ ಸಲ್ಲಿಸುತ್ತಾ, ಶ್ರೀ ಎಸ್.ಕೆ. ಮಹಾಲಿಂಗಪೂರ ಮತ್ತು ಶ್ರೀ ಆರ್.ಎಸ್.ನಂದಿಕೂರ ಇವರುಗಳು ತಮ್ಮ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ರುಜುವಾತಾದ ಆರೋಪಗಳನ್ನು ಅಲ್ಲಗಳೆದು, ತಾವು ಪ್ರಕರಣದಲ್ಲಿ ನಿರ್ದೋಷಿಯಾಗಿದ್ದು, ತಮ್ಮನ್ನು ಆರೋಪಮುಕ್ತಗೊಳಿಸಬೇಕೆಂದು ಕೋರಿದ್ದರು.

ಮೇಲೆ (7) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ವಿಜಾಪುರ ಇವರಿಂದ ಪ್ರಕರಣದಲ್ಲಿ ದುರುಪಯೋಗಪಡಿಸಿಕೊಳ್ಳಲಾದ ಆಹಾರ ಧಾನ್ಯ ಹಾಗೂ ಉಗ್ರಾಣ ಸಾಮಗ್ರಿಗಳ ಮೌಲ್ಯದ ಬಗ್ಗೆ ವರದಿಯನ್ನು ಕೋರಲಾಗಿತ್ತು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ವಿಜಾಪುರ ಇವರು ಮೇಲೆ (8) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎಸ್.ಕೆ. ಮಹಾಲಿಂಗಪೂರ ಇವರು ದುರ್ಬಳಕೆ ಮಾಡಿದ ಆಹಾರ ಧಾನ್ಯ ಹಾಗೂ ಸಾಮಗ್ರಿಗಳ ಮೌಲ್ಯವು ಅಂದಿನ ದರಗಳ ಪ್ರಕಾರ ರೂ. 97,188–00 ಗಳೆಂದು ವರದಿ ಮಾಡಿರುತ್ತಾರೆ.

ಸರ್ಕಾರವು ವಿಚಾರಣಾ ವರದಿ ಹಾಗೂ ಆರೋಪಿತರ ಲಿಖಿತ ಹೇಳಿಕೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಆರೋಪಿತ ನೌಕರರಿಗೆ ಸೂಕ್ತ ದಂಡನೆಯನ್ನು ವಿಧಿಸಲು ತೀರ್ಮಾನಿಸಿದೆ. ಈ ಬಗ್ಗೆ ನಿವೃತ್ತ ಆಪಾದಿತ ನೌಕರರಾದ ಶ್ರೀ ಎಸ್.ಕೆ. ಮಹಾಲಿಂಗಪೂರ ಇವರಿಂದ ದುರುಪಯೋಗವಾದ ಹಣದ ಮೊತ್ತ ರೂ. 4.63,492–00 ಗಳನ್ನು ಹಾಗೂ ಆಹಾರ ಧಾನ್ಯ ಮತ್ತು ಉಗ್ರಾಣ ಸಾಮಗ್ರಿಗಳ ಮೊತ್ತ ರೂ. 97,188–00 ಗಳನ್ನು ಅಂದರೆ ಒಟ್ಟು ಮೊತ್ತ ರೂ. 5,60,680–00 ಗಳನ್ನು ಶೇಕಡಾ 8ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರನ್ವಯ ನಿವೃತ್ತರಾದ ಸದರಿ ಆರೋಪಿತ ನೌಕರರ ನಿವೃತ್ತಿ ವೇತನದಲ್ಲಿ ಶೇಕಡಾ 5ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು.

ಮೇಲೆ (9) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು ನಿವೃತ್ತ ಆರೋಪಿತ ನೌಕರರಾದ ಶ್ರೀ ಎಸ್.ಕೆ. ಮಹಾಲಿಂಗಪೂರ ಇವರ ವಿರುದ್ಧ ದಂಡನೆ ವಿಧಿಸುವ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ. ಅದರಂತೆ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 17 ಇಎನ್‌ಕ್ಯೂ 95, ಬೆಂಗಳೂರು, ದಿನಾಂಕ: 16ನೇ ಜೂನ್ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಸ್.ಕೆ. ಮಹಾಲಿಂಗಪೂರ, ಅಂದಿನ ಕಾರ್ಯದರ್ಶಿ, ಮುಳಸಾವಳಗಿ ಮಂಡಲ ಪಂಚಾಯತ್, ಸಿಂಧಗಿ ತಾಲ್ಲೂಕು, ಬಿಜಾಪುರ ಜಿಲ್ಲೆ, (ಪ್ರಸ್ತುತ ನಿವೃತ್ತ) ಇವರಿಂದ ದುರುಪಯೋಗವಾದ ಹಣದ ಮೊತ್ತ ರೂ 4,63,492–00ಗಳನ್ನು ಹಾಗೂ ಆಹಾರ ಧಾನ್ಯ ಮತ್ತು ಉಗ್ರಾಣ ಸಾಮಗ್ರಿಗಳ

ಮೊತ್ತ ರೂ. 97,188–00 ಗಳನ್ನು ಅಂದರೆ ಒಟ್ಟು ಮೊತ್ತ ರೂ. 5,60,680–00 ಗಳನ್ನು 1993–94ನೇ ಸಾಲಿನಿಂದ ಅನ್ವಯವಾಗುವಂತೆ ಶೇಕಡಾ 8ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರನ್ವಯ ನಿವೃತ್ತರಾದ ಸದರಿ ಆರೋಪಿತ ನೌಕರರ ನಿವೃತ್ತಿ ವೇತನದಲ್ಲಿ ಶೇಕಡಾ 5ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಶ್ರೀ ಎಸ್.ಕೆ. ಮಹಾಲಿಂಗಪೂರ ಇವರಿಂದ ಮೇಲಿನಂತೆ ವಸೂಲಿ ಮಾಡಬೇಕಾಗಿರುವ ಮೊತ್ತವನ್ನು ಲೆಕ್ಕಾಚಾರ ಮಾಡಿ, ಸದರಿ ಮೊತ್ತವನ್ನು ಅವರಿಗೆ ಲಭ್ಯವಾಗುವ ನಿವೃತ್ತಿ ಸೌಲಭ್ಯಗಳಿಂದ ಹೊಂದಾಣಿಕೆ ಮಾಡಿಕೊಳ್ಳುವಂತೆ ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ತಿಳಿಸಿದೆ.

ಹೊಂದಾಣಿಕೆಯ ನಂತರವೂ ಉಳಿಯುವ ಮೊತ್ತವನ್ನು ಕಂದಾಯ ಬಾಕಿಯೆಂದು ಪರಿಗಣಿಸಿ ವಸೂಲಿ ಮಾಡಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಿಜಾಪುರ ಇವರಿಗೆ ಸೂಚಿಸಿದೆ.

ಶ್ರೀ ಆರ್.ಎಸ್. ನಂದಿಕೂರ, ಹಿಂದಿನ ಆಡಳಿತಾಧಿಕಾರಿ, ಮಂಡಲ ಪಂಚಾಯತಿ, ಮುಳಸಾವಳಗಿ, ಪ್ರಸ್ತುತ ಸಿ.ಡಿ.ಪಿ.ಓ. ಮಾನ್ವಿ, ರಾಯಚೂರು ಜಿಲ್ಲೆ, ಇವರ ವಿರುದ್ಧ ಸಾಬೀತಾದ ಆರೋಪಗಳಿಗೆ ಅನುಗುಣವಾಗಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (iii) ರಡಿ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1661

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ವಿಷಯ:** ಶ್ರೀ ಹೆಚ್.ಎನ್. ಶ್ರೀನಿವಾಸ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಶ್ರೀ ಬಸವರಾಜಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಡಿ. ಕೃಷ್ಣಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ, ಇವರುಗಳು ಎಸಗಿದ ಅಕ್ರಮಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ ಆದೇಶ.

**ಓದಲಾಗಿದೆ:** ಉಪ ನಿಬಂಧಕರು, (ವಿಚಾರಣೆ–2), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂ. D.O.No.COMPT/UPLOK/BD-311/2008/DRE-2, ದಿ: 23.3.2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಉಪ ನಿಬಂಧಕರು, (ವಿಚಾರಣೆ–2), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಹೆಚ್.ಎನ್. ಶ್ರೀನಿವಾಸ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಮನಗರ; ಶ್ರೀ ಬಸವರಾಜಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ, ಮತ್ತು ಶ್ರೀ ಡಿ. ಕೃಷ್ಣಶೆಟ್ಟಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ ಇವರುಗಳ ವಿರುದ್ಧ ರಾಮನಗರ ತಾಲ್ಲೂಕು, ಮಾದಾಪುರ ಗ್ರಾಮದಲ್ಲಿ ಅಭಯ ಸೇವಾಶ್ರಮಕ್ಕೆ ರಸ್ತೆ ನಿರ್ಮಿಸುವಲ್ಲಿ ಎಸಗಿದ ಅಕ್ರಮ ಹಾಗೂ ಹಣ ದುರುಪಯೋಗಗಳ ಬಗ್ಗೆ ಶ್ರೀ ಕೆ. ರಾಮರಾಜು ಎಂಬುವರು ದೂರು ಸಲ್ಲಿಸಿದ್ದ ಮೇರೆಗೆ ಕೈಗೊಂಡ ತನಿಖೆ ವರದಿಯನ್ನು ಹಾಗೂ ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12 (3) ರಡಿ ನೀಡಿರುವ ವರದಿಯನ್ನು ಕಳುಹಿಸುತ್ತಾ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನಂತೆ ಕ್ರಮವಹಿಸಲು ಕೋರಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ಸೆಕ್ಷನ್ 12(3) ರಡಿ ಕಳುಹಿಸಿರುವ ತಮ್ಮ ವರದಿಯಲ್ಲಿ ಶ್ರೀ ಹೆಚ್.ಎನ್. ಶ್ರೀನಿವಾಸ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಮನಗರ, ಶ್ರೀ ಬಸವರಾಜಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ, ಮತ್ತು ಶ್ರೀ ಡಿ. ಕೃಷ್ಣಶೆಟ್ಟಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ, ಇವರುಗಳ ವಿರುದ್ಧದ ಆರೋಪಗಳು ತನಿಖೆಯಲ್ಲಿ ನಿಜವೆಂದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಸದರಿ ಆರೋಪಿಗಳ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಲು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14 (ಎ) ರಡಿಯಲ್ಲಿ ವಿವರವಾದ ಇಲಾಖಾ ವಿಚಾರಣೆ ಕೈಗೊಳ್ಳಲು ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ, (1) ಶ್ರೀ ಹೆಚ್.ಎನ್. ಶ್ರೀನಿವಾಸ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಮನಗರ, (2) ಶ್ರೀ ಬಸವರಾಜಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ, ಮತ್ತು (3) ಶ್ರೀ ಡಿ. ಕೃಷ್ಣಶೆಟ್ಟಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ, ಇವರುಗಳ ವಿರುದ್ಧದ ಆರೋಪಗಳು ಲೋಕಾಯುಕ್ತರ ತನಿಖೆಯಲ್ಲಿ ನಿಜವೆಂದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನಂತೆ ಪ್ರಕರಣದಲ್ಲಿನ ಆರೋಪಿಗಳ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಲು ಹಾಗೂ ಅದಕ್ಕಾಗಿ ವಿವರವಾದ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14 (ಎ) ರಡಿಯಲ್ಲಿ ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತಕ್ಕೆ ವಹಿಸಲು ಸರ್ಕಾರವು ನಿರ್ಣಯಿಸಿದೆ. ಅದರಂತೆ ಕೆಳಕಂಡ ಆದೇಶ.

**ಆದೇಶ ಸಂಖ್ಯೆ ಗ್ರಾಅಪ 3 ಇಎನ್‌ಕ್ಯೂ 09 ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಹೆಚ್.ಎನ್. ಶ್ರೀನಿವಾಸ, ಅಂದಿನ ಕಾರ್ಯಪಾಲಕ ಇಂಜಿನಿಯರ್, (ಪ್ರಸ್ತುತ ಅಧೀಕ್ಷಕ ಇಂಜಿನಿಯರ್, ಹೇಮಾವತಿ ಯೋಜನಾ ವೃತ್ತ) ಶ್ರೀ ಬಸವರಾಜಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ಪ್ರಸ್ತುತ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಮನಗರ) ಮತ್ತು ಶ್ರೀ ಡಿ. ಕೃಷ್ಣಶೆಟ್ಟಿ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಮನಗರ, ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗಿಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ರೀತ್ಯಾ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಾವಳಿಗಳ ನಿಯಮ 14(ಎ) ರನ್ವಯ ಈ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1662

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ತೋಟಗಾರಿಕೆ ಸಚಿವಾಲಯ

**ವಿಷಯ:** ಬಿ.ಎಸ್ಸಿ. (ತೋಟಗಾರಿಕೆ) ಸ್ನಾತಕ ಪದವಿ ಕಾರ್ಯಕ್ರಮಕ್ಕೆ ಕೃಷಿಕರ/ಕೃಷಿಕರ ಮಕ್ಕಳ ಕೋಟಾದಡಿಯಲ್ಲಿ ಪ್ರವೇಶ ನೀಡಲು ಆಯ್ಕೆ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಕುಲಸಚಿವರು, ತೋಟಗಾರಿಕೆ ವಿಶ್ವವಿದ್ಯಾಲಯ, ಬಾಗಲಕೋಟೆರವರ ಪತ್ರ ಸಂಖ್ಯೆ ತೋವಿವಿಬಾ/ವಿಅ/ 430/2009–10, ದಿನಾಂಕ 16–5–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕುಲಸಚಿವರು, ತೋಟಗಾರಿಕೆ ವಿಶ್ವವಿದ್ಯಾಲಯ, ಬಾಗಲಕೋಟೆರವರ ಪ್ರಸ್ತಾವನೆಯಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯ, ಬಾಗಲಕೋಟೆಯು 2008ನೇ ಸಾಲಿನಿಂದ ಕಾರ್ಯಚಟುವಟಿಕೆ ಪ್ರಾರಂಭವಾಗಿದ್ದು, 2009–10ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ಬಿ.ಎಸ್ಸಿ. (ತೋಟಗಾರಿಕೆ) ಸ್ನಾತಕ ಪದವಿಗೆ ಪ್ರವೇಶ ಪ್ರಕ್ರಿಯೆ ಪ್ರಾರಂಭಗೊಂಡಿದ್ದು, ಒಟ್ಟು ಪ್ರವೇಶ ಸಂಖ್ಯೆಯ ಶೇ.23.8% ರಷ್ಟು ಸೀಟುಗಳನ್ನು ಕೃಷಿಕರು/ಕೃಷಿಕರ ಮಕ್ಕಳಿಗೆ ಮೀಸಲಿಟ್ಟಿರುವುದರಿಂದ ಪ್ರವೇಶ ಖೋಟಾವನ್ನು ಭರ್ತಿ ಮಾಡಲು ರಾಜ್ಯದ ವಿಶ್ವವಿದ್ಯಾಲಯಗಳಲ್ಲಿರುವಂತೆ ಈ ವಿಶ್ವವಿದ್ಯಾಲಯಕ್ಕೂ ಸಹ ಕೆಳಕಂಡ ಸದಸ್ಯರನ್ನು ಒಳಗೊಂಡಂತೆ ಆಯ್ಕೆ ಸಮಿತಿ ರಚಿಸಲು ಕೋರಿರುತ್ತಾರೆ.

| ಕ್ರ. ಸಂ. | ಸಮಿತಿ ಸದಸ್ಯರು | ಪದನಾಮ |
|---|---|---|
| 1 | ಡೀನ್ (ತೋಟಗಾರಿಕೆ) ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ | ಅಧ್ಯಕ್ಷರು |
| 2 | ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಬಾಗಲಕೋಟೆ | ಸದಸ್ಯರು |
| 3 | ಜಂಟಿ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಬೆಂಗಳೂರು | ಸದಸ್ಯರು |

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 187 ತೋಇವಿ 2009, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಗಳ ಹಿನ್ನೆಲೆಯಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯ, ಬಾಗಲಕೋಟೆ ಇಲ್ಲಿ ಬಿ.ಎಸ್ಸಿ. (ತೋಟಗಾರಿಕೆ) ಸ್ನಾತಕ ಪದವಿಗೆ ಒಟ್ಟು ಪ್ರವೇಶ ಸಂಖ್ಯೆಯ ಶೇ 23.8% ರಷ್ಟು ಸೀಟುಗಳನ್ನು ಕೃಷಿಕರು/ಕೃಷಿಕರ ಮಕ್ಕಳಿಗೆ ಮೀಸಲಿಡುವ ಬಗ್ಗೆ ಈ ಕೆಳಕಂಡಂತೆ ಆಯ್ಕೆ ಸಮಿತಿ ರಚಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ಸಮಿತಿ ಸದಸ್ಯರು | ಪದನಾಮ |
|---|---|---|
| 1 | ಡೀನ್ (ತೋಟಗಾರಿಕೆ) ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ | ಅಧ್ಯಕ್ಷರು |
| 2 | ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಬಾಗಲಕೋಟೆ | ಸದಸ್ಯರು |
| 3 | ಜಂಟಿ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಬೆಂಗಳೂರು | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1664

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಮೂಅಇ 61 ಮೂಇವಿ 2008, ದಿನಾಂಕ: 22ನೇ ಜೂನ್ 2009**

**ವಿಷಯ:** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ವಿಶೇಷ ಕಾರ್ಯದರ್ಶಿಯವರಿಗೆ ನ್ಯೂ ಕಾರ್ ಮೊಬೈಲ್ ಇವರಿಂದ ಖಾಸಗಿ ವಾಹನ ಪಡೆದು ಅದನ್ನು ಕಛೇರಿ ಕೆಲಸಕ್ಕಾಗಿ ಉಪಯೋಗಿಸಿದ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ : ಮೂಅಇ 61 ಮೂಇವಿ 2008, ದಿನಾಂಕ: 5/6/2009

ಉಲ್ಲೇಖಿತ ಸರ್ಕಾರಿ ಆದೇಶದ ಕಂಡಿಕೆ 2ನ್ನು ಈ ಕೆಳಗಿನಂತೆ ಮಾರ್ಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

**"ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2052–ಸಚಿವಾಲಯ ಸಾಮಾನ್ಯ ಸೇವೆಗಳು–090–ಸಚಿವಾಲಯ–01–ಕಸಸ–051"**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1665

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಉನ್ನತ ಶಿಕ್ಷಣ ಸಚಿವಾಲಯ

### ಆದೇಶ

**ಸಂಖ್ಯೆ: ಇಡಿ 193 ಯೋಯೋಕ 2008, ಬೆಂಗಳೂರು, ದಿನಾಂಕ: 25ನೇ ಜೂನ್ 2009**

**ವಿಷಯ:** ಶಿಕ್ಷಣ ಇಲಾಖೆಯ ಉನ್ನತ ಶಿಕ್ಷಣ ವಲಯದಡಿ ಬರುವ ಕಾಲೇಜು ಶಿಕ್ಷಣ ಇಲಾಖೆಯಡಿ ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಪ್ರಾರಂಭಿಸುವ ಬಗ್ಗೆ ಹೊರಡಿಸಿದ ಆದೇಶಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ : ಇಡಿ 144 ಯೋಯೋಕ 2007 ದಿನಾಂಕ 27–04–2007
(ಇಡಿ 66 ಸ್ವೀಮರ (ಯುನಿಕ್) 2007, ದಿನಾಂಕ 27–04–2007
2) ಇಡಿ 193 ಯೋಯೋಕ 2008 ದಿನಾಂಕ : 1806–2009 ರ ತಿದ್ದುಪಡಿ ಆದೇಶ.

ಸರ್ಕಾರಿ ಆದೇಶ ಸಂಖ್ಯೆ : ಇಡಿ 144 ಯೋಯೋಕ 2007 ದಿನಾಂಕ 27–04–2007ರ ಪುಟ 9ರ ಕ್ರಮ ಸಂಖ್ಯೆ 50ಕ್ಕೆ 2009–10ನೇ ಸಾಲಿನಿಂದ ಜಾರಿಗೆ ಬರುವಂತೆ ಬ್ಯಾಡಗಿ, ಹಾವೇರಿ ಜಿಲ್ಲೆ, ಇಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು, ಚಿಕ್ಕಬಾಸೂರು ಗ್ರಾಮಕ್ಕೆ ಸ್ಥಳಾಂತರಿಸಿ ಹೊರಡಿಸಲಾದ ಸಮ ಸಂಖ್ಯೆಯ ದಿನಾಂಕ:18.06.2009ರ ತಿದ್ದುಪಡಿ ಆದೇಶವನ್ನು ಈ ಮೂಲಕ ರದ್ದುಪಡಿಸಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಬ್ಯಾಡಗಿ, ಹಾವೇರಿ ಜಿಲ್ಲೆ, ಇಲ್ಲಿಯೇ ಮುಂದುವರಿಸಲಾಗಿದೆ. ಹಾಗೂ ಚಿಕ್ಕಬಾಸೂರು, ಬ್ಯಾಡಗಿ ತಾಲ್ಲೂಕು, ಇಲ್ಲಿ ಪ್ರಸಕ್ತ ಸಾಲಿಗೆ ಬಿ.ಎ., ಬಿ.ಕಾಂ. ಬಿ.ಎಸ್.ಸಿ. ಕೋರ್ಸುಗಳನ್ನು ಪ್ರಾರಂಭಿಸಲು ಸಹ ಸರ್ಕಾರ ಅನುಮತಿ ನೀಡಿದೆ. ಉಳಿದ ಅಂಶಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1666

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

**ಶಿಕ್ಷಣ ಸಚಿವಾಲಯ**

**ಕಛೇರಿ ಆದೇಶ**

**ವಿಷಯ:** ಶಿಕ್ಷಣ ಇಲಾಖೆಯ ಪ್ರಾಥಮಿಕ ಮತ್ತು ಪ್ರೌಢ ವಿಭಾಗದಲ್ಲಿ ವಿಚಕ್ಷಣಾ ಕೋಶವನ್ನು (Vigilance Cell) ರಚಿಸುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ಶಿಕ್ಷಣ ಅಧಿನಿಯಮ 1983ರ ಎರಡನೇ ಚಾಪ್ಟರ್‌ನ ಕಲಂ 8 (4) ರ ಅಡಿಯಲ್ಲಿ ಹಾಗೂ ಹತ್ತನೇ ಚಾಪ್ಟರ್‌ನ ಕಲಂ 57 (1) ರಡಿಯಲ್ಲಿ ವಿಚಕ್ಷಣಾ ಕೋಶವನ್ನು ರಚಿಸಲು ಅಧಿಕಾರ ಪ್ರದತ್ತವಾಗಿದೆ. ಆದರೆ ಇದುವರೆವಿಗೂ ಸರ್ಕಾರದ ಮಟ್ಟದಲ್ಲಿ ಈ ರೀತಿಯ ವಿಚಕ್ಷಣಾ ಕೋಶವನ್ನು ರಚಿಸಿರುವುದಿಲ್ಲ. ಶಿಕ್ಷಣ ಇಲಾಖೆಯ ಪ್ರಾಥಮಿಕ ಮತ್ತು ಪ್ರೌಢ ವಿಭಾಗದಲ್ಲಿ ಶಾಲೆಗಳು, ಪದವಿ ಪೂರ್ವ ಕಾಲೇಜುಗಳು ಮತ್ತು ಅಧೀನ ಇಲಾಖೆಗಳಿಗೆ ಸಂಬಂಧಿಸಿದಂತೆ ಇಲಾಖೆಯಲ್ಲಿ ದೂರುಗಳು ಸ್ವೀಕೃತವಾಗುತ್ತಿದ್ದು, ಇವುಗಳ ಪರಿಶೀಲನೆಗಾಗಿ ಕೆಲವು ಅಧಿಕಾರಿ/ಸಿಬ್ಬಂದಿಗಳನ್ನೊಳಗೊಂಡ ವಿಚಕ್ಷಣಾ ಕೋಶವನ್ನು ರಚಿಸಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಇಡಿ 86 ಡಿಜಿಎಂ 2009, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿಕ್ಷಣ ಇಲಾಖೆಯ ಪ್ರಾಥಮಿಕ ಮತ್ತು ಪ್ರೌಢ ವಿಭಾಗದಲ್ಲಿ ಸ್ವೀಕೃತವಾಗುವ ದೂರುಗಳ ಪರಿಶೀಲನೆಗಾಗಿ ಕೆಳಕಂಡ ಅಧಿಕಾರಿ/ಸಿಬ್ಬಂದಿಗಳನ್ನು ಒಳಗೊಂಡ, ರಾಜ್ಯ ವ್ಯಾಪ್ತಿಯನ್ನು ಉಳ್ಳ, ವಿಚಕ್ಷಣಾ ಕೋಶವನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿ ಆದೇಶಿಸಲಾಗಿದೆ.

1. ಶ್ರೀ ಬಿ. ರಾಜಣ್ಣ – ನಾಯಕರು
   ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)
2. ಶ್ರೀ ಎಂ.ಎನ್. ಸೋಮಶೇಖರ್ – ಉಪ ನಾಯಕರು
   ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ)
3. ಶ್ರೀಮತಿ ಜ್ಯೋತಿ ಆರ್.ಜೆ., ಶಾಖಾಧಿಕಾರಿ – ಸದಸ್ಯರು
4. ಶ್ರೀ ಶ್ರೀಪಾದು, ಶಾಖಾಧಿಕಾರಿ – ಸದಸ್ಯರು
5. ಶ್ರೀಮತಿ ಮುದ್ದುರತ್ನ, ಹಿರಿಯ ಸಹಾಯಕರು – ಸದಸ್ಯರು
6. ಶ್ರೀ ಬಾಣದ ರಂಗಯ್ಯ, ಸಹಾಯಕರು – ಸದಸ್ಯರು

ವಿಚಕ್ಷಣಾ ಕೋಶವು ಕೆಳಕಂಡ ಮಾರ್ಗಸೂಚಿಗಳನ್ನು ಪಾಲಿಸುವುದು

- ಪ್ರಧಾನ ಕಾರ್ಯದರ್ಶಿ ಇವರಿಗೆ ಮಾತ್ರ ವರದಿ ಮಾಡುವುದು.
- ಪ್ರಧಾನ ಕಾರ್ಯದರ್ಶಿಯವರ ಪೂರ್ವಾನುಮತಿಯನ್ನು ಪಡದುಕೊಂಡೇ ತಪಾಸಣೆ/ವಿಚಾರಣೆ ನಡೆಸುವುದು.
- ಉಪ ಕಾರ್ಯದರ್ಶಿ ಅಥವಾ ಅಧೀನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಮಾತ್ರ ತಪಾಸಣೆ/ವಿಚಾರಣೆ ನಡೆಸುವುದು.
- ತಪಾಸಣೆ/ವಿಚಾರಣೆ ನಡೆಸಿದ ಇಪ್ಪತ್ನಾಲ್ಕು ಗಂಟೆಗಳ ಒಳಗೆ ವರದಿಯನ್ನು ಪ್ರಧಾನ ಕಾರ್ಯದರ್ಶಿಯವರಿಗೆ ನೀಡುವುದು.
- ಸಂಗ್ರಹಿಸಿದ ಮಾಹಿತಿಯನ್ನು ಪ್ರಧಾನ ಕಾರ್ಯದರ್ಶಿಯವರ ಪೂರ್ವಾನುಮತಿ ಇಲ್ಲದೆ ಯಾವುದೇ ಪ್ರಾಧಿಕಾರಕ್ಕೆ ನೀಡುವಂತಿಲ್ಲ.
- ಯಾವುದೇ ಸಂದರ್ಭದಲ್ಲಿ ಮೂವರು ಸದಸ್ಯರಿಗಿಂತ ಕಡಿಮೆ ಸದಸ್ಯರು ತಪಾಸಣೆ/ವಿಚಾರಣೆಗೆ ಹೋಗುವಂತಿಲ್ಲ.
- ತಪಾಸಣೆ/ವಿಚಾರಣೆ ನಡೆಸುವ ಸಂದರ್ಭದಲ್ಲಿ ಒಬ್ಬ ಮಹಿಳಾ ಸದಸ್ಯರು ಕಡ್ಡಾಯವಾಗಿ ಇರಬೇಕು.
- ನಾಯಕರು/ಉಪ ನಾಯಕರು ಹಾಗೂ ಎಲ್ಲಾ ಸದಸ್ಯರು ತಮಗೆ ವಹಿಸಿದ ಕಾರ್ಯನಿರ್ವಹಣೆಯ ಬಗ್ಗೆ ಹಾಗೂ ಕಾರ್ಯ ನಿರ್ವಹಿಸಿದ ಬಗ್ಗೆ ರಹಸ್ಯ ಹಾಗೂ ಗೋಪ್ಯತೆಯನ್ನು ಪೂರ್ಣ ಪ್ರಮಾಣದಲ್ಲಿ ಕಾಪಾಡತಕ್ಕದ್ದು.

**ಎಂ.ಎನ್. ಸೋಮಶೇಖರ್**

ಪಿ.ಆರ್. 1667

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ)

ಶಿಕ್ಷಣ ಇಲಾಖೆ, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

**ವಿಷಯ:** ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಉಪನ್ಯಾಸಕರುಗಳ ಹುದ್ದೆಗಳಿಗೆ ತಾತ್ಕಾಲಿಕವಾಗಿ ಗೌರವಧನದ ಆಧಾರದ ಮೇಲೆ ಉಪನ್ಯಾಸಕರ ಸೇವೆಯನ್ನು ಪಡೆಯುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಇಡಿ 88 ಟಿಪಿಯು 2008 ದಿನಾಂಕ : 13/8/2008
2) ಆಯುಕ್ತರು, ಪದವಿಪೂರ್ವ ಶಿಕ್ಷಣ ಇಲಾಖೆ ಇವರ ಪ್ರಸ್ತಾವನೆ ದಿನಾಂಕ : 25/8/2008
3) ಸರ್ಕಾರದ ಆದೇಶ ಸಂಖ್ಯೆ ಇಡಿ 152 ಟಿಪಿಯು 2008 ದಿನಾಂಕ : 14/10/2008

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 13/8/2008ರ ಸರ್ಕಾರದ ಆದೇಶದಲ್ಲಿ ಪದವಿ ಪೂರ್ವ ಶಿಕ್ಷಣ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ 4056 ಉಪನ್ಯಾಸಕರ ಹುದ್ದೆಗಳಿಗೆ ಆಯಾ ಆಯಾ ವಿಷಯದಲ್ಲಿನ ನಿವೃತ್ತ ಉಪನ್ಯಾಸಕರ ಸೇವೆಯನ್ನು ಮಾಸಿಕ ರೂ. 5,000/– ಗೌರವ ಸಂಭಾವನೆ ನೀಡಿ, ಅವರ ಸೇವೆಯನ್ನು ಶೈಕ್ಷಣಿಕ ಹಿತದೃಷ್ಟಿಯಿಂದ ಬಳಸಿಕೊಳ್ಳಲು ಮಂಜೂರಾತಿ ನೀಡಿ ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 25/8/2008ರ ಪ್ರಸ್ತಾವನೆಯಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಇವರು ಪ್ರಸ್ತುತ ರಾಜ್ಯದಲ್ಲಿ ಖಾಲಿ ಇರುವ ಸುಮಾರು 4056 ಪದವಿ ಪೂರ್ವ ಶಿಕ್ಷಣ ಇಲಾಖೆಯ ವಿವಿಧ ವಿಷಯಗಳ ಉಪನ್ಯಾಸಕರ ಹುದ್ದೆಗಳು ಖಾಲಿ ಇರುತ್ತದೆ. ಇಷ್ಟೊಂದು ಸಂಖ್ಯೆಯಲ್ಲಿ ನಿವೃತ್ತ ಉಪನ್ಯಾಸಕರು ಲಭ್ಯವಾಗದ ಹಿನ್ನೆಲೆಯಲ್ಲಿ ಆಯಾಯ ವಿಷಯಗಳಲ್ಲಿ ಸ್ನಾತಕೋತ್ತರ ಪದವಿಯಲ್ಲಿ ದ್ವಿತೀಯ ದರ್ಜೆಯಲ್ಲಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳನ್ನು ತಾತ್ಕಾಲಿಕವಾಗಿ ಗೌರವಧನ ಆಧಾರದ ಮೇಲೆ ಅವರ ಸೇವೆಯನ್ನು ಸಕ್ರಮವಾಗಿ ನಿಯಮಾನುಸಾರ ಖಾಲಿ ಉಪನ್ಯಾಸಕರುಗಳ ಹುದ್ದೆಯನ್ನು ಭರ್ತಿ ಮಾಡುವವರೆಗೆ ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ಕೋರಿದ್ದರು. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ದಿನಾಂಕ:14/10/2008ರ ಆದೇಶದಲ್ಲಿ ಗೌರವಧನದ ಆಧಾರದ ಮೇಲೆ ಆಯಾಯ ವಿಷಯಗಳಲ್ಲಿ ದ್ವಿತೀಯ ದರ್ಜೆಯಲ್ಲಿ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳಲು ಮಂಜೂರಾತಿ ನೀಡಿದೆ.

ರಾಜ್ಯದಲ್ಲಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿಯಿರುವ ಉಪನ್ಯಾಸಕರ ಹುದ್ದೆಗಳ ನೇರ ನೇಮಕಾತಿ ಪ್ರಕ್ರಿಯೆಯು ಸಂಪೂರ್ಣವಾಗಿ ಆಗಿಲ್ಲದೇ ಇರುವುದರಿಂದ 2009–10ನೇ ಶೈಕ್ಷಣಿಕ ಸಾಲಿನಲ್ಲಿಯೂ ಸಹ ದಿನಾಂಕ:14/10/2008ರ ಸರ್ಕಾರದ ಆದೇಶ ಸಂಖ್ಯೆ ಇಡಿ 152 ಟಿಪಿಯು 2008 ರಲ್ಲಿನ ನಿಬಂಧನೆ/ಷರತ್ತುಗಳಂತೆ, 2009–10ನೇ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆ ಮಾಡಿ ಹುದ್ದೆಗಳನ್ನು ಭರ್ತಿ ಮಾಡುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮಾಸಿಕ ಗೌರವಧನದ ಮೇಲೆ ಅತಿಥಿ ಉಪನ್ಯಾಸಕರನ್ನು ಆಯಾಯ ಕಾಲೇಜಿನ ಪ್ರಾಂಶುಪಾಲರು ಹಾಗೂ ಹಿರಿಯ ಉಪನ್ಯಾಸಕರು ಇರುವ ಸಮಿತಿಗೆ ತಾತ್ಕಾಲಿಕವಾಗಿ ಅತಿಥಿ ಉಪನ್ಯಾಸಕರನ್ನು ನೇಮಕಾತಿ ಮಾಡಿಕೊಳ್ಳಲು ಅಧಿಕಾರವನ್ನು ನೀಡಲು ಸಚಿವ ಸಂಪುಟದ ಅನುಮೋದನೆ ನೀಡಿದೆ. ಆದ್ದರಿಂದ 2009–10ನೇ ಶೈಕ್ಷಣಿಕ ಸಾಲಿನಲ್ಲಿ ಗೌರವಧನದ ಆಧಾರದ ಮೇಲೆ ಅತಿಥಿ ಉಪನ್ಯಾಸಕರನ್ನು ತಾತ್ಕಾಲಿಕವಾಗಿ ನೇಮಕಾತಿ ಮಾಡಿಕೊಳ್ಳಲು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಇಡಿ 88 ಟಿಪಿಯು 2009, ಬೆಂಗಳೂರು, ದಿನಾಂಕ: 16ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರಸ್ತುತ ನೇಮಕಾತಿಯಿಂದ ಖಾಲಿ ಇರುವ ಉಪನ್ಯಾಸಕರ ಹುದ್ದೆಗಳ ಕೊರತೆಯನ್ನು ನಿವಾರಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ತಾತ್ಕಾಲಿಕವಾಗಿ ಆಯಾಯ ವಿಷಯಗಳಲ್ಲಿ ಕನಿಷ್ಠ ದ್ವಿತೀಯ ದರ್ಜೆಯಲ್ಲಿ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳಿಂದ ಅವರ ಕಾರ್ಯಭಾರಕ್ಕನುಗುಣವಾಗಿ ವಾರದಲ್ಲಿ ನಾಲ್ಕು ಘಂಟೆಗಳಂತೆ ತಿಂಗಳಲ್ಲಿ 16 ಘಂಟೆಗಳಿಗೆ, ತಿಂಗಳಿಗೆ ಗರಿಷ್ಠ ರೂ. 2400/– (ಎರಡು ಸಾವಿರದ ನಾಲ್ಕು ನೂರು) ಹಾಗೂ ವಾರದಲ್ಲಿ 8 ಘಂಟೆಗಳಂತೆ ತಿಂಗಳಿಗೆ 32 ಘಂಟೆಗಳಿಗೆ, ತಿಂಗಳಿಗೆ ಗರಿಷ್ಠ ರೂ. 4,800/– ಗಳಿಗೆ (ನಾಲ್ಕು ಸಾವಿರದ ಎಂಟು ನೂರು) ಮೀರದಂತೆ ಗೌರವಧನವನ್ನು ನೀಡಿ ಉಪನ್ಯಾಸಕರ ಹುದ್ದೆಯ ಕರ್ತವ್ಯವನ್ನು ನಿರ್ವಹಿಸುವುದಕ್ಕಾಗಿ ಅವರ ಸೇವೆಯನ್ನು ಪಡೆಯಲು ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು**

1) ಆಯಾಯ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ಪದವೀಧರರ ಸೇವೆಯನ್ನು ಆಯಾಯ ವಿಷಯದಲ್ಲಿ ಅತಿಥಿ ಉಪನ್ಯಾಸಕರಾಗಿ ತಾತ್ಕಾಲಿಕವಾಗಿ ನಿಗದಿತ ಅವಧಿಗೆ ಮಾತ್ರ ಮಾಸಿಕ ಗೌರವಧನ ಪಾವತಿಯ ಮೇಲೆ ನೇಮಕಾತಿ ಮಾಡಿಕೊಳ್ಳತಕ್ಕದ್ದು.
2) ಮಂಜೂರಾದ ಹಾಗೂ ಖಾಲಿಯಿರುವ ಉಪನ್ಯಾಸಕರ ಹುದ್ದೆಗಳಿಗೆ ಮಾತ್ರ ಅತಿಥಿ ಉಪನ್ಯಾಸಕರ ಸೇವೆಯನ್ನು ಉಪಯೋಗಿಸಿಕೊಳ್ಳತಕ್ಕದ್ದು.

3) ಪ್ರತಿ ಅತಿಥಿ ಉಪನ್ಯಾಸಕರಿಗೆ ವಾರದಲ್ಲಿ ಗರಿಷ್ಠ 08 ಗಂಟೆಗಳ ಕಾರ್ಯಭಾರ ಮಾತ್ರ ನಿರ್ವಹಿಸಲು ಅನುಮತಿ ನೀಡತಕ್ಕದ್ದು.
4) ಈ ಅತಿಥಿ ಉಪನ್ಯಾಸಕರ ಸೇವೆಯನ್ನು ಖಾಯಂ ಉಪನ್ಯಾಸಕರ ನೇಮಕಾತಿ ಆಗುವವರೆವಿಗೆ ಅಥವಾ 2009–10ನೇ ಸಾಲಿನ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಬಳಸಿಕೊಳ್ಳತಕ್ಕದ್ದು.
5) ಸರ್ಕಾರದ ನಿಯಮಗಳನ್ವಯ ಈ ಅವಧಿಯಲ್ಲಿ ಖಾಯಂ ಉಪನ್ಯಾಸಕರು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ತಕ್ಷಣದಿಂದ ಅತಿಥಿ ಉಪನ್ಯಾಸಕರ ಕಾರ್ಯನಿರ್ವಹಣೆಯು ತಂತಾನೆ ರದ್ದಾಗುತ್ತದೆ.
6) ಉಪನ್ಯಾಸಕರೇ ಇಲ್ಲದಿರುವ ಸ್ಥಳದಲ್ಲಿ ಹಾಗೂ ನಿಯೋಜನೆಯಂತಹ ಬದಲಿ ವ್ಯವಸ್ಥೆ ಮಾಡಲು ಸಾಧ್ಯವಿಲ್ಲದಿರುವ ಸ್ಥಳದಲ್ಲಿ ಮಾತ್ರ ಅತಿಥಿ ಉಪನ್ಯಾಸಕರ ಸೇವೆಯನ್ನು ತಾತ್ಕಾಲಿಕವಾಗಿ ಬಳಸಿಕೊಳ್ಳತಕ್ಕದ್ದು.
7) ಆಯಾಯ ವಿಷಯದಲ್ಲಿ ಅತಿಥಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸಲು ಒಬ್ಬರಿಗಿಂತ ಹೆಚ್ಚು ಅಭ್ಯರ್ಥಿಗಳು ಮುಂದೆ ಬಂದಲ್ಲಿ ಅಂತಹವರ ಪೈಕಿ ಆಯಾಯ ವಿಷಯದಲ್ಲಿನ ಸ್ನಾತಕೋತ್ತರ ಪದವಿಯಲ್ಲಿ ಹೆಚ್ಚಿನ ಅಂಕ ಪಡೆದ ಅಭ್ಯರ್ಥಿಯ ಸೇವೆಯನ್ನು ಆಯಾಯ ಕಾಲೇಜಿನ ಪ್ರಾಂಶುಪಾಲರು ಹಾಗೂ ಆಯಾಯ ಕಾಲೇಜಿನ ಹಿರಿಯ ಉಪನ್ಯಾಸಕರು ಇರುವ ಸಮಿತಿಯ ಮೂಲಕ ಆಯ್ಕೆ ಮಾಡಿ ಅತಿಥಿ ಉಪನ್ಯಾಸಕರ ಸೇವೆಯನ್ನು ಪಡೆಯತಕ್ಕದ್ದು.
8) ಪ್ರತಿ ಅತಿಥಿ ಉಪನ್ಯಾಸಕರಿಗೆ ಒಂದು ಗಂಟೆಯ ಬೋಧನಾ ಅವಧಿಗೆ ರೂ. 150–00 ರಂತೆ (ರೂ. ಒಂದು ನೂರ ಐವತ್ತು ಮಾತ್ರ) ಗೌರವ ಧನ ನೀಡಬಹುದು. ವಾರದಲ್ಲಿ ಗರಿಷ್ಠ 08 ಗಂಟೆಗಳ ಕಾರ್ಯಭಾರವನ್ನು ಮಾತ್ರ ಅತಿಥಿ ಉಪನ್ಯಾಸಕರಿಗೆ ವಹಿಸತಕ್ಕದ್ದು. ವಾರದಲ್ಲಿ 04 ಗಂಟೆಗಳಂತೆ ತಿಂಗಳಲ್ಲಿ 16 ಗಂಟೆಗಳ ಕಾರ್ಯಭಾರ ನಿರ್ವಹಿಸುವ ಅತಿಥಿ ಉಪನ್ಯಾಸಕರಿಗೆ ತಿಂಗಳಿಗೆ ಗರಿಷ್ಠ ರೂ. 2400–00 ಗಳನ್ನು ಹಾಗೂ ವಾರದಲ್ಲಿ 08 ಗಂಟೆಗಳಂತೆ ತಿಂಗಳಲ್ಲಿ 32 ಗಂಟೆಗಳ ಕಾರ್ಯಭಾರ ನಿರ್ವಹಿಸುವ ಅತಿಥಿ ಉಪನ್ಯಾಸಕರಿಗೆ ತಿಂಗಳಿಗೆ ಗರಿಷ್ಠ ರೂ. 4800–00 ಗಳಿಗೆ ಮೀರದಂತೆ ಗೌರವಧನವನ್ನು ನಿಗದಿಪಡಿಸತಕ್ಕದ್ದು. ಈ ಗೌರವಧನದ ಮೊತ್ತವನ್ನು ಆಯಾಯ ಕಾಲೇಜುಗಳ ಪ್ರಾಚಾರ್ಯರೇ ನಿಗಧಿಪಡಿಸಿದ ಲೆಕ್ಕ ಶೀರ್ಷಿಕೆಯಿಂದ ಪಡೆದು ನಿಯಮಾನುಸಾರ ವಿತರಿಸತಕ್ಕದ್ದು.
9) ಅತಿಥಿ ಉಪನ್ಯಾಸಕರ ಸೇವೆಯನ್ನು ಬಳಸಿಕೊಳ್ಳುವಾಗ ಅವರಿಗೆ ಸಕ್ಷಮ ಪ್ರಾಧಿಕಾರದ ಆದೇಶವಿಲ್ಲದೆ ಯಾವುದೇ ಆದೇಶವನ್ನು ನೀಡಬಾರದು. ಗೌರವಧನ ವಿತರಣೆಗೆ ಸೂಕ್ತ ಸ್ವೀಕೃತಿಯನ್ನು ಪಡೆಯತಕ್ಕದ್ದು.
10) ಈ ರೀತಿ ಆಯ್ಕೆ ಆಗುವ ಅತಿಥಿ ಉಪನ್ಯಾಸಕರು ಅತಿಥಿ ಉಪನ್ಯಾಸಕರಾಗಿ ಸಲ್ಲಿಸುವ ಸೇವೆಯು ಇತರೆ ಯಾವುದೇ ಸರ್ಕಾರಿ ಸೇವಾ ಸಕ್ರಮಾತಿಗೆ ಪರಿಗಣಿಸತಕ್ಕದ್ದಲ್ಲ.

ಈ ಗೌರವಧನವನ್ನು ವೇತನ ಲೆಕ್ಕ ಶೀರ್ಷಿಕೆ "2202–02–109–0–13 (ಯೋಜನೇತರ)" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 20/5/2009ರ ಅನಧಿಕೃತ ಟಿಪ್ಪಣಿ ಸಂಖ್ಯೆ 792 ವೆಚ್ಚ.8/09 ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಸೇವಾ ನಿಯಮ) ಶಾಖೆಯ ದಿನಾಂಕ 11/5/2009ರ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿ.ಆ.ಸು.ಇ 190 ಸೇನಿಎ 2009 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1669

**ಎಸ್.ಹೆಚ್. ಕುರಿಯವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು–1,2)

## ಸಹಕಾರ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲಾ ಅರಣ್ಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು, ಇದರ 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಕಾಶ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸಿಒ 74 ಸಿಎಲ್ಎಂ 2008, ದಿನಾಂಕ 6.6.2008

2) ಕಾರ್ಯದರ್ಶಿ, ಮೈಸೂರು ಜಿಲ್ಲಾ ಅರಣ್ಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು, ಇವರ ಪತ್ರ ಸಂಖ್ಯೆ ಮೈಜಿಅ–1/2008–09, ದಿನಾಂಕ 03.03.2009.

3) ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರ ಆದೇಶ ಸಂಖ್ಯೆ ಜೆಆರ್ಎಂ.ಆಡಳಿತ. ಎಸ್6 ಎಕ್ಸ್‌ಜಿಎಂ.209.2008–09, ದಿನಾಂಕ 21.2.2009

4) ಮೈಸೂರು ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರ ಪತ್ರ ಸಂಖ್ಯೆ: ಜೆಆರ್ಎ/ಆಡಳಿತ/ ಎಸ್–6/ಹೆಚ್‌ಹೆಚ್‌ಎಸ್/4/2009–10 ದಿನಾಂಕ: 13/4/2009

**ಪ್ರಸ್ತಾವನೆ:**

ಮೈಸೂರು ಜಿಲ್ಲಾ ಅರಣ್ಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇದರ 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 30–09–2008 ರವರೆಗೆ ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಕಾಲಾವಕಾಶ ನೀಡಲಾಗಿರುತ್ತದೆ. ಸಂಘದ ಕಾರ್ಯದರ್ಶಿಯವರು ಮೇಲೆ ಓದಲಾದ (2)ರ ಪತ್ರದಲ್ಲಿ ಮೈಸೂರು ಜಿಲ್ಲೆಯಲ್ಲಿ ಹಲವಾರು ಆನೆಗಳ ಸಾವಿನ ಪ್ರಕರಣಗಳು ಮತ್ತು ಆನೆಗಳು ಕಾಡಿನಿಂದ ಹಳ್ಳಿಗಳಿಗೆ ನುಗ್ಗಿ ಬೆಳೆ ನಾಶಪಡಿಸುವುದು ಸತತವಾಗಿ ನಡೆಯುತ್ತಿದ್ದು, ಸಂಘದ ಸದಸ್ಯರಾದ ಅರಣ್ಯ ಇಲಾಖಾ ಸಿಬ್ಬಂದಿಗಳು ಮುಂಜಾಗ್ರತಾ ಕ್ರಮಗಳಲ್ಲಿ ನಿರತರಾಗಿರುವ ಹಿನ್ನೆಲೆಯಲ್ಲಿ 2006–07 ಮತ್ತು 2007–08ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಮಾರ್ಚ್ 2009ರ ವರೆಗೆ ಕಾಲಾವಕಾಶ ಕೋರಲಾಗಿತ್ತೆಂದೂ ಮೇಲೆ ಓದಲಾದ (3) ರ ಆದೇಶದಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರು 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ:29.03.2009 ರಂದು ನಡೆಸಲು ಅನುಮತಿ ನೀಡಿರುತ್ತಾರೆಂದೂ ತಿಳಿಸಿ 2006–07ನೇ ಸಾಲಿನ ಮಹಾಸಭೆಯನ್ನು ದಿನಾಂಕ 29.03.2009 ರಂದು ನಡೆಸಲು ಕಾಲಾವಕಾಶ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಓ 180 ಸಿಎಲ್ಎಂ 2009, ಬೆಂಗಳೂರು, ದಿನಾಂಕ: 16ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಮೈಸೂರು ಜಿಲ್ಲಾ ಅರಣ್ಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇದರ 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ 31.03.2009 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 ಸದರಿ ಸಂಸ್ಥೆಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ :**

27ನೇ ಪ್ರಕರಣ ಉಪ ಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1) ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31.03.2009 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1) ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1679

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ರಾಮನಗರ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ. ನಂ. 36–37ರ ಬದಲಿಗೆ ರಸ್ತೆ ಕೆಳಸೇತುವೆಗೆ ಕೂಡು ರಸ್ತೆಯ ನಿರ್ಮಿಸಲು ಕಾಮಗಾರಿಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ : ಮೂಅಇ 56 ರಾರಾಹೆ 2007, ದಿನಾಂಕ : 22.12.2008
2) ದಿನಾಂಕ 31–1–2009 ಸಂಖ್ಯೆ ಕಾಅ/ಲೋಇ/ರಾಮನಗರ/ಲೆಶಾ/ಲೆಸ–2/2008–09ರ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ರಾಮನಗರ ವಿಭಾಗ, ರಾಮನಗರರವರ ಪತ್ರ.
3) ದಿನಾಂಕ 23–6–2009 ಸಂಖ್ಯೆ:ಕಾಅ/ಲೋಇ/ರಾಮನಗರ/ಲೆಶಾ/ಲೆಸ–2/2009–10ರ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ರಾಮನಗರ ವಿಭಾಗ, ರಾಮನಗರರವರ ಪತ್ರ.

**ಪ್ರಸ್ತಾವನೆ:**

ರಾಮನಗರ ರೈಲು ನಿಲ್ದಾಣದ ಬಳಿ ಎಲ್.ಸಿ. ನಂ. 36–37ರ ಬದಲಿಗೆ ರಸ್ತೆ ಕೆಳಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಗೆ ಶೇ 50 ರಷ್ಟು ರಾಜ್ಯ ಸರ್ಕಾರದ ಪಾಲಿನ ಮೊತ್ತ ರೂ. 2,86,44,480/– ಗಳನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆಯ ರಾಮನಗರ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರು ಸದರಿ ಕಾಮಗಾರಿಗೆ ಇತ್ತೀಚೆಗೆ ಟೆಂಡರ್ ಕರೆದು ಗುತ್ತಿಗೆದಾರರನ್ನು ನೇಮಿಸಿದ್ದು, ಹಾಗೂ ಕಾಮಗಾರಿಯು ಪ್ರಗತಿಯಲ್ಲಿದ್ದು, ಗುತ್ತಿಗೆದಾರರಿಗೆ ರೂ. 75.00 ಲಕ್ಷಗಳನ್ನು ಪಾವತಿಸಬೇಕಾಗಿರುವುದರಿಂದ ಸದ್ಯಕ್ಕೆ ರೂ. 75.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ (2) ರ ಪತ್ರದಲ್ಲಿ ಕೋರಿದ್ದರ ಮೇರೆಗೆ ಅಷ್ಟೇ ಮೊತ್ತಕ್ಕೆ ಪೇಯೀಸ್ ರಸೀದಿಗೆ ಸಹಿ ಮಾಡಲಾಗಿತ್ತು.

ಈ ಕಾಮಗಾರಿಗೆ ಇದುವರೆಗೂ ರೂ. 75.00 ಲಕ್ಷಗಳು ಖರ್ಚಾಗಿದ್ದು, ಉಳಿಕೆ ರೂ. 2,11,44,480/– ಗಳಲ್ಲಿ ಸದ್ಯಕೆ ಗುತ್ತಿಗೆದಾರರಿಗೆ ರೂ. 50.00 ಲಕ್ಷಗಳನ್ನು ಪಾವತಿಸಬೇಕಾಗಿರುವುದರಿಂದ ಮತ್ತು ಕಾಮಗಾರಿಯ ಪ್ರಗತಿಯನ್ನು ಗಮನಿಸಿ ಹಣ ಬಿಡುಗಡೆಗೆ ಬೇಡಿಕೆಯ ಪತ್ರವನ್ನು ಸಲ್ಲಿಸಲಾಗುವುದು ಎಂದು ಮೇಲೆ ಓದಲಾದ (3)ರ ಪತ್ರದಲ್ಲಿ ಕಾರ್ಯಪಾಲಕ ಅಭಿಯಂತರರು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಮೂಅಇ 43 ರಾರಾಹೆ 2009, ಬೆಂಗಳೂರು, ದಿನಾಂಕ: 3ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮನಗರ ರೈಲ್ವೇ ನಿಲ್ದಾಣದ ಬಳಿ ಇರುವ ಎಲ್.ಸಿ. ನಂ.36 ಮತ್ತು 37ರ ಬದಲಾಗಿ ನಿರ್ಮಿಸಿರುವ ರಸ್ತೆ ಕೆಳ ಸೇತುವೆಗೆ ಕೂಡು ರಸ್ತೆ ನಿರ್ಮಾಣದ ಈ ಕಾಮಗಾರಿಗೆ ತಗಲುವ ಶೇ 50 ರಷ್ಟು ರಾಜ್ಯ ಸರ್ಕಾರದ ಪಾಲಿನ ಬಾಕಿ ಮೊತ್ತ ರೂ. 2,11,44,480/– ಗಳಲ್ಲಿ ರೂ.50.00 ಲಕ್ಷಗಳನ್ನು (ರೂಪಾಯಿ ಐವತ್ತು ಲಕ್ಷ ಮಾತ್ರ) ಮೊತ್ತವನ್ನು 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಲೆಕ್ಕ ಶೀರ್ಷಿಕೆ "5465–01–190–3–04 (ಯೋಜನೆ) ಬಂಡವಾಳ" ಇದರ ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ರಾಮನಗರ ವಿಭಾಗ ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯೀಸ್ ರಸೀತಿಯ ಮೂಲಕ ಡ್ರಾ ಮಾಡಿ ರಸ್ತೆ ಕೆಳಸೇತುವೆಯ ಕೂಡು ರಸ್ತೆ ನಿರ್ಮಾಣದ ವೆಚ್ಚ ಭರಿಸತಕ್ಕದ್ದು.

3. ಈ ಆದೇಶವನ್ನು ದಿನಾಂಕ:16.5.2008 ಸಂಖ್ಯೆ FD 1TFP 2008 ಸರ್ಕಾರಿ ಆದೇಶದಲ್ಲಿ ಇಲಾಖೆ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1684 **ಕೆ.ಎಸ್. ವೇಣುಗೋಪಾಲ**

ಸರ್ಕಾರದ ಅಧೀನ ಕಾಯದರ್ಶಿ, ಮೂಲಭೂತ ಅಭಿವೃದ್ಧಿ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಮುಜರಾಯಿ ಇಲಾಖೆಗೆ ಸೇರಿದ ಬೆಂಗಳೂರು ನಗರ ಚಾಮರಾಜಪೇಟೆ 3ನೇ ಮುಖ್ಯ ರಸ್ತೆಯಲ್ಲಿರುವ ಶ್ರೀ ಚೌಬೀನ್ ಸುಬ್ಬರಾವ್ ಚಾರಿಟೀಸ್ ಸ್ವತ್ತಿನ ಖಾತೆ ಬದಲಾವಣೆಯಲ್ಲಿ ಭಾಗಿಯಾಗಿರುವ ಅಧಿಕಾರಿ/ ಸಿಬ್ಬಂದಿಗಳ ಮೇಲೆ ಸಿ.ಓ.ಡಿ. ತನಿಖೆ ನಡೆಸುವ ಬಗ್ಗೆ.

**ಓದಲಾಗಿದೆ:** ಕಂದಾಯ ಇಲಾಖೆಯ ಕಡತ ಸಂ. ಕಂಇ 109 ಮುಅಬಿ 06 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆ.

**ಪ್ರಸ್ತಾವನೆ:**

ಮೇಲೆ ಉಲ್ಲೇಖಿಸಲಾದ ಕಂದಾಯ ಇಲಾಖೆಯ ಕಡತದಲ್ಲಿ ಬೆಂಗಳೂರು ನಗರದ ಚಾಮರಾಜಪೇಟೆ 3ನೇ ಮುಖ್ಯ ರಸ್ತೆಯಲ್ಲಿರುವ ಶ್ರೀ ಚೌಬೀನ್ ಚಾರಿಟೀಸ್‌ಗೆ ಸೇರಿದ ಆಸ್ತಿಯನ್ನು 1992ರಲ್ಲಿ ನೋಂದಣಿ ಮೂಲಕ ಮುಜರಾಯಿ ಇಲಾಖೆಗೆ ವರ್ಗಾವಣೆಯಾಗಿದ್ದರೂ ಸುಮಾರು 90 ವರ್ಷಗಳ ನಂತರ ಸದರಿ ಸ್ವತ್ತನ್ನು ಮುಜರಾಯಿ ಇಲಾಖೆಯ ಗಮನಕ್ಕೆ ಬಾರದಂತೆ ಕೆಲವು ಭೂ ಮಾಫಿಯಾಗಳು ಹಾಗೂ ಮಹಾನಗರ ಪಾಲಿಕೆಯ ಅಧಿಕಾರಿ/ಸಿಬ್ಬಂದಿಗಳು ಹಾಗೂ ಮುಜರಾಯಿ ಇಲಾಖೆಯ ಸಿಬ್ಬಂದಿಗಳು ಈ ಪ್ರಕರಣದಲ್ಲಿ ಶಾಮೀಲಾಗಿ ಆಸ್ತಿಯನ್ನು ಲಪಟಾಯಿಸಲು ಸಂಚು ರೂಪಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಕ್ರಿಮಿನಲ್ ಮೊಕದ್ದಮೆ ಹೂಡುವ ಮೊದಲು ಇಡೀ ಪ್ರಕರಣವನ್ನು ಸಿ.ಓ.ಡಿ. ತನಿಖೆಗೆ ಒಳಪಡಿಸುವಂತೆ ಕೋರಲಾಗಿರುತ್ತದೆ.

ಕಂದಾಯ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ ಒಇ 88 ಸಿಓಡಿ 09 ಬೆಂಗಳೂರು, ದಿನಾಂಕ: 7ನೇ ಜುಲೈ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮುಜರಾಯಿ ಇಲಾಖೆಗೆ ಸೇರಿದ ಬೆಂಗಳೂರು ನಗರ ಚಾಮರಾಜಪೇಟೆ 3ನೇ ಮುಖ್ಯರಸ್ತೆಯಲ್ಲಿರುವ ಶ್ರೀ ಚೌಬೀನ್ ಸುಬ್ಬರಾವ್ ಚಾರಿಟೀಸ್ ಸ್ವತ್ತಿನ ಖಾತೆ ಬದಲಾವಣೆಯಾಗಿರುವ ಪ್ರಕರಣವನ್ನು ಸಿ.ಐ.ಡಿ. ವಿಚಾರಣೆಗೆ ವಹಿಸಲು ಆದೇಶಿಸಲಾಗಿದೆ.

ಸಿ.ಐ.ಡಿ. ತಂಡವು ಈ ಪ್ರಕರಣದ ವಿಚಾರಣೆಯನ್ನು ಪೂರ್ಣಗೊಳಿಸಿ ಶೀಘ್ರದಲ್ಲಿ ವರದಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಕಂದಾಯ ಇಲಾಖೆಯು ವಿಚಾರಣೆಗೆ ಬೇಕಾಗಬಹುದಾದ ಅಗತ್ಯ ದಾಖಲೆ/ಮಾಹಿತಿಯನ್ನು ಸಿ.ಐ.ಡಿ ಅಧಿಕಾರಿಗಳಿಗೆ ಒದಗಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1689 **ಪಿ. ಶಿವರಾಮ ಭಟ್**

ಸರ್ಕಾರದ ಅಧೀನ ಕಾಯದರ್ಶಿ, ಒಳಾಡಳಿತ ಇಲಾಖೆ (ಅಪರಾಧಗಳು)

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಕಇ 2 ಭಾಮಮ 2007, ಬೆಂಗಳೂರು, ದಿನಾಂಕ: 1ನೇ ಜೂನ್ 2009**

ಸರ್ಕಾರಿ ಅಧಿಸೂಚನೆ ಸಂಖ್ಯೆ : ಸಕಇ 2 ಭಾಮಮ 2007, ದಿನಾಂಕ: 3.1.2009ರಲ್ಲಿ ನಮೂದಿಸಿರುವ ಪ್ರಧಾನ ಮಂತ್ರಿಗಳ ಹೊಸ 15 ಅಂಶಗಳ ಕಾರ್ಯಕ್ರಮ ಅನುಷ್ಠಾನ–ರಾಜ್ಯ ಮಟ್ಟದ ಪ್ರಗತಿ ಪರಿಶೀಲನಾ ಸಮಿತಿಯ ಕ್ರಮ ಸಂಖ್ಯೆ : 21(3) ಸದಸ್ಯರ ಹೆಸರಾದ "ಶ್ರೀ ಗೇರಾಲ್ಡ್ ಫೆರ್ನಾಂಡಿಸ್ ಬಿನ್ ಫಿಲಿಕ್ಸ್ ಫರ್ನಾಂಡಿಸ್, ಜಿಲ್ಲಾ ಪಂಚಾಯತ್ ಸದಸ್ಯರು, ಶಿರ್ವ, ಉಡುಪಿ ಜಿಲ್ಲೆ" ಎಂಬುವುದರ ಬದಲಾಗಿ **"ಶ್ರೀ ಜೆರಾಲ್ಡ್ ಫೆರ್ನಾಂಡೀಸ್ ಬಿನ್ ಫೆಲಿಕ್ಸ್ ಫೆರ್ನಾಂಡೀಸ್, ಜಿಲ್ಲಾ ಪಂಚಾಯತ್ ಸದಸ್ಯರು, ಶಿರ್ವ, ಉಡುಪಿ ಜಿಲ್ಲೆ",** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1696 **ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

**INFRASTRUCTURE DEVELOPMENT SECRETARIAT**

**Sub:** Constitution of Apex Level Co-ordination group for overseeing the implementation of Dabol-Bangalore (Bidadi) Gas pipeline.

**Read:** MoU for Natural Gas Infrastructure and City Gas Distribution entered into between GAIL India Ltd., and Infrastructure Development Department on 29.04.2009.

**Preamble:**

A Memorandum of Understanding (MoU) between GOK and GAIL for providing the required framework was signed on 29.4.2009 between the Principal Secretary to Govt. IDD, GOK and Director (Mktg), GAIL. The State is experiencing deficit in energy. The State owned power producing companies viz., Karnataka Power Corporation Ltd., (KPCL) and Power Company of Karnataka Ltd., (PCKL) are having proposals to set up power projects at various locations. The State Government is also encouraging Independent Power Producers to set up power plants in the State.

2. The Gas Authority of India Ltd., (GAIL), a Navaratna PSU of Govt. of India, which is laying the Dabhol–Bangalore Gas Pipeline has requested State Government to provide supportive measures for implementation of the project. These projects when operationalised will offer tremendous opportunities for industries as well as power projects for utilizing natural gas to meet their energy requirements. It is estimated that, the demand for LNG will be at about 45 MMSCMD, by 2011-2012.

3. In view of the importance of the gas grid for economic prosperity of the State, a framework for co-operation between Government of Karnataka and GAIL is required to be put in place.

4. Hence the following order.

**Government Order No.IDD 14 UIP 2008, Bangalore, Dated: 10th July 2009**

Government of Karnataka are pleased to constitute the following Apex Level Co-ordination Group (CoG) for overseeing the implementation of Dabol-Bangalore (Bidadi) Gas Pipeline project in order to promote gas pipeline project.

| Co-ordination Group | GAIL | State Govt Agency |
|---|---|---|
| Chairman | Principal Secretary to Govt, IDD/Director (Marketing) , GAIL | |
| Members | 1. Executive Director (Mktg)<br>2. Executive Director (Projects)<br>3. Chief Executive Officer, GGL | 1. M.D. KSIIDC<br>2. MD, KPCL<br>3. M.D, KSRTC |
| Co-ordinator | Zonal OIC, Bangalore,<br>HOD Gas Marketing, Bangalore. | 1. Dy. Secretary, IDD<br>2. Executive Director, KSIIDC |

2. The working terms of the Co-ordination Group will be as follows :

(i) CoG shall meet preferably at least once in a quarter to co-ordinate the activities and set time frame for the implementation in terms of this MoU.

(ii) There shall be a co-ordinator from GAIL and IDD who shall be regularly interacting to hold CoG meetings.

(iii) From GAIL:, the Co-ordinator shall provide the necessary facilities for the co-ordination meeting and in his absence by any person so authorized by GAIL. Similarly, Dy. Secretary, IDD shall be Co-ordinator from IDD.

(iv) The Co-ordination meeting shall be attended by at least two members from each party to complete the quorum.

(v) GAIL's Zonal Office at Bangalore shall provide all organizational assistance.

(vi) The respective co-ordinators shall obtain the necessary approvals/sanctions from the respective organizations.

By Order and in the name of the Governor of Karnataka,

**K.S. VENUGOPAL**

P.R. 1697

Under Secretary to Government (I/c)
Infrastructure Development Department.

## ಶಿಕ್ಷಣ ಸಚಿವಾಲಯ

**ವಿಷಯ:** ಹೂವಿನಹಡಗಲಿಯಿಂದ ಬಳ್ಳಾರಿ ನಗರಕ್ಕೆ ಸ್ಥಳಾಂತರಿಸಲಾಗಿದ್ದ ಸರ್ಕಾರಿ ಇಂಜಿನಿಯರಿಂಗ್ ಕಾಲೇಜನ್ನು ಹೂವಿನಹಡಗಲಿಯಲ್ಲಿಯೇ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : ಇಡಿ 60 ಟಿಇಸಿ 2007, ದಿನಾಂಕ 12–7–2007.

2) ಸರ್ಕಾರದ ಆದೇಶ ಸಂಖ್ಯೆ : ಇಡಿ 186 ಟಿಇಸಿ 2008, ದಿನಾಂಕ : 23–10–2008.

**ಪ್ರಸ್ತಾವನೆ:**

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜನ್ನು 2009–10ನೇ ಶೈಕ್ಷಣಿಕ ಸಾಲಿನಿಂದ ಅನ್ವಯಿಸುವಂತೆ ಬಳ್ಳಾರಿ ನಗರಕ್ಕೆ ಸ್ಥಳಾಂತರಿಸಿ ಆದೇಶಿಸಲಾಗಿತ್ತು. ಆದರೆ ಪ್ರಸ್ತುತ ಕಾಲೇಜನ್ನು ಬಳ್ಳಾರಿಗೆ ಸ್ಥಳಾಂತರಿಸದೇ ಹೂವಿನಹಡಗಲಿಯಲ್ಲಿಯೇ ಮುಂದುವರೆಸುವಂತೆ ಕೋರಿ ಹಲವಾರು ಮನವಿಗಳು ಬಂದಿರುವ ಹಿನ್ನೆಲೆಯಲ್ಲಿ ಹಾಗೂ ಜನಪ್ರತಿನಿಧಿಗಳು ಹಿಂದುಳಿದ ಪ್ರದೇಶವಾದ ಹೂವಿನಹಡಗಲಿಯಲ್ಲಿ ಪಸ್ತಾಪಿತ ಇಂಜಿನಿಯರಿಂಗ್ ಕಾಲೇಜನ್ನು ಮುಂದುವರೆಸಿದಲ್ಲಿ ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಕೂಲವಾಗುವುದರಿಂದ ಸದರಿ ಕಾಲೇಜನ್ನು ಹೂವಿನಹಡಗಲಿಯಿಂದ ಬಳ್ಳಾರಿಗೆ ಸ್ಥಳಾಂತರಿಸಲು ತೆಗೆದುಕೊಳ್ಳಲಾಗಿರುವ ತೀರ್ಮಾನವನ್ನು ರದ್ದುಪಡಿಸಿ ಹೂವಿನಹಡಗಲಿಯಲ್ಲಿಯೇ ಮುಂದುವರೆಸುವಂತೆ ಕೋರಿರುತ್ತಾರೆ.

ಹೂವಿನಹಡಗಲಿಯಲ್ಲಿ ಪ್ರಾರಂಭಿಸಲ್ಪಟ್ಟಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜನ್ನು ದಿನಾಂಕ: 23–10–2008ರ ಆದೇಶದನ್ವಯ ಬಳ್ಳಾರಿಗೆ ಸ್ಥಳಾಂತರಿಸಲು ಆದೇಶಿಸಲಾಗಿದ್ದರೂ ಉಳಿದ ಯಾವುದೇ ಪೂರ್ವ ತಯಾರಿಯನ್ನು ಕೈಗೊಂಡಿರುವುದಿಲ್ಲ. 2009–10ನೇ ಸಾಲಿಗೆ ಸಂಬಂಧಿಸಿದಂತೆ ಎಐಸಿಟಿಇ ಯು ಸದರಿ ಕಾಲೇಜಿಗೆ ಸಂಬಂಧಿಸಿದಂತೆ ಹೂವಿನಹಡಗಲಿಗೆ ಅನುಮೋದನೆಯನ್ನು ನೀಡಿದ್ದು ಅದರಂತೆಯೇ ಪ್ರಸ್ತುತ ಸಾಲಿನಲ್ಲಿ ಕೆಲವಾರು ಪ್ರವೇಶಾತಿಗಳು ನಡೆದಿರುವುದಾಗಿ ತಿಳಿದುಬಂದಿರುತ್ತದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಸದರಿ ಇಂಜಿನಿಯರಿಂಗ್ ಕಾಲೇಜನ್ನು ಹೂವಿನಹಡಗಲಿಯಲ್ಲಿಯೇ ಮುಂದುವರೆಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 186 ಟಿಇಸಿ 2008, ಬೆಂಗಳೂರು, ದಿನಾಂಕ: 7ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ ಇಡಿ 186 ಟಿಇಸಿ 2008, ದಿನಾಂಕ:23.10.2008 ರಲ್ಲಿ 2009–10ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಹೂವಿನಹಡಗಲಿ ಇದನ್ನು ಬಳ್ಳಾರಿ ನಗರಕ್ಕೆ ಸ್ಥಳಾಂತರಿಸಲಾಗಿದ್ದ ಸರ್ಕಾರಿ ಆದೇಶವನ್ನು ರದ್ದುಪಡಿಸಿದೆ ಮತ್ತು ಸದರಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜನ್ನು ಹೂವಿನಹಡಗಲಿಯಲ್ಲಿಯೇ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1699

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾಯದರ್ಶಿ, ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

## ENERGY SECRETARIAT

**Sub:** Transfer of 1.6 MW Wind Power Capacity in favour of M/s R.B. Seth Shreeram Narsingdas-reg.

**Read:**
1. Government Order No: EN 398 NCE 2005 dated: 20.4.2006.
2. Government Order No: EN 209 NCE 2006 dated: 26.5.2006.
3. Government Order No: EN 146 NCE 2007 dated: 17.5.2007.
4. Government Order No: EN 303 NCE 2008 dated: 19.12.2008.
5. Letter No: KRED/08/RBS-EIL/2009/841 dated: 12.2.2009 received from the Managing Director, Karnataka Renewable Energy Development Limited, Bangalore.
6. Government letter No: EN 67 NCE 2009 dated: 28.3.2009.
7. KREDL letter No: KRED/08/RBS-EIL/2009/1545 dated: 16/18.4.2009.

**Preamble:**

In the Government order read at (1) and (2) above the sanction has been accorded for implementation of 261.61 MW capacity Wind Power Project at different locations of Belgaum and Gadag Districts in favour of M/s Enercon India Limited.

In the Government Order read at (3) above, sanction has been accorded for enhancement of the allotted wind power capacity from 32.2 MW to 86.4 MW [serial No. 2 and 4 G.O. read at (1)] and also for enhancement of allotted wind power capacity from 40.00 MW to 182.4 MW [serial No. 9 G.O read at (1)] above in favour of M/s Enercon India Limited.

In the Government Order read at (4) above, permission has been accorded for transfer of 3.2 MW Wind Power capacity at Harti, Nagavi and Beladadi villages of Gadag District in favour of M/s R.B. Seth Shreeram Narsingdas from out of sanctioned part capacity of (182.4 MW) 457.61 MW Wind Power Capacity from M/s Enercon India Limited.

The Managing Director, Karnataka Renewable Energy Development Limited, Bangalore in his letter read at (5) above has recommended to the Government for transfer of 1.6 MW Wind Power capacity in favour of M/s R.B. Seth Shreeram Narsingdas from out of sub-capacity of 182.4 MW of the total 457.61 MW capacity of M/s Enercon India Limited at Harti village, Gadag Taluk, Gadag District.

In the Government letter read at (6) above, KREDL has been requested to furnish the progress achieved in the implementation of 457.61 MW capacity Wind Power project by M/s Enercon India Limited.

In the letter read at (7) above, the M.D., KREDL has furnished the progress achieved by M/s Enercon India Limited in implementing the 457.61MW capacity wind power project.

The proposal of the Managing Director, Karnataka Renewable Energy Development Limited has been examined in detail and issued the following Order:-

**Government Order No: EN 67 NCE 2009, Bangalore, Dated: 6th July 2009**

In addition to 3.2 MW capacity already transferred vide Government Order read at (4) above, Government is pleased to accord approval for transfer of 1.6 MW Wind Power capacity in favour of M/s

R.B. Seth Shreeram Narsingdas from out of sub-capacity of 182.4 MW of the total 457.61 MW capacity of M/s Enercon India Limited at Harti village, Gadag Taluk, Gadag District.

The other terms and conditions of the Government Order read at (1) above shall IPSO FACTO applicable.

By Order and in the name of Governor of Karnataka,

P.R. 1685

**S.J. SAMPATH KUMAR**

Under Secretary to Government, Energy Department.

**ಇಂಧನ ಸಚಿವಾಲಯ**

**ವಿಷಯ:** ಮೆ:: ಗೋದಾವರಿ ಶುಗರ್ ಮಿಲ್ಸ್ ಲಿಮಿಟೆಡ್‌ಗೆ **2x20** ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆ ಸ್ಥಾಪನೆಗೆ ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ಜಿಎಸ್‌ಎಂಎಲ್/08/2173 ದಿನಾಂಕ:15/19.12.2008.
2. ಸರ್ಕಾರಿ ಪತ್ರ ಸಂಖ್ಯೆ: ಇಎನ್ 25 ಎನ್‌ಸಿಇ 2009 ದಿನಾಂಕ: 23.1.2009.
3. ಕ್ರೆಡಲ್ ಪತ್ರ ಸಂಖ್ಯೆ: ಕೆಆರ್‌ಇಡಿ/04/ ಜಿಎಸ್‌ಎಂಎಲ್/09/2029 ದಿನಾಂಕ: 23/25.6.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಗೋದಾವರಿ ಶುಗರ್ ಮಿಲ್ಸ್ ಲಿಮಿಟೆಡ್‌ಗೆ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಸಮೀರವಾಡಿ ಎಂಬ ಗ್ರಾಮದಲ್ಲಿ **2x20** ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಸರ್ಕಾರದ ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಪತ್ರದಲ್ಲಿ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲು ಕೆಲವೊಂದು ಪೂರಕ ದಾಖಲಾತಿಗಳನ್ನು ಒದಗಿಸುವಂತೆ ಕ್ರೆಡಲ್‌ನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕೋರಿದ್ದ ಪೂರಕ ದಾಖಲಾತಿಗಳನ್ನು ಒದಗಿಸಿರುತ್ತಾರೆ.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 25 ಎನ್‌ಸಿಇ 2009, ಬೆಂಗಳೂರು, ದಿನಾಂಕ: 13ನೇ ಜುಲೈ 2009.**

ಮೆ:: ಗೋದಾವರಿ ಶುಗರ್ ಮಿಲ್ಸ್ ಲಿಮಿಟೆಡ್‌ಗೆ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಸಮೀರವಾಡಿ ಎಂಬ ಗ್ರಾಮದಲ್ಲಿ **2x20** ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆ ಸ್ಥಾಪನೆಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಿದೆ :–

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for both the Sugar Mill and the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1724

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## HEALTH AND FAMILY WELFARE SECRETARIAT

**Sub:** Capacity Development Project by Swasthya Karnataka in Tumkur district on a pilot basis.

**Read:** 1. Proceedings of the 14th meeting of the Programme Steering Committee dated:27.05.2009.

2. Email from Task Team Leader, World Bank dt. 11.7.09.

3. Delegation of Powers G.O. No. HFW/KHSDRP/Sect/Est-14/2007-08, dt.2.4.2008.

**Preamble:**

Swasthya Karnataka, a consortium of 5 NGOs namely Karuna Trust, Institute of Public Health, Institute of Health Management and Research, Centre for Leadership and Management in Public Services, Centre for Global Health Research had proposed a project for Capacity Development of the District Health Team in Tumkur district on a pilot basis. The consortium had also shared their views with the World Bank curing its Mission in May-2009. This subject was also discussed at length in the 14th meeting of the Programme Steering Committee held on 27.5.2009. The consortium has a comprehensive expertise in various aspects of capacity building like Good governance, Community participation, Hospital management, Information system etc. better management practices, effective utilisation of budget, human resource management effective monitoring better outcomes in national programmes, institutional deliveries etc., are some of the results expected out of the pilot project.

The consortium plans to meet all expenditure related to the training aspects like printing of manuals, developing of training modules, cost of training, hiring of mentors, trainers, training materials etc. The Govt on the other hand plans to extend logistics support to the organisation, arranging venue, TA/DA to trainees/participants, contingency expenses for the training, other miscellaneous arrangements, etc. As the said training programme has to be commenced immediately i.e. by the 1st week of August 2009, it is felt necessary to release funds immediately to the DPMO, Tumkur with a view avoid procedural delays and to enable the DPMO to meet the expenditure as and when required for the purpose of conducting training programme.

Hence the following orders.

**Govt. Order No. HFW (PR) 104 WBA 2009, Bangalore, Dated: 21st July 2009**

Government are pleased to release Rs. 8.00 lakhs (Rs. Eight lakhs only) to the District Project Management Officer, Tumkur under the Head of Account "2210-06-800-0-81 (Plan) (015) Subsidiary Expenditure" for the year 2009-10 towards meeting the expenditure as and when required for the purpose of conducting Capacity Development training programme in collaboration with Swasthya Karnataka, a consortium of 5 NGOs. The DPMO shall do this under the guidance and intimation of the District Healh Society. The DPMO shall exercise the powers as delegated to him from this Office.

The Chief Finance Officer, KHSDRP is hereby authorised to take necessary steps to release the amount through Treasury.

By Order and in the name of the Governor of Karnataka,

**SUSHAMA GODBOLE**

Deputy Secretary to Government,

KHSDRP, Health and Family Welfare Department.

P.R. 1741

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಪಿಪಿಪಿ ಮಾದರಿಯಲ್ಲಿ ಅಭಿವೃದ್ಧಿಪಡಿಸಲು ಉದ್ದೇಶಿಸಿರುವ 10,000 ಕಿಮೀ.ಗಳಷ್ಟು ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳಿಗೆ "ಐಡೆಕ್" ಸಂಸ್ಥೆಯನ್ನು "Transaction Advisor" ಆಗಿ ನೇರವಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ. ಕರಅನಿನಿ/ಮು.ಅ–ಪಿಪಿಪಿ/2009–10/282 ದಿನಾಂಕ:18.04.2009.

2) ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ:ಆಇ 296 ವೆಚ್ಚ–12/09 ದಿನಾಂಕ: 12.05.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರು ಐಡೆಕ್ (iDeCK) ಸಂಸ್ಥೆಯನ್ನು ಪಿಪಿಪಿ ಮಾದರಿಯಲ್ಲಿ ಕೈಗೊಳ್ಳಲು ಉದ್ದೇಶಿಸಿರುವ 10,000 ಕಿಮೀ.ಗಳ ರಸ್ತೆ ಅಭಿವೃದ್ಧಿ ಯೋಜನೆಗೆ "Transaction Advisor" ಆಗಿ ನೇಮಿಸಲು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಇದರಂತೆ ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ ಆರ್ಥಿಕ ಇಲಾಖೆಯು ರಾಜ್ಯ ಸರ್ಕಾರದ ಸ್ವಾಯತ್ತ ಸಂಸ್ಥೆಯಾಗಿರುವ ಐಡೆಕ್ (iDeCK) ಅನ್ನು ನೇರವಾಗಿ "Transaction Advisor" ಆಗಿ ನೇಮಿಸಲು ಕೆ.ಟಿ.ಪಿ.ಪಿ. ಅಧಿನಿಯಮ 1999ರ ಕಲಂ4 (ಜಿ) ಅಡಿ ಪ್ರದತ್ತವಾದ ಅಧಿಕಾರದಂತೆ ವಿನಾಯಿತಿ ನೀಡಿರುತ್ತದೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ.ಲೋಇ 1 ಇಎಪಿ 2009, ಬೆಂಗಳೂರು, ದಿನಾಂಕ: 17ನೇ ಜುಲೈ 2009**

ರಾಜ್ಯ ಸರ್ಕಾರವು ಪಿಪಿಪಿ ಮಾದರಿಯಲ್ಲಿ ಕೈಗೊಳ್ಳಲು ಉದ್ದೇಶಿಸಿರುವ 10,000 ಕಿಮೀ. ಉದ್ದದ ರಸ್ತೆಗಳ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರದ ಸ್ವಾಯತ್ತ ಸಂಸ್ಥೆಯಾಗಿರುವ ಐಡೆಕ್ (iDeCK) ಸಂಸ್ಥೆಯನ್ನು ನೇರವಾಗಿ "Transaction Advisor" ಆಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ರೇವಣ್ಣ**

ಪಿ.ಆರ್. 1742 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ) (ಪ್ರ)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ 2009–10ನೇ ಸಾಲಿನ ಹೊಸ ಯೋಜನೆಯಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ ರೂ.10.00 ಕೋಟಿಗಳ ಅನುದಾನ – ಆಡಳಿತಾತ್ಮಕ ಮಂಜೂರಾತಿ.

**ಓದಲಾಗಿದೆ:** 1) ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಸಂಬಂಧಿಸಿದಂತೆ ದಿನಾಂಕ:20.2.2009 ರಂದು ಸನ್ಮಾನ್ಯ ಮುಖ್ಯ ಮಂತ್ರಿಗಳು 2009–10ನೇ ಸಾಲಿಗೆ ಮಾಡಿದ ಆಯವ್ಯಯ ಭಾಷಣದ ಘೋಷಣೆ.

2) ಸರ್ಕಾರದ ಆದೇಶ ಸಂಖ್ಯೆ: ವಿಯಇ 51 ವಿತ್ರಮ 2008, ದಿನಾಂಕ:11.9.2008 ಮತ್ತು 14.10.2008 ಪ್ರೊ.ಸಿ.ಎನ್.ಆರ್.ರಾವ್, FRS ಇವರ ಅಧ್ಯಕ್ಷತೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ರಚನೆ.

3) ದಿನಾಂಕ:28.05.2009 ರಂದು ನಡೆದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 3ನೇ ಸಭೆಯಲ್ಲಿನ ತೀರ್ಮಾನ.

4) ಕಾರ್ಯ ನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ: ವಿ.ತಂ.ದಾ.ಸ/2009 ದಿನಾಂಕ: 22.06.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ 2009–10ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಪ್ರೊ.ಸಿ.ಎನ್.ಆರ್.ರಾವ್‌ರವರ ಅಧ್ಯಕ್ಷತೆಯಲ್ಲಿ ರಚಿಸಿದ ವಿಜ್ಞಾನ ಮತ್ತು ತಂತ್ರಜ್ಞಾನ ವಿಷನ್ ಗ್ರೂಪ್ ಸಲಹೆಯಂತೆ ವಿದ್ಯಾರ್ಥಿಗಳಲ್ಲಿ ವೈಜ್ಞಾನಿಕ ಮನೋಭಾವ ಬೆಳೆಸಲು ವಿದ್ಯಾರ್ಥಿ – ವಿಜ್ಞಾನಿ ಸಂವಾದ, ವಿಜ್ಞಾನ ಮೇಳ, ವಿಜ್ಞಾನ ಸಂಘಗಳ ಸ್ಥಾಪನೆ, ಇತ್ಯಾದಿ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ನಿರ್ಧರಿಸಲಾಗಿದೆ. ವಿಜ್ಞಾನ ಶಿಕ್ಷಣ ಕ್ಷೇತ್ರದಲ್ಲಿ ಶ್ರೇಷ್ಠ ಸಂಸ್ಥೆಗಳನ್ನು ಸ್ಥಾಪಿಸಲು ಕಾಲೇಜು–ವಿಶ್ವವಿದ್ಯಾಲಯಗಳಲ್ಲಿ ವಿಜ್ಞಾನ ಶಿಕ್ಷಣದ ಉನ್ನತೀಕರಣ, ಜಿಲ್ಲಾ ಮಟ್ಟದಲ್ಲಿ ವಿಜ್ಞಾನ ಶಿಕ್ಷಣ ಕೇಂದ್ರ ಮತ್ತು ವಸ್ತು ಸಂಗ್ರಹಾಲಯ, ಇತ್ಯಾದಿ ನೂತನ ಕಾರ್ಯಕ್ರಮಗಳಿಗೆ ರೂ.10.00 ಕೋಟಿ ಕೊಡಲಾಗುವುದು ಎಂದು ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶದಲ್ಲಿ ಪ್ರೊ.ಸಿ.ಎನ್.ಆರ್.ರಾವ್, FRS ಇವರ ಅಧ್ಯಕ್ಷತೆಯಲ್ಲಿ 10 ಜನ ಸದಸ್ಯರನ್ನೊಳಗೊಂಡಂತೆ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ದಿನಾಂಕ:28.05.2009 ರಂದು 3ನೇ ಸಭೆಯಲ್ಲಿ ಶಿಕ್ಷಣ ಕಾರ್ಯಕ್ರಮಗಳನ್ನು 2009–10ನೇ ಸಾಲಿನಲ್ಲಿ ನಡೆಸಲು ಆಯವ್ಯಯ ಅಂದಾಜು ವೆಚ್ಚದಲ್ಲಿ ನಿಗದಿಪಡಿಸಿರುವ ರೂ.10.00 ಕೋಟಿಗಳಿಗೆ ಕಾರ್ಯಕ್ರಮವನ್ನು ರೂಪಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಕಾರ್ಯ ನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರದಲ್ಲಿ ದಿನಾಂಕ:22.06.2009 ರಂದು ನಡೆದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ

ಸಮೂಹದ 3ನೇ ಸಭೆಯ ತೀರ್ಮಾನದಂತೆ ಶಿಕ್ಷಣ ಕಾರ್ಯಕ್ರಮಕ್ಕೆ ರೂ.10.00 ಕೋಟಿಗಳ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕಾರ್ಯ ನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ವಿಯಇ 33 ವಿತ್ರಮ 2009, ಬೆಂಗಳೂರು, ದಿನಾಂಕ: 13ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ 2009–10ನೇ ಸಾಲಿನ ಹೊಸ ಯೋಜನೆಯಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಶಿಕ್ಷಣ ಕಾರ್ಯಕ್ರಮಗಳಿಗೆ ರೂ.10.00 ಕೋಟಿ (ರೂಪಾಯಿ ಹತ್ತು ಕೋಟಿಗಳು ಮಾತ್ರ) ಶಿಕ್ಷಣ ಕಾರ್ಯ ಚಟುವಟಿಕೆಗಳನ್ನು ಅನುಬಂಧ–1 ರಲ್ಲಿರುವಂತೆ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ವೆಚ್ಚವನ್ನು ಲೆಕ್ಕಶೀರ್ಷಿಕೆ "3425–60–600–0–02 (059) (ಯೋಜನೆ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 197 ವೆಚ್ಚ 2/2009 ದಿನಾಂಕ: 03.07.2009 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 48 ಎಂಇ 2009 ದಿನಾಂಕ:02.07.2009 ರಲ್ಲಿ ನೀಡಿದ ಸಹಮತಿ ಮೇರೆಗೆ ಮತ್ತು ದಿನಾಂಕ:06.07.2009ರಂದು ನಡೆದ ಸಚಿವ ಸಂಪುಟ ಸಭೆಯ ತೀರ್ಮಾನದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 33 ವಿತ್ರಮ 2009, ದಿನಾಂಕ:13/07/2009ರ ಅನುಬಂಧ**

| ಕ್ರ. ಸಂ. | ಕಾರ್ಯಯೋಜನೆಗಳು | ಅಂದಾಜು ವೆಚ್ಚ (ರೂ.ಲಕ್ಷಗಳಲ್ಲಿ) |
|---|---|---|
| 1 | ಕರ್ನಾಟಕ ವಿಜ್ಞಾನ ವಿದ್ಯಾ ಜಾಗೃತಿ (ಪ್ರೌಢಶಾಲೆ ಮತ್ತು ಪದವಿ ಪೂರ್ವ ವಿದ್ಯಾರ್ಥಿಗಳಿಗೆ ಜಿಲ್ಲಾ ಮಟ್ಟದಲ್ಲಿ ನೇರ ಸಂವಾದ ವಿಜ್ಞಾನ ಶಿಕ್ಷಣ ಕಾರ್ಯಕ್ರಮ) | 91.00 |
| 2 | ರಾಜ್ಯ ಮಟ್ಟದ ವಿದ್ಯಾರ್ಥಿ – ವಿಜ್ಞಾನ ನೇರ ಸಂವಾದ ಕಾರ್ಯಕ್ರಮ | 52.00 |
| 3 | ಪ್ರೌಢಶಾಲೆ ಹಾಗೂ ಪದವಿ ಪೂರ್ವ ಶಿಕ್ಷಕರಿಗೆ ಚಳಿಗಾಲ ಹಾಗೂ ಬೇಸಿಗೆ ತರಬೇತಿ ಕಾರ್ಯಾಗಾರಗಳನ್ನು ಆಯೋಜಿಸುವುದು. | ಡಿ.ಎಸ್.ಇ.ಆರ್.ಟಿ./ ಪದವಿ ಪೂರ್ವ ಇಲಾಖೆ ಭರಿಸುವುದು |
| 4 | ಪ್ರೌಢಶಾಲೆಗಳಲ್ಲಿ ವಿಜ್ಞಾನ ಸಂಘಗಳ (Science Club) ಸ್ಥಾಪನೆ | 39.00 |
| 5 | ವಿಜ್ಞಾನ ಮೇಳಗಳ ಆಯೋಜನೆ | 19.5 |
| 6 | ವಸ್ತು ಸಂಗ್ರಹಾಲಯವನ್ನೊಳಗೊಂಡ ವಿಜ್ಞಾನ ಕೇಂದ್ರದ ಸ್ಥಾಪನೆ | ಮುಂದಿನ ದಾರ್ಶನಿಕ ಸಭೆಗಳಲ್ಲಿ ಕೈಗೊಳ್ಳಲಾಗುವ ತೀರ್ಮಾನದನ್ವಯ |
| 7 | ಇಂಜಿನಿಯರಿಂಗ್ ಕಾಲೇಜುಗಳ ಉಪನ್ಯಾಸಕರಿಗೆ ಕಾರ್ಯಾಗಾರ | |
| 8 | ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯವು ಎನ್‌ಪಿಟಿಇಎಲ್ (National Programme on Technology Enhanced Learning – NPTEL) ಚಟುವಟಿಕೆಯಡಿ ತಯಾರಿಸಿರುವ ಉತ್ಕೃಷ್ಟ ಗುಣಮಟ್ಟದ ಬೋಧನಾ ಸಾಮಗ್ರಿಗಳನ್ನು ಅಂತರ್ಜಾಲದಿಂದ ಪಡೆಯಲು ಅಗತ್ಯವಾದ ಯಂತ್ರಾಂಶ ಮತ್ತು ತಂತ್ರಾಂಶಗಳನ್ನು ನೀಡುವುದು | |
| 9 | ತಾಂತ್ರಿಕ ಆವಿಷ್ಕಾರ ಮತ್ತು ಸಂಶೋಧನಾ ಕೇಂದ್ರ | |
| 10 | ಸಂಶೋಧನೆಗೆ ಮೂಲಧನ | 50.00 |
| 11 | ಶ್ರೇಷ್ಠ ಸಂಶೋಧನಾ ಲೇಖನಗಳ ಪ್ರಕಟಣೆಗೆ ವಿಜ್ಞಾನ ಭೋಧಕರಿಗೆ/ವಿಜ್ಞಾನಿಗಳಿಗೆ ಬಹುಮಾನ | 05.00 |
| 12 | ಶ್ರೇಷ್ಠ ಶಿಕ್ಷಕರಿಗೆ ಬಹುಮಾನಗಳು | 10.00 |
| 13 | ವಿಜ್ಞಾನ ಕಾರ್ಯಕ್ರಮಗಳನ್ನು ದೂರದರ್ಶನದಲ್ಲಿ ಪ್ರಸಾರ ಮಾಡುವುದು | 200.00 |
| 14 | ವಿಜ್ಞಾನ ಪ್ರಯೋಗಾಲಯ ಸೌಲಭ್ಯವನ್ನು ಪ್ರೌಢಶಾಲೆಗಳಿಗೆ ಸ್ಥಾಪಿಸುವುದು | 100.00 |
| 15 | ಶ್ರೇಷ್ಠ ವಿಜ್ಞಾನ ಮತ್ತು ತಾಂತ್ರಿಕ ಕೇಂದ್ರಗಳ ಸ್ಥಾಪನೆ | 100.00 |

| ಕ್ರ. ಸಂ. | ಕಾರ್ಯಯೋಜನೆಗಳು | ಅಂದಾಜು ವೆಚ್ಚ (ರೂ.ಲಕ್ಷಗಳಲ್ಲಿ) |
|---|---|---|
| 16 | ಶ್ರೇಷ್ಠ ವಿಜ್ಞಾನ ಶಿಕ್ಷಣ ಕೇಂದ್ರಗಳನ್ನು ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ಸ್ಥಾಪಿಸುವುದು | 100.00 |
| 17 | ಗಣಕಯಂತ್ರಗಳನ್ನು ಮಾಧ್ಯಮಿಕ ಶಾಲೆಗಳಿಗೆ ನೀಡುವುದು/ವಿಜ್ಞಾನ ಮತ್ತು ತಂತ್ರಜ್ಞಾನ ಶಿಕ್ಷಣದ ಡಿವಿಡಿಗಳನ್ನು ಶಾಲೆಗಳಿಗೆ ಪೂರೈಸುವುದು | 50.00 |
| 18 | ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಪ್ರೋತ್ಸಾಹಕ ಸೊಸೈಟಿಯ ಮುಖೇನ ಕಾರ್ಯಕ್ರಮಗಳ ನಿರ್ವಹಣೆ | 47.00 |
| 19 | ಇತರೆ ವೈಜ್ಞಾನಿಕ ಕಾರ್ಯಕ್ರಮಗಳು | 136.50 |
| | **ಒಟ್ಟು ಮೊತ್ತ ರೂ.** | **1000.00** |

**ಕೆ. ಬೋರಲಿಂಗಯ್ಯ**

ಪಿ.ಆರ್. 1743 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ ಭಾರತ ಮೂಲಸೌಲಭ್ಯ ವಾರ ಪತ್ರಿಕೆ ಮತ್ತು ವರದಿ / ವಾರ್ತಾ ಪತ್ರಗಳನ್ನು ಹಾಗೂ India Infrastructure Publishing Ltd., ನವದೆಹಲಿ ಇವರಿಂದ ಖರೀದಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ.ಮೂಅಇ 05 ಯುಐಪಿ 2006 (ಪಿ) ದಿನಾಂಕ 18.06.2007.

2) ಸರ್ಕಾರದ ಆದೇಶ ಸಂಖ್ಯೆ.ಮೂಅಇ 77 ಮೂಇವಿ 2007 ದಿನಾಂಕ 25.10.2007.

3) ಸರ್ಕಾರದ ಆದೇಶ ಸಂಖ್ಯೆ.ಮೂಅಇ 80 ಮೂತಾಂವಿ 2008 ದಿನಾಂಕ 23.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂಖ್ಯೆ (1)ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಪಿಪಿಪಿ ಕೋಶವನ್ನು ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಿರ್ದೇಶಕರು, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಹಾಗೂ ತಜ್ಞರನ್ನು ಒಳಗೊಂಡಂತೆ ರಚಿಸಲು ಅನುಮೋದನೆಯನ್ನು ನೀಡಿದೆ.

2. ಕ್ರ.ಸಂಖ್ಯೆ (2) ರ ಆದೇಶದಲ್ಲಿ ಹೊಸ ಮೂಲಸೌಲಭ್ಯ ಅಭಿವೃದ್ಧಿ ನೀತಿ 2007 ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಪಿಪಿಪಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಇಲಾಖೆಯ ಅಧಿಕಾರಿಗಳಿಗೆ/ಏಜೆನ್ಸಿಗಳಿಗೆ ತರಬೇತಿ ನೀಡುವುದಕ್ಕೆ ರೂ.5.00 ಲಕ್ಷಗಳನ್ನು ಹಾಗೂ ಮಾಹಿತಿ ಮತ್ತು ದಾಖಲೆ ಕೇಂದ್ರಕ್ಕಾಗಿ (Information & Documentation Centre) ರೂ.5.00 ಲಕ್ಷಗಳು ಒಟ್ಟು ರೂ.10.00 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿದೆ.

3. ಕ್ರ.ಸಂಖ್ಯೆ (3) ರ ಆದೇಶದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ನೀತಿ – 2007 ರಂತೆ ಸಾಮರ್ಥ್ಯ ಅಭಿವೃದ್ಧಿ (Capacity Development) ಬಗ್ಗೆ ತರಬೇತಿ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ನಿರ್ವಹಿಸಲು ಹಾಗೂ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಮಾಹಿತಿ ಮತ್ತು ದಾಖಲೆ ಕೇಂದ್ರ ಸ್ಥಾಪಿಸಲು ಉನ್ನತೀಕರಣ ಮತ್ತು ಲಾಜಿಸ್ಟಿಕ್ಸ್‌ಗಳಿಗಾಗಿ ಅಗತ್ಯವಾದ ಸಾಮಗ್ರಿಗಳನ್ನು ಐಡೆಕ್ ಸಂಸ್ಥೆಯ ಮುಖಾಂತರ ಖರೀದಿಸಲು ರೂ.10.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

4. ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ Development on the subscription of India Infrastructure Magazine, Purchase of Reports and Subscription of New letter ಇವುಗಳನ್ನು India Infrastructure Publishing Pvt Ltd., ಸಂಸ್ಥೆಯಿಂದ ಖರೀದಿಸಲು ರೂ.3,38,100–00 ಗಳನ್ನು ಬಿಡುಗಡೆ ಮಾಡಲು ನಿರ್ಧರಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ. ಮೂಅಇ 53 ಮೂತಾಂವಿ 2009, ಬೆಂಗಳೂರು, ದಿನಾಂಕ: 18ನೇ ಜುಲೈ 2009**

ಸರ್ಕಾರದ ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಪಿಪಿಪಿ ಕೋಶಕ್ಕೆ Development on the subscription of India Infrastructure Magazine, Purchase of Reports and Subscription of New letter ಇವುಗಳನ್ನು India Infrastructure Publishing Pvt Ltd., ಸಂಸ್ಥೆಯಿಂದ ಖರೀದಿಸಲು ರೂ.3,38,100–00 ಗಳನ್ನು ಬಿಡುಗಡೆ ಮಾಡಿದೆ.

2. ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 3451–00–090–1–06–059–Infrastructure Preliminary Studies – Other Expenditure ಇದರಡಿ 2009–10ನೇ ಸಾಲಿನಲ್ಲಿ ಒದಗಿಸಿರುವ ರೂ.881.00 ಲಕ್ಷಗಳ ಆಯವ್ಯಯದಿಂದ ಭರಿಸತಕ್ಕದ್ದು.

3. ಈ ಮೊತ್ತವನ್ನು ನಿರ್ದೇಶಕರು, ಪಿಪಿಪಿ ಕೋಶ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆದು ಸದರಿ ಮೊತ್ತವನ್ನು ಚೆಕ್ಕಿನ ಮೂಲಕ India Infrastructure Publishing Pvt Ltd., ಸಂಸ್ಥೆಗೆ ನೀಡಲು ಅನುಮತಿಸಿದೆ.

4. ಈ ಆದೇಶವನ್ನು ದಿನಾಂಕ 16.05.2008ರ ಆದೇಶ ಸಂಖ್ಯೆ. FD 1 TFP 2008 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1744 **ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಬಿ. ವೆಂಕಣ್ಣ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಸ್ತುತ ನಿರೂಪಣಾಧಿಕಾರಿ ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು–ಆದೇಶ.

**ಓದಲಾಗಿದೆ:** 1) ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ (ರಿ) ಜಿಲ್ಲಾ ಸಮಿತಿ ರಾಯಚೂರು ರವರ ಪತ್ರ ದಿ:13.07.2009.

2) ಸರ್ಕಾರದ ಆದೇಶ ಸಂಖ್ಯೆ ಮಮಇ 65 ಐಸಿಡಿ 2009, ಬೆಂಗಳೂರು ದಿನಾಂಕ: 18.06.2009

3) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿಯ ಆದೇಶ ಸಂಖ್ಯೆ ನಿಸಿಶಿಪ–04/2009–2010 ದಿ: 13.07.2009.

4) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿಯ ಕಾರಣ ಕೇಳುವ ನೋಟೀಸ್ ಸಂಖ್ಯೆ ನಿಸಿಶಿಪ–04/2009–2010 ದಿ:13.07.2009.

5) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿಯ ಏಕ ಕಡತ ಸಂಖ್ಯೆ: ನಿಸಿಶಿಪ–04(1) 2009–2010.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ:13.07.2009ರ ಪತ್ರದಲ್ಲಿ ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ (ರಿ) ರಾಯಚೂರು ಜಿಲ್ಲೆ ಹಾಗೂ ಲಿಂಗಸುಗೂರು ತಾಲ್ಲೂಕು, ಅಧ್ಯಕ್ಷರು, ಕಾರ್ಯದರ್ಶಿಗಳು, ಸದಸ್ಯರುಗಳು ಗೌರವಾನ್ವಿತ ಲೋಕಾಯುಕ್ತ ನ್ಯಾಯಮೂರ್ತಿಗಳು, ಬೆಂಗಳೂರು ಇವರಿಗೆ ಮನವಿಯೊಂದನ್ನು ಸಲ್ಲಿಸಿ, ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿ ಮಿನಿ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸುವ ಸಂಬಂಧ ದಿ:17.06.2009 ರಂದು 32 ಮಹಿಳೆಯರಿಗೆ ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸಲು ಆದೇಶಗಳನ್ನು ಹೊರಡಿಸಿ ಇವರುಗಳಿಂದ ತಲಾ ರೂ. 50,000/–ಗಳನ್ನು ತೆಗೆದುಕೊಂಡು ಸುಳ್ಳು ಆದೇಶ ನೀಡಿದ್ದಾರೆಂದು ಆರೋಪಿಸಿ ಈ ಬಗ್ಗೆ ದಿ:04.07.2009 ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ವರದಿಯಾಗಿದೆಯೆಂದು ತಿಳಿಸುತ್ತಾ, ಈ ವಿಷಯದಲ್ಲಿ ಸಂಬಂಧಪಟ್ಟ ರಾಯಚೂರು ಜಿಲ್ಲೆಯಲ್ಲಿನ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರು ಸಹ ಶಾಮೀಲಾಗಿರುತ್ತಾರೆಂದು ತಿಳಿಸಿರುತ್ತಾರೆ ಹಾಗೂ ಈ ಬಗ್ಗೆ ತನಿಖೆ ನಡೆಸಿ, ಸೂಕ್ತ ಕ್ರಮ ತೆಗೆದುಕೊಳ್ಳಲು ದೂರನ್ನು ಸಲ್ಲಿಸುತ್ತಾ, ಅದರ ಪ್ರತಿಯನ್ನು ಹಾಗೂ ಸಂಬಂಧಿಸಿದ ಆದೇಶ ಹಾಗೂ ಪತ್ರಿಕಾ ವರದಿಯ ಪ್ರತಿಗಳನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿ:18.06.2009 ರ ಸರ್ಕಾರದ ಆದೇಶದಲ್ಲಿ ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿಗೆ 12 ಮಿನಿ ಅಂಗನವಾಡಿ ಕೇಂದ್ರಗಳು ಮಂಜೂರಾಗಿರುತ್ತವೆ. ಈ 12 ಅಂಗನವಾಡಿ ಕೇಂದ್ರಗಳಿಗೆ 12 ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸುವ ಅವಶ್ಯಕತೆ ಇರುತ್ತದೆ. ಆದರೆ ಸರ್ಕಾರದ ಆದೇಶಕ್ಕಿಂತ ಮೊದಲೇ ಅಂದರೆ ದಿ:16.06.2009 ರಂದು ಈ ನೇಮಕಾತಿ ಪ್ರಕ್ರಿಯೆ ಪ್ರಾರಂಭಿಸಿ ಕಾರ್ಯಕರ್ತೆಯರನ್ನು ಗುರುತಿಸಲು ಪ್ರಸ್ತಾವನೆ ಸಲ್ಲಿಸಿರುವುದು ಮತ್ತು ಜಿಲ್ಲಾ ಕಛೇರಿಯಿಂದ ಆದೇಶವನ್ನು ದಿ:17.06.2009 ರಂದು ಹೊರಡಿಸಿರುವುದು ನಿಯಮಬಾಹಿರವಾಗಿರುತ್ತದೆ. ಈ ಪ್ರಕ್ರಿಯೆಯಲ್ಲಿ 24 (8+8+8) ಮಹಿಳೆಯರನ್ನು ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸಲು ಜಿಲ್ಲಾ ಉಪನಿರ್ದೇಶಕರ ಕಛೇರಿಯಿಂದ ಒಂದೇ ದಿನದಲ್ಲಿ ಅಂದರೆ ದಿ:17.06.2009 ರಂದು 3 ಆದೇಶಗಳನ್ನು ಹೊರಡಿಸಿದ್ದು, ಆದೇಶದಲ್ಲಿ ಗೌರವಧನದ ವಿವರಗಳನ್ನು ಕೂಡ ನಮೂದಿಸದೇ ಕ್ರಮವಾಗಿ 10, 08, 04 ಮಹಿಳೆಯರನ್ನು ಅಂಗನವಾಡಿ ಕಾರ್ಯಕರ್ತೆಯರನ್ನಾಗಿ ಗುರುತಿಸಿರುತ್ತಾರೆ. ಸದರಿ ಆದೇಶವು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದ್ದು, ಗುರುತಿಸಲ್ಪಟ್ಟ

ಮಹಿಳೆಯರ ಹೆಸರುಗಳನ್ನು ಕೈ ಬರಹದಲ್ಲಿ ಬರೆದಿರುವುದು ಕಂಡು ಬಂದಿರುತ್ತದೆ. ಈ ಆದೇಶದಲ್ಲಿ ಕಛೇರಿಯ ವಿಳಾಸ ಮತ್ತು ರವಾನೆ ಸಂಖ್ಯೆಯನ್ನು ನಮೂದಿಸಿರುವುದಿಲ್ಲ ಹಾಗೂ ಈ ಆದೇಶಗಳ ಪ್ರಸ್ತಾವನೆಯಲ್ಲಿ 08 ಮಿನಿ ಅಂಗನವಾಡಿ ಕೇಂದ್ರಗಳಿಗೆ ಸಂಬಂಧಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು 08 ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸಲು ವಿನಂತಿಸಿರುತ್ತಾರೆಂದು ತಿಳಿಸುತ್ತಾ, ಆದೇಶಗಳಲ್ಲಿ ಕ್ರಮವಾಗಿ 10, 08, 04 ಮಹಿಳೆಯರನ್ನು ಗುರುತಿಸಿರುವುದು ಕಂಡು ಬಂದಿದ್ದು, ಸಂಶಯಕ್ಕೆ ಎಡೆಮಾಡಿಕೊಡುತ್ತದೆ ಹಾಗೂ ಇದು ದುರುದ್ದೇಶಪೂರ್ವಕವಾಗಿರುವುದು ಧೃಢಪಟ್ಟಿರುತ್ತದೆ. ಸದರಿ ದೂರಿನಲ್ಲಿ ಲಗತ್ತಿಸಿರುವ ಆದೇಶ ಹಾಗೂ ಪತ್ರಿಕಾ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಪಿ.ವೈ.ಗಾಜಿಯವರ್ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಲಿಂಗಸಗೂರು ಹಾಗೂ ಶ್ರೀ ಬಿ.ವೆಂಕಣ್ಣ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಸ್ತುತ ನಿರೂಪಣಾಧಿಕಾರಿ, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರುಗಳು ಮಿನಿ ಅಂಗನವಾಡಿ ಕೇಂದ್ರಗಳಿಗೆ ಕಾರ್ಯಕರ್ತೆಯರನ್ನು ಗುರುತಿಸುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕರ್ತವ್ಯ ಲೋಪ ಹಾಗೂ ಅವ್ಯವಹಾರ ನಡೆಸಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 13.07.2009 ರ ನಿರ್ದೇಶಕರ ಕಛೇರಿಯ ಆದೇಶದಲ್ಲಿ ಶ್ರೀ ಪಿ.ವೈ. ಗಾಜಿಯವರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಲಿಂಗಸುಗೂರು ರಾಯಚೂರು ಜಿಲ್ಲೆ ಇವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿಯಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿ: 13.07.2009 ರ ನಿರ್ದೇಶಕರ ಕಚೇರಿಯ ಕಾರಣ ಕೇಳುವ ನೋಟೀಸನ್ನು ಶ್ರೀ ಬಿ.ವೆಂಕಣ್ಣ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಸ್ತುತ ನಿರೂಪಣಾಧಿಕಾರಿ, ಹಾಗೂ ಪ್ರಭಾರ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರಿಗೆ ಜಾರಿ ಮಾಡಿ ಲಿಖಿತ ಹೇಳಿಕೆಯನ್ನು 07 ದಿನಗಳೊಳಗಾಗಿ ನೀಡುವಂತೆ ಸೂಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ರಾಯಚೂರು ಜಿಲ್ಲಾ ಪ್ರಭಾರ ಉಪನಿರ್ದೇಶಕರಾದ ಶ್ರೀ ಬಿ.ವೆಂಕಣ್ಣನವರು ಲಿಂಗಸುಗೂರು ಮಿನಿ ಅಂಗನವಾಡಿ ಕೇಂದ್ರಗಳಿಗೆ ಕಾರ್ಯಕರ್ತೆಯರನ್ನು ಗುರುತಿಸುವ ಪ್ರಕ್ರಿಯೆಯಲ್ಲಿ ಶಾಮೀಲಾಗಿರುವುದು ಮೇಲ್ನೋಟಕ್ಕೆ ಕಂಡು ಬರುವುದರಿಂದ ನಿಯಮಾನುಸಾರ ಇವರ ಮೇಲೆ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿ ಸರ್ಕಾರಕ್ಕೆ ಪ್ರಸಾವನೆಯನ್ನು ಸಲ್ಲಿಸಿರುತ್ತಾರೆ.

ನಿರ್ದೇಶಕರ ಕಛೇರಿಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಬಿ.ವೆಂಕಣ್ಣ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಸ್ತುತ ನಿರೂಪಣಾಧಿಕಾರಿ, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರು ಕರ್ತವ್ಯಲೋಪ ಹಾಗೂ ಅವ್ಯವಹಾರ ನಡೆಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಸದರಿಯವರು ಓರ್ವ ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿಯಲ್ಲಿ ವರ್ತಿಸಿದ್ದು, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966 ರ ನಿಯಮ (1) (i)(ii)(ii)ಕ್ಕೆ ವ್ಯತಿರಿಕ್ತವಾಗಿರುವುದರಿಂದ ಇವರ ಕರ್ತವ್ಯ ಲೋಪದ ಹಾಗೂ ಅವ್ಯವಹಾರದ ಸಂಬಂಧ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವುದು ಸೂಕ್ತವೆಂದು ನಿರ್ಧರಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 381 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ: 14ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಬಿ.ವೆಂಕಣ್ಣ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಪ್ರಸ್ತುತ ನಿರೂಪಣಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರಾಯಚೂರು ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 10(1)(ಡಿ) ರನ್ವಯ ಇವರ ವಿರುದ್ಧದ ಇಲಾಖಾ ವಿಚಾರಣೆ ಬಾಕಿಯಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 98(1)ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 1745

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## FOREST, ENVIRONMENT AND ECOLOGY SECRETARIAT

**Sub:** JBIC Phase II - Karnataka Sustainable Forest Management & Bio-diversity Conservation Project- Sanction of the Backlog works for the year 2005-06, 2006-07, 2007-08 and 2008-09.

**Read:** 1) G.O. No: FEE 279 FAP 2003, dated: 23-05-2005
2) G.O. No: FEE 162 FAP 2005, dated: 12-09-2005
3) G.O. No: FEE 97 FAP 2006, dated: 19-07-2006
4) G.O. No. FEE 72 FAP 2007, dated: 14-06-2007
5) G.O.No.FEE 85 FAP 2008, dated 02-07-2008
6) G.O.No.FEE 92 FAP 2009, dated 29-06-2009
7) Letter No: D1/BUD/CR-90/2009-10 dated: 09-06-2008 and 01-07-2009 from the Principal Chief Conservator of Forests Bangalore.

**Preamble:-**

In G.O. read at (1) above, Karnataka Sustainable Forest Management & Bio-diversity Conservation Project has been approved for implementation from 2005-06 to 2012-2013 with a total outlay of Rs. 745.00 crores in the State over a period of 8 years with certain conditions.

In G.O. read at (2) above, sanction has been accorded for Annual Plan Operations for the year 2005-06 with an outlay Rs. 77.20 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. read at (3) above, sanction has been accorded for Annual Plan Operations for the year 2006-07 with an outlay Rs. 108.70 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. read at (4) above, sanction has been accorded for Annual Plan Operations for the year 2007-08 with an outlay Rs. 137.62 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. read at (5) above, sanction has been accorded for Annual Plan Operations for the year 2008-09 for an outlay Rs. 139.69 crores under the JBIC Phase II - Assisted Karnataka Sustainable Forest Management & Bio-diversity Conservation Project and also sanction was accorded to meet the expenditure on the Honorarium of Forest Motivators to an extent of Rs.2.70 crores and on backlog works of 2005-06, 2006-07 and 2007-08 to an extent of Rs.13.30 crores, on Afforestation, Protected Area Management & Biodiversity Conservation, Participatory Forest Management, Supporting Activities for Forest Management and Basic Infrastructure for Field Work and for the procurement of additional 60 computers and 16 vehicles out of the overall outlay of Rs.139.69 crores, during 2008-09.

In G.O. read at (6) above, sanction has been accorded for Annual Plan Operations for the year 2009-10 with an outlay Rs. 137.00 crores under the JBIC Phase II - Assisted Karnataka Sustainable Forest Management & Bio-diversity Conservation Project.

In the letter read at (7) above, the Principal Chief Conservator of Forests has informed that the Special Empowered Committee in its 6th meeting held on 28-05-2009 has approved the backlog works pertaining to the year 2005-06, 2006-07, 2007-08 and 2008-09 and to meet out the expenditure of Rs.24.656 Crores within the funds of Rs.137.00 Crores envisaged for the year 2009-10 and has requested to issue of Government Order in this regard.

The proposal has been examined in detail and hence the following order.

**Government Order No. FEE 92 FAP 2009, Bangalore, Dated: 13th July 2009**

In the circumstances explained above, sanction is accorded to backlog works pertaining to the year 2005-06, 2006-07, 2007-08 and 2008-09 and to meet out the expenditure of Rs.24.656 Crores (Rupees Twenty four Crores Sixty Five lakhs Six thousand only) out of of Rs.137.00 Crores envisaged for the year 2009-10 as detailed in the Annexure to this Government Order

This order issued in accordance with the decisions taken in the 6th meeting of the Empowered Committee held on 28-05-2009.

By Order and in the name of Governor of Karnataka

**P.R. KALAVATHI**

Under Secretary to Government,

Forest, Environment & Ecology Department.

**Government Order No: FEE 92 FAP 2009, Bangalore, dated: 13-07-2009**

**ANNEXURE**

**ANNUAL PROGRAMME OF BACKLOG WORKS TO BE TAKEN UP DURING 2009-10**

| Sl. No. | Components / Activities | Unit | Target | |
|---|---|---|---|---|
| | | | Physical | Financial (Rs. in lakhs) |
| **1** | **AFFORESTATION** | | | |
| **1.1** | **Model-1-Ecological restoration through Natural regeneration** | | | |
| 1.11 | Model-1- Monsoon work | Ha. | 303 | 24.331 |
| **1.2** | **Model-2-Assested Natural regeneration** | | | |
| 1.21 | Model-2- Advance work | Ha. | 2,786 | 390.319 |
| **1.3** | **Model-3-Plantations for Timber production** | | | |
| 1.31 | Model-3- Advance work | Ha. | 355 | 67.273 |
| 1.32 | 1st year maintenance | Ha. | 112 | 4.827 |
| **1.4** | **Model-4-Plantations for Fuel Wood & Small Timber Production** | | | |
| 1.41 | Model-4- Advance work | Ha. | 673 | 132.413 |
| 1.42 | 2nd year maintenance | Ha. | 409 | 10.430 |
| 1.43 | 1st year maintenance | Ha. | 418 | 20.315 |
| **1.5** | **Model-5-NTFP Plantations** | | | |
| 1.51 | 1st year maintenance | Ha. | 50 | 2.955 |
| **1.6** | **Model-6-School Forestry** | | | |
| 1.61 | Model-6- Advance work | Ha. | 1,921 | 168.856 |
| 1.62 | CFP-K Programme | Nos. | 121 | 28.372 |
| **1.7** | **Model-7-Restoration of Mangroves** | | | |
| 1.71 | Model-7-Monsoon work | Ha. | 785 | 233.930 |
| | **Sub-Total** | | - | **1,084.019** |
| **2** | **PROTECTED AREA MANAGEMENT & BIO-DIVERSITY CONSERVATION** | | | |
| 2.1 | Eco-development works - Vacination, Fodder Development etc., | Nos. | 133 | 159.161 |
| 2.2 | Habitat Improvement works | Ha. | - | 14.439 |
| 2.3 | Formation of EDCs | Nos. | 10 | 2.200 |
| 2.4 | IGAs in EDCs | Nos. | 73 | 39.507 |
| 2.5 | Providing Facilitators in EDCs | Nos. | 4 | 5.760 |
| 2.6 | TA to Facilitators in EDCs | Nos. | 4 | 0.480 |
| | **Sub-Total** | | - | **221.547** |

| Sl. No. | Components / Activities | Unit | Target | |
|---|---|---|---|---|
| | | | Physical | Financial (Rs. in lakhs) |
| **3** | **PARTICIPARORY FOREST MANAGEMENT** | | | |
| 3.1 | 2nd IGA for VFCs formed during 2008-09 | Nos. | 19 | 8.550 |
| 3.2 | JFPM Facilitators | Nos. | 2 | 2.880 |
| 3.3 | TA to JFPM Facilitators | Nos. | 62 | 7.440 |
| 3.4 | TA to Lead NGOs | Nos. | 5 | 1.500 |
| 3.5 | Salary & salary arriars to JFPM coordinator | Nos. | - | 14.810 |
| | **Sub-Total** | | | **35.180** |
| **4** | **SUPPORTING ACTIVITIES FOR FOREST MANAGEMENT** | | | |
| 4.1 | GIS - MIS | Nos. | - | 55.000 |
| 4.2 | Studies / Workshop | Nos. | - | 1.000 |
| **4.3** | **Operation Cost** | | | |
| 4.31 | 3rd year Maintenance of Clonal Seed Orchard | ha | 78 | 7.488 |
| 4.32 | 2nd year Maintenance of Clonal Seed Orchard | ha | 112 | 12.286 |
| 4.33 | 1st year Maintenance of Clonal Seed Orchard | ha | 127 | 19.152 |
| 4.34 | Clonal Seed Orchard-Planting | ha | 114 | 34.382 |
| 4.35 | Clonal Seed Orchard-Advance work | ha | 29 | 8.746 |
| 4.36 | 3rd year Maintenance Seedlings Seed Orchard | ha | 52 | 4.087 |
| 4.37 | 2nd year Maintenance of Seedling Seed Orchard | ha | 197 | 20.252 |
| 4.38 | 1st year Maintenance of Seedling Seed Orchard | ha | 185 | 15.466 |
| 4.39 | Seedlings Seed Orchard-Planting | ha | 150 | 34.950 |
| 4.310 | Seedlings Seed Orchard-Advance work | ha | 21.75 | 4.674 |
| 4.311 | 2nd year maintenance - Seed Production Area-Teak | ha | 35 | 1.918 |
| 4.312 | 1st year maintenance - Seed Production Area-Teak | ha | 94.40 | 20.711 |
| 4.313 | 2nd year maintenance - Seed Production Area-Non-Teak | ha | 300 | 16.440 |
| 4.314 | 1st year- maintenance - Seed Production Area-Non-Teak | ha | 68 | 8.840 |
| 4.315 | 3rd Year Maintenance of CMA-VMG | ha | 24 | 2.638 |
| 4.316 | 2nd year Maintenance of CMA-VMG | ha | 159.50 | 23.510 |
| 4.317 | 1st year Maintenance of CMA-VMG | ha | 145 | 23.853 |
| 4.318 | CMA-VMG -Planting | ha | 87 | 29.824 |
| 4.319 | 2nd Maintenance of Germ Plasm Bank | ha | 21 | 1.586 |
| 4.320 | Ist year maintenance of Germ Plasm Bank | ha | 33 | 2.713 |
| 4.321 | Germ Plasm Bank -Planting | ha | 19 | 4.169 |
| 4.322 | Germ Plasm Bank -Advance work | ha | 23 | 5.456 |
| 4.323 | 3rd Year Maintenance of Species Trial Plot& Progeny Trial | ha | 8 | 0.571 |
| 4.324 | 2nd year Maintenance of Species Trail Plot & Progeny Trail | ha | 97 | 7.304 |
| 4.325 | 1st year Maintenance of Species Trail Plot & Progeny Trail | ha | 92 | 7.562 |

| Sl. No. | Components / Activities | Unit | Target | |
|---|---|---|---|---|
| | | | Physical | Financial (Rs. in lakhs) |
| 4.326 | Species Trail Plot & Progeny Trail -Planting | ha | 75 | 16.455 |
| 4.327 | Species Trail Plot & Progeny Trail -Advance work | ha | 27.50 | 6.523 |
| 4.328 | Identification & Maintenance of Plus Trees | Nos. | 300 | 10.260 |
| **4.4** | **Research Equipments** | | | |
| 4.41 | Seed Development | Nos. | 4 | 5.485 |
| **4.5** | **Studies** | | | |
| 4.51 | Ecological | Nos. | 2 | 2.836 |
| 4.52 | Socio-economic | Nos. | 4 | 2.363 |
| 4.53 | Silvicultural Research | Nos. | 3 | 3.545 |
| 4.54 | Research Fellowship | Nos. | 2 | 1.181 |
| 4.55 | Research (contract) | Nos. | 2 | 2.363 |
| 4.56 | Dissemination / Publication | Nos. | - | 5.000 |
| **4.6** | **Training** | | | |
| **4.61** | **Local Training** | | | |
| 4.611 | CT:CT Trainings | Nos. | 8 | 3.414 |
| 4.612 | Training to EDC members | Nos. | 73 | 48.904 |
| 4.613 | Training to PA officers | Nos. | 1 | 0.712 |
| 4.614 | In-situ training for VFC and SHG members of 2007-08 VFCs | Nos. | 353 | 223.096 |
| 4.615 | In-situ training for VFC and SHG members of 2008-09 VFCs | Nos. | 19 | 12.008 |
| 4.616 | Training for volunteers | Nos. | 35 | 14.151 |
| **4.7** | Senior Officers Outside the State | Nos. | 80 | 14.111 |
| 4.71 | VFC Presidents and Executives | Nos. | 35 | 39.200 |
| 4.72 | NGOs | Nos. | - | - |
| **4.8** | **Training Programme for Supporting Staff** | | | |
| 4.81 | Computer Literacy | Nos. | 2 | 0.840 |
| 4.82 | Financial Management | Nos. | 2 | 0.840 |
| 4.83 | Human Resource Development (HRD) & Team Building | Nos. | 2 | 0.840 |
| 4.84 | Foresters / Forest Guard | Nos. | 5 | 3.500 |
| 4.85 | Range Forest Officers | Nos. | 4 | 2.688 |
| 4.86 | Officers (CF / DCF / ACF) | Nos. | 6 | 3.024 |
| 4.87 | Work Shop | | - | - |
| **4.9** | **Overseas Training** | | | |
| 4.91 | 2-12 Months | Nos. | 13 | 126.246 |
| 4.92 | MSc., / Ph D., | Nos. | - | - |

| Sl. No. | Components / Activities | Unit | Target | |
|---|---|---|---|---|
| | | | Physical | Financial (Rs. in lakhs) |
| **4.10** | **Consultancy** | | | |
| 4.101 | JFPM | Nos. | 2 | 1.090 |
| 4.102 | Bio-diversity | Nos. | - | - |
| 4.103 | Monitoring & Evaluation | Nos. | - | 19.990 |
| | **Sub-Total** | | | **945.241** |
| **5** | **BASIC INFRASTRUCTURE FOR FIELD WORK** | | | |
| 5.1 | Vehicles | Nos. | 25 | 146.400 |
| 5.3 | Telephone | Nos. | - | - |
| 5.4 | Broadband Internet/ e-governance | Nos. | 6 | 6.540 |
| **5.5** | **Buildings** | | | |
| 5.51 | Residential Buildings | Nos. | 4 | 23.400 |
| **5.6** | **Work Shops Technical** | | | |
| 5.61 | Head office | No. | - | - |
| 5.62 | Circles / Divisions | Nos. | 1 | 2.180 |
| **5.7** | **Office Equipment** | | | |
| 5.71 | Fax / Photo copying machines | Nos. | - | - |
| 5.72 | Cable Broadband Internet Connection Facility Service | Nos. | 1 | 1.090 |
| | **Sub-Total** | | - | **179.610** |
| | **Total** | | | **2,465.597** |

**P.R. KALAVATHI**
Under Secretary to Government,
Forest, Environment & Ecology Department.

P.R. 1765

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಲ್ಲಿನ ಮಾನ್ಯತೆ ಪಡೆದ ಪ್ರೌಢ ಶಾಲೆಗಳಲ್ಲಿ ಯುವ ಸಂಸತ್ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ರಾಜ್ಯ ಸರ್ಕಾರಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸು ನೆರವು ಯೋಜನೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 6 ಸಂವ್ಯವಿ 97, ದಿನಾಂಕ:9.10.2002.

(2) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 150 ಆಡಳಿತ 2002, ದಿನಾಂಕ:11.11.2002.

(3) ಕೇಂದ್ರ ಸರ್ಕಾರದ ಸಂಸದೀಯ ವ್ಯವಹಾರಗಳ ಸಚಿವಾಲಯದ ಪತ್ರ ಸಂಖ್ಯೆ: ಎಫ್.2(2).2005– ಆರ್ ಅಂಡ್ ಸಿ, ದಿನಾಂಕ:7.2.2006.

(4) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 11 ಸಂವ್ಯವಿ 2006, ದಿನಾಂಕ:19.5.2006.

(5) ಕೇಂದ್ರ ಸರ್ಕಾರದ ಸಂಸದೀಯ ವ್ಯವಹಾರಗಳ ಮಂತ್ರಾಲಯದ ಪತ್ರ ಸಂಖ್ಯೆ:ಎಫ್ 3(3) 2008 ವೈಪಿ, ದಿ:12.05.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು, 1999ನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ (ತಿದ್ದುಪಡಿ) ನಿಯಮಗಳು, 2002ನ್ನು ಹೊರಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾಗಿರುವ ಕೇಂದ್ರ ಸರ್ಕಾರದ ಪತ್ರದಲ್ಲಿ 2005ರ ಫೆಬ್ರವರಿ 4–5ನೇ ದಿನಾಂಕಗಳಂದು ಹೈದರಾಬಾದ್‌ನಲ್ಲಿ ನಡೆದ 13ನೇ ಅಖಿಲ ಭಾರತ ಸಚೇತಕರ ಸಮ್ಮೇಳನವು, ಸಂಸದೀಯ ವ್ಯವಹಾರಗಳ ಮಂತ್ರಾಲಯವು ಪ್ರಸ್ತುತ ಒದಗಿಸುತ್ತಿರುವ ಹಣಕಾಸು ನೆರವಿನ ಪ್ರಮಾಣವನ್ನು ಒಂದು ಲಕ್ಷ ರೂಪಾಯಿಗಳಿಂದ ಮೂರು ಲಕ್ಷ ರೂಪಾಯಿಗಳಿಗೆ ಹೆಚ್ಚಿಸತಕ್ಕದ್ದೆಂದು ಇತರೆ ವಿಷಯಗಳ ಜೊತೆಯಲ್ಲಿ ಶಿಫಾರಸ್ಸು ಮಾಡಿದೆ. ಸದರಿ ಶಿಫಾರಸ್ಸನ್ನು ಭಾರತ ಸರ್ಕಾರವು ಪರಿಶೀಲಿಸಿ 2005–06ರ ಶೈಕ್ಷಣಿಕ ವರ್ಷದಿಂದ ಹಣಕಾಸು ನೆರವನ್ನು ವಾರ್ಷಿಕ ಎರಡು ಲಕ್ಷ ರೂಪಾಯಿಗಳಿಗೆ ಹೆಚ್ಚಿಸಲು ತೀರ್ಮಾನಿಸಿದೆ ಮತ್ತು ಹಣಕಾಸು ನೆರವಿನ ಯೋಜನೆಯ ಒಂದು ಪ್ರತಿಯನ್ನು ಲಗತ್ತಿಸಿ ಕಳುಹಿಸಿಕೊಟ್ಟಿರುತ್ತದೆ. ಪ್ರಸ್ತುತ ಜಾರಿಯಲ್ಲಿರುವ ನಿಯಮಗಳು ಕೇಂದ್ರ ಸರ್ಕಾರವು ಒದಗಿಸಿರುವ ಹಣಕಾಸು ಯೋಜನೆಯ ಮಾರ್ಗಸೂಚಿಗಳಿಗೆ ವ್ಯತಿರಿಕ್ತವಾಗಿರುವುದರಿಂದ ಜಾರಿಯಲ್ಲಿರುವ ನಿಯಮಗಳನ್ನು ನಿರಸನಗೊಳಿಸಿ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಲು ನಿರ್ಧರಿಸಲಾಗಿದೆ.

ಮೇಲೆ (4)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು, 1999ನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿರಸನಗೊಳಿಸಲಾಗಿದೆ. ಹಾಗೂ ಸಂಸದೀಯ ವ್ಯವಹಾರಗಳ ಮಂತ್ರಾಲಯ, ಭಾರತ ಸರ್ಕಾರ ಇವರ ಪತ್ರ ಸಂಖ್ಯೆ:ಎಫ್ 2(2) 2005–ಆರ್‌ಸಿ, ದಿನಾಂಕ:7.2.2006 ಹಾಗೂ ಇದರೊಂದಿಗೆ ಲಗತ್ತಿಸಿರುವ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸುವುದಕ್ಕಾಗಿ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸಿನ ಯೋಜನೆ 2006ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯದಲ್ಲಿ ಜಾರಿಗೊಳಿಸಲು ಆದೇಶಿಸಿದೆ.

ಮೇಲೆ (5) ರಲ್ಲಿ ಓದಲಾಗಿರುವ ಕೇಂದ್ರ ಸರ್ಕಾರದ ಪತ್ರದಲ್ಲಿ 2008ರ ಫೆಬ್ರವರಿ 4–5ನೇ ದಿನಾಂಕಗಳಂದು ಮುಂಬೈನಲ್ಲಿ ನಡೆದ 14ನೇ ಅಖಿಲ ಭಾರತ ಸಚೇತಕರ ಸಮ್ಮೇಳನವು, ಇತರೆ ವಿಷಯಗಳ ಜೊತೆಯಲ್ಲಿ ಸಂಸದೀಯ ವ್ಯವಹಾರಗಳ ಮಂತ್ರಾಲಯವು ಒದಗಿಸುತ್ತಿರುವ ಹಣಕಾಸು ನೆರವಿನ ಪ್ರಮಾಣವನ್ನು ಈ ಮುಂದಿನಂತೆ ಹೆಚ್ಚಿಸತಕ್ಕದ್ದೆಂದು ಶಿಫಾರಸ್ಸು ಮಾಡಿದೆ.

| | | |
|---|---|---|
| (ಎ) | 100 ರವರೆಗೆ ಸದಸ್ಯರುಗಳನ್ನು ಹೊಂದಿರುವ ವಿಧಾನಮಂಡಲಗಳಿಗೆ | ವರ್ಷಕ್ಕೆ 3 ಲಕ್ಷ ರೂಪಾಯಿಗಳು |
| (ಬಿ) | 100 ರಿಂದ 200ರ ನಡುವೆ ಸದಸ್ಯರುಗಳನ್ನು ಹೊಂದಿರುವ ವಿಧಾನಮಂಡಲಗಳು | ವರ್ಷಕ್ಕೆ 4 ಲಕ್ಷ ರೂಪಾಯಿಗಳು |
| (ಸಿ) | 200ಕ್ಕೂ ಹೆಚ್ಚು ಸದಸ್ಯರುಗಳನ್ನು ಹೊಂದಿರುವ ವಿಧಾನಮಂಡಲಗಳು | ವರ್ಷಕ್ಕೆ 5 ಲಕ್ಷ ರೂಪಾಯಿಗಳು |

(ವಿಧಾನಮಂಡಲಗಳನ್ನು ಹೊಂದಿರುವ ಕೇಂದ್ರಾಡಳಿತ ಪ್ರದೇಶಗಳ ಸಂಬಂಧದಲ್ಲಿ ಮಿತಿಯು ಈ ಹಿಂದೆ ಇದ್ದಂತೆಯೇ ಇರತಕ್ಕದ್ದು ಎಂದರೆ, ಪ್ರತಿಯೊಂದು ಕೇಂದ್ರಾಡಳಿತ ಪ್ರದೇಶಕ್ಕೆ ಪ್ರತಿವರ್ಷಕ್ಕೆ 2,00,000/– ರೂಪಾಯಿಗಳು)

ಈ ವಿಷಯವನ್ನು ಭಾರತ ಸರ್ಕಾರವು ಹಣಕಾಸು ಮಂತ್ರಾಲಯದೊಡನೆ ಸಮಾಲೋಚಿಸಿ ಪ್ರಸಕ್ತ ಹಣಕಾಸು ವರ್ಷದಿಂದ ಎಂದರೆ 2009–2010 ರಿಂದ 14ನೇ ಅಖಿಲ ಭಾರತ ಸಚೇತಕರ ಸಮ್ಮೇಳನದಲ್ಲಿ ಶಿಫಾರಸ್ಸು ಮಾಡಿರುವಂತೆ ಹಣಕಾಸು ನೆರವನ್ನು ಹೆಚ್ಚಿಸಲು ತೀರ್ಮಾನಿಸಿದೆ ಮತ್ತು ಹಣಕಾಸು ನೆರವಿನ ಯೋಜನೆ ಒಂದು ಪ್ರತಿಯನ್ನು ಲಗತ್ತಿಸಿ ಕಳುಹಿಸಿಕೊಟ್ಟಿರುತ್ತದೆ. ಪ್ರಸ್ತುತ ಜಾರಿಯಲ್ಲಿರುವ ನಿಯಮಗಳು ಕೇಂದ್ರ ಸರ್ಕಾರವು ಒದಗಿಸಿರುವ ಹಣಕಾಸು ಯೋಜನೆಯ ಮಾರ್ಗಸೂಚಿಗಳಿಗೆ ವ್ಯತಿರಿಕ್ತವಾಗಿರುವುದರಿಂದ ಜಾರಿಯಲ್ಲಿರುವ ನಿಯಮಗಳನ್ನು ನಿರಸನಗೊಳಿಸಿ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸಲು ನಿರ್ಧರಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 15 ಸಂವ್ಯವಿ 2009, ಬೆಂಗಳೂರು, ದಿನಾಂಕ: 14ನೇ ಜುಲೈ 2009**

ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು, 2006ನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿರಸನಗೊಳಿಸಲಾಗಿದೆ. ಹಾಗೂ ಸಂಸದೀಯ ವ್ಯವಹಾರಗಳ ಮಂತ್ರಾಲಯ, ಭಾರತ ಸರ್ಕಾರ ಇವರ ಪತ್ರ ಸಂಖ್ಯೆ:ಎಫ್ 3(3) 2008 ವೈಪಿ. ದಿ:12.05.2009 ಹಾಗೂ ಇದರೊಂದಿಗೆ ಲಗತ್ತಿಸಿರುವ ಯುವ ಸಂಸತ್ ಸ್ಪರ್ಧೆಗಳನ್ನು ನಡೆಸುವುದಕ್ಕಾಗಿ ರಾಜ್ಯಗಳು/ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸಿನ ನೆರವು ಯೋಜನೆ 2009ನ್ನು (ಅನುಬಂಧದಲ್ಲಿ ಲಗತ್ತಿಸಿ) ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯದಲ್ಲಿ ಜಾರಿಗೊಳಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಜಿ. ಶ್ಯಾಮಲ**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 1790

**ವಿಷಯ:** ಶ್ರೀ ಜಿ.ಚನ್ನಬಸಪ್ಪ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಇವರ ವಿರುದ್ಧ ಜನ್ಮ ದಿನಾಂಕ ತಪ್ಪಾಗಿ ತಿದ್ದಿ ನಮೂದಿಸಲ್ಪಟ್ಟಿರುವುದರಿಂದ ಇಲಾಖಾ ವಿಚಾರಣೆ ಬಾಕಿಯಿರಿಸಿ, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(3)ರ ಪ್ರಕಾರ ಅಮಾನತ್ತಿನಲ್ಲಿರಿಸುವ ಬಗ್ಗೆ.

**ಓದಲಾಗಿದೆ:** 1) ಭಾಷಾಂತರ ನಿರ್ದೇಶನಾಲಯದ ಪತ್ರ ಸಂಖ್ಯೆ.ಭಾನಿ 78 ಆಡಳಿತ 2006, ದಿನಾಂಕ:30.11.2006.

2) ದ ಸಾಲಿಸೆಟರ್ ಮತ್ತು ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಕಾನೂನು ಇಲಾಖೆ ಮತ್ತು ವಿಚಾರಣಾ ಪ್ರಾಧಿಕಾರ ಇವರ ತೀರ್ಪು ದಿನಾಂಕ:17.09.2008.

3) ಸರ್ಕಾರದ ಪತ್ರ ಸಂಖ್ಯೆ.ಸಂವ್ಯಶಾಇ 46 ಭಾನಿವಿ 2006, ದಿ:11.11.2008ರಲ್ಲಿ ದೋಷಾರೋಪಣಾ ಪತ್ರವನ್ನು ಹೊರಡಿಸಲಾಗಿದೆ.

4) ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 46 ಭಾನಿವಿ 2006, ದಿ:27.12.2008.

**ಪ್ರಸ್ತಾವನೆ:**

ಭಾಷಾಂತರ ನಿರ್ದೇಶನಾಲಯದ ನಿರ್ದೇಶಕರು ಮೇಲೆ ಓದಲಾದ (1)ರ ಪತ್ರದಲ್ಲಿ ಶ್ರೀ ಜಿ.ಚನ್ನಬಸಪ್ಪ, ಸಂಶೋಧನಾಧಿಕಾರಿ ಇವರು ತಮ್ಮ ನೇಮಕಾತಿಗಾಗಿ ಅರ್ಜಿ ಮತ್ತು ದಾಖಲೆಗಳಲ್ಲಿ ತಮ್ಮ ಜನ್ಮ ದಿನಾಂಕವನ್ನು ತಪ್ಪಾಗಿ ನೀಡಿರುವುದರ ಬಗ್ಗೆ ಖಚಿತಪಡಿಸಿ, ಸದರಿಯವರು ತಮ್ಮ ಜನ್ಮ ದಿನಾಂಕ:13.08.1950ನ್ನು 13.08.1954 ಯೆಂದು ತಿದ್ದಿ ಸರ್ಕಾರಕ್ಕೆ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆದಿದ್ದಾರೆಂದು ತಿಳಿಸಿ, ಮೂಲ ದಾಖಲೆಗಳ ಸಮೇತ ವರದಿ ಸಲ್ಲಿಸಿರುತ್ತಾರೆ.

ದಿ ಸಾಲಿಸೆಟರ್ ಮತ್ತು ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಕಾನೂನು ಇಲಾಖೆ ಮತ್ತು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋಮಿತಿ ನಿಗದಿ) ಅಧಿನಿಯಮ 1974ರಡಿ ವಿಚಾರಣಾ ಪ್ರಾಧಿಕಾರ ಇವರು ಮೇಲೆ ಓದಲಾದ (2)ರಲ್ಲಿಯ ತಮ್ಮ ವಿಚಾರಣೆಯ ತೀರ್ಪಿನಲ್ಲಿ ಶ್ರೀ ಜಿ.ಚನ್ನಬಸಪ್ಪರವರ ಜನ್ಮ ದಿನಾಂಕವು 13.08.1950ಯೆಂದು ನಿರ್ಣಯಿಸಿರುವುದರಿಂದ ಶ್ರೀ ಚನ್ನಬಸಪ್ಪರವರು ತಮ್ಮ ಜನ್ಮ ದಿನಾಂಕವು 13.08.1954 ಎಂಬುದಾಗಿ ಸರ್ಕಾರಕ್ಕೆ ತಪ್ಪು ಮಾಹಿತಿಯನ್ನು ನೀಡಿ ಸರ್ಕಾರದ ಉದ್ಯೋಗ ಪಡೆಯಲು ಪ್ರಯತ್ನಿಸಿರುವುದು ಮೇಲ್ನೋಟಕ್ಕೆ ದೃಢವಾಗಿರುತ್ತದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಸರ್ಕಾರವು ಶ್ರೀ ಜಿ.ಚನ್ನಬಸಪ್ಪರವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಹೊರಡಿಸಿರುತ್ತದೆ. ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಸದರಿಯವರ ವಿರುದ್ಧ ಹೊರಿಸಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ಇಲಾಖಾ ವಿಚಾರಣೆಯು ಸಹ ನಿರಂತರವಾಗಿ ನಿಯಮಾನುಸಾರ ನಡೆಯುತ್ತಿದೆ.

ಶ್ರೀ ಜಿ.ಚನ್ನಬಸಪ್ಪ, ಕನ್ನಡ ಭಾಷಾಂತರಕಾರರ ಹುದ್ದೆಗೆ ನೇಮಕವಾಗಿ, ನೇಮಕವಾಗುವಾಗ ಸೇವಾಪುಸ್ತಕ ಮತ್ತು ಇತರೆ ಸರ್ಕಾರಿ ದಾಖಲೆಗಳಲ್ಲಿ ತಮ್ಮ ಜನ್ಮದಿನಾಂಕವನ್ನು ತಪ್ಪಾಗಿ ಬರೆಸಿ, ಸರ್ಕಾರಿ ಹುದ್ದೆ ಮತ್ತು ಸೌಲಭ್ಯಗಳನ್ನು ಪಡೆದಿರುತ್ತಾರೆ ಹಾಗೂ ಈ ತಪ್ಪು ಜನ್ಮ ದಿನಾಂಕವನ್ನು ಇಲ್ಲಿಯವರೆಗೂ ಗುಪ್ತವಾಗಿರಿಸಿಕೊಂಡು ಬಂದು ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ, ಸದರಿಯವರ ನಡತೆಯು ಕರ್ನಾಟಕ ಸರ್ಕಾರಿ (ನಡತೆ) ನಿಯಮಗಳು, 1966ರನ್ವಯ ದುರ್ನಡತೆಯಾಗಿರುತ್ತದೆ.

ಪ್ರಸ್ತುತ, ಶ್ರೀ ಚನ್ನಬಸಪ್ಪ, ಸಂಶೋಧನಾಧಿಕಾರಿ ಇವರ ಜನ್ಮ ದಿನಾಂಕದ ಬಗ್ಗೆ ಸಹಾಯಕ ಸಾಲಿಸಿಟರ್ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಕಾನೂನು ಇಲಾಖೆರವರು ತನಿಖೆ ನಡೆಸಿ, ಸದರಿ ಅಧಿಕಾರಿಯ ನಿಜವಾದ ಜನ್ಮ ದಿನಾಂಕ 13.08.1950 ಎಂದು ತಿಳಿಸಿರುವ ಹಿನ್ನೆಲೆಯಲ್ಲಿ ಹಾಗೂ ಮೇಲ್ನೋಟಕ್ಕೆ ಸದರಿ ಆಪಾದಿತ ನೌಕರರು ನೀಡಲಾದ ಜನ್ಮ ದಿನಾಂಕವು ತಪ್ಪಾಗಿಯೂ ಹಾಗೂ ದುರುದ್ದೇಶ ಪೂರ್ವಕವಾಗಿ ದಾಖಲಿಸಿರುವುದರಿಂದ, ಈ ಆರೋಪವು ಗಂಭೀರವಾಗಿರುವುದರಿಂದ ಈಗಾಗಲೇ ಇಲಾಖಾ ವಿಚಾರಣೆ ನಡೆಸುತ್ತಿರುವ ಹಿನ್ನೆಲೆಯಲ್ಲಿ, ಸರ್ಕಾರವು ಸದರಿಯವರನ್ನು ಅಮಾನತ್ತಿನಲ್ಲಿಡಲು ತೀರ್ಮಾನಿಸಿದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 18 ಭಾನಿವಿ 2009, ಬೆಂಗಳೂರು, ದಿನಾಂಕ: 22ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಜಿ.ಚನ್ನಬಸಪ್ಪ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ ಇವರ ವಿರುದ್ಧ ಆರೋಪಗಳ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿ ನೌಕರರ ವಿರುದ್ಧ ಮೇಲ್ನೋಟಕ್ಕೆ ದಾಖಲೆಯನ್ನು ತಿದ್ದಿರುವ ಆರೋಪಕ್ಕೆ ಸಂಬಂಧಿಸಿದಂತೆ, ಸದರಿ ಆರೋಪವನ್ನು ದೃಢೀಕರಿಸಲು ಸಾಕಷ್ಟು ದಾಖಲೆಗಳು ಇರುವುದಾಗಿ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ 1957ರ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 10ನೇ ನಿಯಮದ (3)ನೇ ಉಪ ಪ್ರಕರಣದಡಿ, ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜಿ.ಚನ್ನಬಸಪ್ಪರವರು ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿಯವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದವರ ಲಿಖಿತ ಅನುಮತಿ ಪಡೆಯದೇ ಕೇಂದ್ರ ಕಾರ್ಯಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಿಚಾರ್ಡ್ ಲೋಬೋ**

ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ

ಪಿ.ಆರ್. 1791 ಸರ್ಕಾರದ ಜಂಟಿ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಸಿಐ 233 ಎಸ್‌ಪಿಐ 2008, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2009**

**ವಿಷಯ:** ಹೊಸ ಕೈಗಾರಿಕಾ ನೀತಿ 2009–14 ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಿಐ 233 ಎಸ್ ಪಿಐ 2008 ದಿ: 28.02.2009

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಅನುಬಂಧ–2ರ ಕಂಡಿಕೆ – 13 ರಲ್ಲಿ ವಿದ್ಯುತ್ ಶುಲ್ಕದಿಂದ ವಿನಾಯಿತಿ ಎಂಬುದಕ್ಕೆ ಬದಲಾಗಿ **"ವಿದ್ಯುತ್ ತೆರಿಗೆಯಿಂದ ವಿನಾಯಿತಿ"** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಬೀರ್ ಹರಿ ಸಿಂಗ್**

ಪಿ.ಆರ್. 1779 ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆ:: ಬ್ಲೂಪಾಲ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕೋಟೆಭಾವಿ/2007/2860 ದಿನಾಂಕ: 20.12.2007/ 08.01.2008.

2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಬ್ಲೂಪಾಲ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಕೋಟೆಭಾವಿ ಗ್ರಾಮದ ಬಳಿ ಕಂದನಿಹಳ್ಳಕ್ಕೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ಬ್ಲೂಪಾಲ್ ಪವರ್ ಪ್ರೈವೇಟ್ ಲಿಮಿಟೆಡ್‌ಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ : –

**ಸರ್ಕಾರದ ಆದೇಶ ಸಂಖ್ಯೆ: ಇಎನ್ 25 ಎನ್‌ಸಿಇ 2008, ಬೆಂಗಳೂರು, ದಿನಾಂಕ: 16ನೇ ಜುಲೈ 2009**

ಮೆ:: ಬ್ಲೂಪಾಲ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಕೋಟೆಭಾವಿ ಗ್ರಾಮದ ಬಳಿ ಕಂದನಿಹಳ್ಳಕ್ಕೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಒಂದು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1753

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಪಾಂಚಜನ್ಯ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಸಿಂಗನಾಪುರ/2007/2930, ದಿನಾಂಕ: 29.12.2007/ 23.01.2008.

2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಪಾಂಚಜನ್ಯ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಸಿಂಗನಾಪುರ ಗ್ರಾಮದ ಬಳಿ ಘಟಪ್ರಭಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ಪಾಂಚಜನ್ಯ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್‌ಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ : –

**ಸರ್ಕಾರದ ಆದೇಶ ಸಂಖ್ಯೆ: ಇಎನ್ 53 ಎನ್‌ಸಿಇ 2008, ಬೆಂಗಳೂರು, ದಿನಾಂಕ: 16ನೇ ಜುಲೈ 2009**

ಮೆ:: ಪಾಂಚಜನ್ಯ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಸಿಂಗನಾಪುರ ಗ್ರಾಮದ ಬಳಿ ಘಟಪ್ರಭಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಸಿಂಗನಾಪುರ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಒಂದು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1754 **ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಅರೋಮಿರಾ ಎನರ್ಜಿ ಅಂಡ್ ಇನ್ ಫ್ರಾಸ್ಟ್ರಕ್ಚರ್ ಇಂಡಿಯಾ (ಪ್ರೈ) ಲಿಮಿಟೆಡ್ ಇವರಿಗೆ 100.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಎಇಐಪಿಎಲ್/2007/2761 ದಿನಾಂಕ: 28/29.12.2007.

2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಅರೋಮಿರಾ ಎನರ್ಜಿ ಅಂಡ್ ಇನ್‌ಫ್ರಾಸ್ಟ್ರಕ್ಚರ್ ಇಂಡಿಯಾ (ಪ್ರೈ) ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ 100.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ಅರೋಮಿರಾ ಎನರ್ಜಿ ಅಂಡ್ ಇನ್‌ಫ್ರಾಸ್ಟ್ರಕ್ಚರ್ ಇಂಡಿಯಾ (ಪ್ರೈ) ಲಿಮಿಟೆಡ್ ಇವರಿಗೆ 100.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 3 ಎನ್‌ಸಿಇ 2008, ಬೆಂಗಳೂರು, ದಿನಾಂಕ: 15ನೇ ಜುಲೈ 2009**

ಮೆ:: ಅರೋಮಿರಾ ಎನರ್ಜಿ ಅಂಡ್ ಇನ್‌ಫ್ರಾಸ್ಟ್ರಕ್ಚರ್ ಇಂಡಿಯಾ (ಪ್ರೈ) ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ 100.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topsheet No. | Proposed capacity in MW | Near by villages of the proposed area & District | Geographical area description of the project |
|---|---|---|---|
| 48 O/14 & 57 C/2 | 100 MW | Ajjampura, Channapur, Kurubarahalli, Hosour, Yarehalli & Inglaranahalli<br><br>**Chikkamagalur District** | The proposed area is a large plain lands, widely spread across Birur and Kadur towns surrounded by various village as mentioned in Column-4 and covered in two toposheets No.48 O/14, 57 C/2. The plain lands have open scrub features and have five high-rise peaks. The railway track passes in the area earmarked. The railway clearance is a must for development of this project. The total area is covered in the following geographical co-ordinates:<br>**Latitude:** 13$^{o}$35'21"-13$^{o}$42'49"N<br>**Longitude:** 75$^{o}$57'37"-76$^{o}$0'51"E<br>**Ridge peaks:** 793, 814, 815, 804 & 802m Amsl |
| **Total** | **100 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 1 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.
12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1781 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಐ.ಕೆ.ಪಿ. ಕನ್ಸ್‌ಟ್ರಕ್ಷನ್ ಇವರಿಗೆ 8.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಐಕೆಪಿ/2007/2772 ದಿನಾಂಕ: 29.12.2007.
2. ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಐ.ಕೆ.ಪಿ. ಕನ್ಸ್‌ಟ್ರಕ್ಷನ್ ಇವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ 8.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ಐ.ಕೆ.ಪಿ. ಕನ್ಸ್‌ಟ್ರಕ್ಷನ್ ಇವರಿಗೆ 8.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 4 ಎನ್‌ಸಿಇ 2008, ಬೆಂಗಳೂರು, ದಿನಾಂಕ: 15ನೇ ಜುಲೈ 2009**

ಮೆ:: ಐ.ಕೆ.ಪಿ. ಕನ್ಸ್‌ಟ್ರಕ್ಷನ್ ಇವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ 8.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topsheet No. | Proposed capacity in MW | Near by villages of the proposed area & District | Geographical area description of the project |
|---|---|---|---|
| 57 B/3 | 8.5 MW (34 x 250 KW) | Devaragollarahatti, Haluvadara, Arubugatte, Heggere, Bharamasagara & Bevinahalli<br><br>**Chitradurga District** | The identified location is a ground level plain spread across the Pune-Bangalore NH4 and situated on the South of Bharamasagar Town. The proposed location appears to be on the wind shadow zone of the area situated on the West of this location. The area has three peaks and is surrounded by the villages as mentioned in the column (4). Further, it appears to be non-forest and open scrub features and is covered in the following Geographical Co-ordinates:<br>**Latitude:** $14^{o}18'23"$-$14^{o}22'11"$N<br>**Longitude:** $76^{o}10'0"$-$76^{o}11'51"$E<br>**Ridge peaks:** 706, 792 & 754m Amsl |
| **Total** | **8.5 MW** | | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 1 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ

ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ) (1)ರನ್ವಯ ಎರಡು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗದ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು, ಶ್ರೀ ಕೆ. ಶಂಕರಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು, ಬಳ್ಳಾರಿ, ಇವರು ದಿನಾಂಕ 04.01.1983 ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ 12.06.1950 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 32 ವರ್ಷ, 06 ತಿಂಗಳು, 22 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಎರಡು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸುರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 222 ಪಿಪಿಇ 2009 ಬೆಂಗಳೂರು, ದಿನಾಂಕ: 1ನೇ ಜೂನ್ 2009**

ಶ್ರೀ ಕೆ. ಶಂಕರಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247 (ಎ)(1)ರನ್ವಯ ಎರಡು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆ (ಸೇವೆಗಳು –3) ಯ ಟಿಪ್ಪಣಿ ಸಂ: ಆಇ 719 ಸೇ3/09, ದಿನಾಂಕ:07.05.2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ಧಪ್ಪ**

ಪಿ.ಆರ್. 1395

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಎನ್. ಈನೋಸ್, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಚಿಕ್ಕಮಗಳೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ –II ಸಂ. ಲಾ 161 ಪಿಪಿಇ 86, ದಿನಾಂಕ : 24.07.1989
2. ಸರ್ಕಾರದ ಪತ್ರದ ಸಂ; ಲಾ 206 ಪಿಪಿಇ 91, ದಿನಾಂಕ: 05.12.91
3. ಸದರಿ ಅಧಿಕಾರಿಯವರ ಮನವಿ ದಿನಾಂಕ 25.02.2009
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/419/2008–09, ದಿನಾಂಕ 03.03.2009.

**ಪ್ರಸ್ತಾವನೆ:**

ಶ್ರೀ ಎಂ.ಎನ್. ಈನೋಸ್, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಚಿಕ್ಕಮಗಳೂರು, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 24.07.1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 36ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 04.08.1989 ರಂದು ಸಹಾಹಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ನಿವೃತ್ತ ಅಧಿಕಾರಿಯವರ ಜನ್ಮ ದಿನಾಂಕ: 15.05.1950 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ: 05.12.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಮೇಲೆ (3) ರಲ್ಲಿ ಓದಲಾದ ಮನವಿಯಲ್ಲಿ ಸದರಿ ನಿವೃತ್ತ ಅಧಿಕಾರಿಯವರು ದಿನಾಂಕ: 04.08.1989 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿದ್ದು, ಇವರ ಜನ್ಮ ದಿನಾಂಕವನ್ನು 15.05.1950 ಎಂದು ಸರ್ಕಾರವು ಒಪ್ಪಿರುವುದರಿಂದ, 39 ವರ್ಷ, 02 ತಿಂಗಳು, 19 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ) (1)ರನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಶ್ರೀ ಎಂ.ಎನ್. ಈನೋಸ್, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಚಿಕ್ಕಮಗಳೂರು, ಇವರು ದಿನಾಂಕ: 04.08.1989 ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ: 15.05.1950 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 39 ವರ್ಷ 02 ತಿಂಗಳು 19 ದಿನಗಳ ವಯಸ್ಸಿನಲ್ಲಿ

ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಅದೇಶ ಸಂಖ್ಯೆ: ಒಇ 148 ಪಿಪಿಇ 2009, ಬೆಂಗಳೂರು, ದಿನಾಂಕ: 1ನೇ ಜೂನ್ 2009**

ಶ್ರೀ ಎಂ.ಎನ್. ಈನೋಸ್, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆ (ಸೇವೆಗಳು–3) ಯ ಟಿಪ್ಪಣಿ ಸಂ:ಆ.ಇ. 792 ಸೇ3/09 ದಿನಾಂಕ:13.05.2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1396

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಅನಿಲ್‌ಕುಮಾರ್, ಹಿಂದಿನ ತಹಶೀಲ್ದಾರ್, ಮಂಡ್ಯ ತಾಲ್ಲೂಕು ಹಾಗೂ ಇತರೆ ಸಿಬ್ಬಂದಿಗಳ ವಿರುದ್ಧ ಶಿಸ್ತು ಕ್ರಮ ಕುರಿತು – ಆರೋಪದಿಂದ ದೋಷಮುಕ್ತ ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಇವರ ಪತ್ರ ಸಂ. ಇಎಸ್‌ಟಿ (2) 57/2005–06, ದಿನಾಂಕ:08.06.2007
2. ಅಧಿಕಾರಿ/ನೌಕರರಿಗೆ ಜಾರಿ ಮಾಡಲಾಗಿದ್ದ ಕಾರಣ ಕೇಳುವ ನೋಟೀಸು ದಿನಾಂಕ:06.09.2007
3. ಅಧಿಕಾರಿ/ನೌಕರರ ಲಿಖಿತ ಹೇಳಿಕೆ :
   (i) ಶ್ರೀ ಎಸ್.ಬಿ. ಅನಿಲ್‌ಕುಮಾರ್, ಹಿಂದಿನ ತಹಶೀಲ್ದಾರ್, ಮಂಡ್ಯ, ದಿನಾಂಕ:15.10.2007
   (ii) ಶ್ರೀ ಬಸವರಾಜಯ್ಯ, ಹಿಂದಿನ ಶಿರಸ್ತೇದಾರ್, ಮಂಡ್ಯ ತಾಲ್ಲೂಕು ಕಛೇರಿ, ದಿನಾಂಕ:20.10.2008
   (iii) ಶ್ರೀ ಆರ್.ಬಿ. ರಾಮಣ್ಣನವರ್, ಹಿಂದಿನ ಶಿರಸ್ತೇದಾರ್, ಮಂಡ್ಯ ತಾಲ್ಲೂಕು ಕಛೇರಿ, ದಿನಾಂಕ: 05.12.2007
   (iv) ಶ್ರೀ ಎಸ್.ಆರ್. ಲಕ್ಷ್ಮೀಕಾಂತಾಚಾರ್, ಹಿಂದಿನ ರಾಜಸ್ವ ನಿರೀಕ್ಷಕರು, ಮಂಡ್ಯ – ಸಲ್ಲಿಸಿರುವುದಿಲ್ಲ.
   (v) ಶ್ರೀ ಕೆ.ಎಸ್. ರಾಮರಾವ್, ಹಿಂದಿನ ಗ್ರಾಮಲೆಕ್ಕಿಗ, ಮಂಡ್ಯ ತಾಲ್ಲೂಕು, ಸಲ್ಲಿಸಿರುವುದಿಲ್ಲ.
   (vi) ಶ್ರೀ ಗುರುಸ್ವಾಮಿ, ಹಿಂದಿನ ದ್ವಿ.ದ.ಸ., ಮಂಡ್ಯ ತಾಲ್ಲೂಕು, ದಿನಾಂಕ: 15.10.2007
   (vii) ಶ್ರೀ ಎಸ್. ಶೇಷಾದ್ರಿ, ಹಿಂದಿನ ದ್ವಿ.ದ.ಸ., ಮಂಡ್ಯ ತಾಲ್ಲೂಕು, ದಿನಾಂಕ: 15.10.07
   (viii) ಶ್ರೀ ಎನ್.ಜಿ. ಪ್ರಾಣೇಶ್, ಹಿಂದಿನ ದಫ್ತರ್‌ಬಂದ್, ಮಂಡ್ಯ ತಾಲ್ಲೂಕು, ದಿನಾಂಕ:03.10.2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1), ದಿನಾಂಕ 8.6.2007ರಲ್ಲಿ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಇವರು ಮಂಡ್ಯ ತಾಲ್ಲೂಕು, ಕಸಬಾ ಹೋಬಳಿ, ಬೂದನೂರು ಗ್ರಾಮದ ಸ.ನಂ: 273ರ ಸರ್ಕಾರಿ ರಸ್ತೆ ಜಮೀನಿನ ಪೈಕಿ 0–08 ಗುಂಟೆ ಖಾಸಗಿಯವರಿಗೆ ಅಕ್ರಮವಾಗಿ ಸರ್ಕಾರಿ ದಾಖಲೆಗಳನ್ನು ಸೃಷ್ಟಿಸಿಕೊಟ್ಟು ಅಧಿಕಾರ ದುರುಪಯೋಗ ಪಡಿಸಿಕೊಂಡ ಹಾಗೂ ಕರ್ತವ್ಯಲೋಪ ಎಸಗಿದ ಆರೋಪಗಳ ಮೇಲೆ ಈ ಕೆಳಕಂಡ ಎಂಟು ಅಧಿಕಾರಿ/ನೌಕರರ ವಿರುದ್ಧ ಕೆ.ಸಿ.ಎಸ್ (ಸಿಸಿಎ) ನಿಯಮಗಳು 1957ರ ನಿಯಮ 13ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸುವಂತೆ ಅನುಬಂಧ 1 ರಿಂದ 4ರವರೆಗಿನ ದೋಷಾರೋಪಣಾ ಪಟ್ಟಿಗಳನ್ನು ಅಗತ್ಯ ದಾಖಲೆಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

(1) ಶ್ರೀ ಎಸ್.ಬಿ. ಅನಿಲ್‌ಕುಮಾರ್, ಹಿಂದಿನ ತಹಶೀಲ್ದಾರ್, ಮಂಡ್ಯ ತಾಲ್ಲೂಕು

(2) ಶ್ರೀ ಬಸವರಾಜಯ್ಯ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಮಂಡ್ಯ

(3) ಶ್ರೀ ಆರ್.ಬಿ. ರಾಮಣ್ಣನವರ್, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಮಂಡ್ಯ

(4) ಶ್ರೀ ಎಸ್.ಆರ್. ಲಕ್ಷ್ಮೀಕಾಂತಾಚಾರ್, ಹಿಂದಿನ ರಾಜಸ್ವ ನಿರೀಕ್ಷಕರು, ಕಸಬಾ, 2ನೇ ವೃತ್ತ, ಮಂಡ್ಯ ತಾಲ್ಲೂಕು

(5) ಶ್ರೀ ಕೆ.ಎಸ್. ರಾಮರಾವ್, ಹಿಂದಿನ ಗ್ರಾಮ ಲೆಕ್ಕಿಗ, ಬೂದನೂರು ವೃತ್ತ, ಮಂಡ್ಯ ತಾಲ್ಲೂಕು,

(6) ಶ್ರೀ ಗುರುಸ್ವಾಮಿ, ಹಿಂದಿನ ದ್ವಿ.ದ.ಸ., ತಾಲ್ಲೂಕು ಕಛೇರಿ, ಮಂಡ್ಯ,

(7) ಶ್ರೀ ಎಸ್. ಶೇಷಾದ್ರಿ, ದ್ವಿ.ದ.ಸ., ತಾಲ್ಲೂಕು ಕಛೇರಿ, ಮಂಡ್ಯ

(8) ಶ್ರೀ ಎನ್.ಜಿ. ಪ್ರಾಣೇಶ್, ದಫ್ತರ್‌ಬಂದ್, ತಾಲ್ಲೂಕು ಕಛೇರಿ, ಮಂಡ್ಯ

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿಗಳನ್ವಯ ಮೇಲ್ಕಂಡ ಎಂಟು ಅಧಿಕಾರಿ/ನೌಕರರಿಗೆ ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 6.9.2007ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಮೇಲೆ ಓದಲಾದ ಕ್ರ.ಸಂ. (3) ರನ್ವಯ ಲಿಖಿತ ಸಮಾಜಾಯಿಷಿಗಳನ್ನು ಸರ್ಕಾರಕ್ಕೆ ಸಲ್ಲಿಸುತ್ತಾ ತಮ್ಮಗಳ ವಿರುದ್ಧ ಹೊರಿಸಲಾದ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ. ಶ್ರೀ ಅನಿಲ್‌ಕುಮಾರ್, ಹಿಂದಿನ ತಹಶೀಲ್ದಾರ್, ಮಂಡ್ಯ ತಾಲ್ಲೂಕು, ಇವರು ತಮ್ಮ ಲಿಖಿತ ಸಮಜಾಯಿಷಿಯಲ್ಲಿ ಈಗಾಗಲೇ ಉಪವಿಭಾಗಾಧಿಕಾರಿಗಳು, ಮಂಡ್ಯ ಉಪ ವಿಭಾಗ, ಇವರು ದಿನಾಂಕ: 16.10.2006 ರಲ್ಲಿ ಈ ಪ್ರಕರಣದ ಕುರಿತು ತನಿಖೆ ನಡೆಸಿ, ಜಿಲ್ಲಾಧಿಕಾರಿಗಳಿಗೆ ಮಂಡಿಸಿರುವ ವರದಿಯಲ್ಲಿ ತಹಶೀಲ್ದಾರ್, ಮಂಡ್ಯರವರಿಂದ ಉದ್ದೇಶಪೂರ್ವಕವಾಗಿ ಲೋಪ ಕಂಡುಬರುತ್ತಿಲ್ಲವಾದ್ದರಿಂದ ಅವರನ್ನು ಈ ಪ್ರಕರಣದಿಂದ ಕೈಬಿಡಬಹುದಾಗಿದೆ ಎಂದು ಜಿಲ್ಲಾಧಿಕಾರಿಗಳಿಗೆ ವರದಿ ಮಾಡಿದ್ದ ಹಿನ್ನಲೆಯಲ್ಲಿ, ತಮ್ಮನ್ನು ಈ ಆರೋಪದಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ. ಅದರಂತೆ, ಉಪ ವಿಭಾಗಾಧಿಕಾರಿಗಳೂ ಜಿಲ್ಲಾಧಿಕಾರಿಗಳಿಗೆ ಈ ಬಗ್ಗೆ ವರದಿ ಮಾಡಿರುವುದನ್ನು ಪರಿಗಣಿಸಿ, ಉಳಿದ ನೌಕರರು ಸಲ್ಲಿಸಿರುವ ಲಿಖಿತ ಸಮಜಾಯಿಷಿಗಳು ಸಮರ್ಥನೀಯವಲ್ಲವೆಂದು ಅವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿದೆ. ಶ್ರೀ ಅನಿಲ್‌ಕುಮಾರ್, ಹಿಂದಿನ ತಹಶೀಲ್ದಾರ್, ಮಂಡ್ಯ ಇವರನ್ನು ಈ ಪ್ರಕರಣದಲ್ಲಿ ಹೂಡಲಾಗಿದ್ದ ಆರೋಪಗಳಿಂದ ಮುಕ್ತರನ್ನಾಗಿ ಮಾಡಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ. ಆರ್‌ಡಿ 25 ಎಡಿಇ 2007, ಬೆಂಗಳೂರು, ದಿನಾಂಕ: 26.05.2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಪ್ರಕರಣದಲ್ಲಿ ಭಾಗಿಯಾಗಿದ್ದ ಶ್ರೀ ಅನಿಲ್‌ಕುಮಾರ್ ಹಿಂದಿನ ತಹಶೀಲ್ದಾರ್, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ, ಪಸ್ತುತ ತಹಶೀಲ್ದಾರ್, ಭೂಮಿ ಉಸ್ತುವಾರಿ ಕೋಶ, ಬೆಂಗಳೂರು, ಇವರು ಸಲ್ಲಿಸಿದ್ದ ಲಿಖಿತ ಸಮಜಾಯಿಷಿಯನ್ನು ಒಪ್ಪಿ, ಇನ್ನು ಮುಂದೆ ಎಚ್ಚರಿಕೆಯಿಂದ ಕೆಲಸವನ್ನು ನಿರ್ವಹಿಸುವಂತೆ ತಿಳಿಸಿ, ಅವರ ವಿರುದ್ಧ ಹೂಡಲಾಗಿದ್ದ ಆರೋಪದಿಂದ ಕೈ ಬಿಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1400 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ: ಕಂಇ 300 ಮುನೋಮು 2008, ಬೆಂಗಳೂರು, ದಿನಾಂಕ: 26ನೇ ಮೇ 2009**

ಹೊಸ ಕೈಗಾರಿಕಾ ನೀತಿ 2006 – 2011ರ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ: ಕಂಇ 198 ಮುನೋಮು 2007, ದಿನಾಂಕ: 26.05.2007 ರಲ್ಲಿ ವಲಯ 1 ರಲ್ಲಿ ಸ್ಥಾಪಿಸಲಾಗುವ ಕೈಗಾರಿಕಾ ಘಟಕಗಳಿಗೆ ಪೂರ್ಣ ಮುದ್ರಾಂಕ ಶುಲ್ಕ ವಿನಾಯಿತಿ, ವಲಯ 2 ರಲ್ಲಿ ಸ್ಥಾಪಿಸಲಾಗುವ ಕೈಗಾರಿಕಾ ಘಟಕಗಳಿಗೆ ಶೇ. 75 ರಷ್ಟು ಮುದ್ರಾಂಕ ಶುಲ್ಕ ವಿನಾಯಿತಿ ಹಾಗೂ ವಲಯ 1 ಮತ್ತು 2 ರಲ್ಲಿ ಸ್ಥಾಪಿಸಲಾಗುವ ಕೈಗಾರಿಕಾ ಘಟಕಗಳಿಗೆ ರೂ. 1,000/– ಗಳಿಗೆ ರೂ.1/– ರಂತೆ ನೋಂದಣಿ ಶುಲ್ಕ ಪಾವತಿಸುವಂತೆ ನೀಡಿರುವ ಸೌಲಭ್ಯವನ್ನು ಐಟಿ/ಬಿಟಿ ಘಟಕಗಳಿಗೂ ಸಹ ವಿಸ್ತರಿಸಿ ಕರ್ನಾಟಕ ಮುದ್ರಾಂಕ ಕಾಯ್ದೆ, 1957 ರ ಕಲಂ 9(1) ಮೇರೆಗೆ ಹಾಗೂ ನೋಂದಣಿ ಕಾಯ್ದೆ, 1908 ರ ಕಲಂ 78 ರ ಮೇರೆಗೆ ಅಧಿಸೂಚನೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್. 1401 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಎನ್. ಸುಬ್ಬಣ್ಣ, ಹಿಂದಿನ ತಹಶೀಲ್ದಾರ್, ಕುಂದಾಪುರ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಆರ್.ಡಿ. 47 ಎಡಿಇ 2005, ದಿನಾಂಕ 03.03.2009.
2. ಶ್ರೀ ಟಿ. ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಬೆಂಗಳೂರು ಇವರ ಮನವಿ ದಿನಾಂಕ: 06.04.2009

ಪ್ರಸ್ತಾವನೆ :

ಶ್ರೀ ಎನ್. ಸುಬ್ಬಣ್ಣ, ನಿವೃತ್ತ ತಹಶೀಲ್ದಾರ್ ಇವರು ಈ ಹಿಂದೆ ಕುಂದಾಪುರ ತಾಲ್ಲೂಕಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ನಾಟಕ ಭೂ ಸುಧಾರಣಾ ಕಾಯಿದೆ ಕಲಂ 61 ರಂತೆ ಭೂ ನ್ಯಾಯ ಮಂಡಳಿಯಿಂದ ಮಂಜೂರಾದ ಜಮೀನನ್ನು ಭೂ ನ್ಯಾಯ ಮಂಡಳಿಯಿಂದ ಅಂತಿಮ ತೀರ್ಪಿನ 15 ವರ್ಷದ ಒಳಗೆ ಪರಭಾರೆ ಮಾಡಲು ನಿರ್ಬಂಧವಿದ್ದರೂ ಸಹ ಕಂದಾವರ ಗ್ರಾಮದ ರಘುರಾಮ ಹೆಗಡೆಯವರ ಮಕ್ಕಳಾದ ಬಾಲಕೃಷ್ಣ ಹೆಗಡೆ ಮತ್ತು ಶ್ರೀಮತಿ ವೆಂಕಮ್ಮ ಹೆಗ್ಗಡತಿ ಎಂಬುವವರಿಗೆ ಕುಂದಾಪುರ ಭೂ ನ್ಯಾಯ ಮಂಡಳಿಯ ಟಿ.ಆರ್.ಐ.ಸಂ: 1682/77–78, 1683/77–78, ದಿನಾಂಕ:17.03.2003 ರಂತೆ ಕುಂದಾಪುರ ಕಸಬಾ ಗ್ರಾಮದ ಸ.ನಂ. 59/6ಎ(ಪಿ1) ರಲ್ಲಿ 0.41 ಎಕರೆ, ಸ.ನಂ. 59/5 ಎ (ಪಿ1) ರಲ್ಲಿ 0–17 ಎಕರೆ ಜಮೀನಿಗೆ ಸಂಬಂಧಿಸಿದಂತೆ, ಅಭಿಯೋಗದ ಹಕ್ಕು ಮಂಜೂರಾದ 15 ವರ್ಷದ ಪರಭಾರೆ ನಿರ್ಬಂಧವಿದ್ದ ಅವಧಿಯಲ್ಲಿ ಅಂದರೆ, ದಿನಾಂಕ: 21–04–2003 ರಂದು ಮಾರಾಟ ಮಾಡಲು ನಿರಾಕ್ಷೇಪಣಾ ಪತ್ರ ನೀಡಿರುವುದಾಗಿ ಹಾಗೂ ಇದೇ ವಿಷಯಕ್ಕೆ ಸಂಬಂಧಿಸಿದಂತೆ, ನಿರಾಕ್ಷೇಪಣಾ ದೃಢೀಕರಣ ಪತ್ರ ನೀಡಲು ಕಛೇರಿ ಟಿಪ್ಪಣಿ ಮಂಡಿಸಿ, ಶಿಫಾರಸ್ಸು ಮಾಡಿರುವ ಬಗ್ಗೆ ಹಾಗೂ ಕರ್ತವ್ಯ ನಿಷ್ಠೆ ಇಲ್ಲದೆ ದುರ್ನಡತೆಯನ್ನು ಎಸಗಿರುತ್ತಾರೆ. ಸರ್ಕಾರಿ ಅಧಿಕಾರಿ/ನೌಕರರಾಗಿ ಗಂಭೀರ ಸ್ವರೂಪದ ಕರ್ತವ್ಯ ಲೋಪ ಎಸಗಿದ ಆರೋಪದ ಮೇಲೆ ಶ್ರೀ ಎನ್. ಸುಬ್ಬಣ್ಣ (ನಿ) ತಹಶೀಲ್ದಾರ್ ಹಾಗೂ ಶ್ರೀ ಜಿ.ಟಿ. ಮಂಡಲೀಕರಾವ್, ನಿವೃತ್ತ ಶಿರಸ್ತೇದಾರ್, ಕುಂದಾಪುರ ತಾಲ್ಲೂಕು ಕಛೇರಿ ಇವರುಗಳ ವಿರುದ್ಧ ಆರೋಪಗಳ ಕುರಿತು ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸಲು ಮೇಲೆ ಓದಲಾದ ಕ್ರ.ಸಂ. (1) ದಿನಾಂಕ:03.03.2009ರ ಆದೇಶದಲ್ಲಿ ಶ್ರೀ ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 06–04–2009ರಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿ ತಾವು ಸದ್ಯ ಪೂರ್ಣಾವಧಿ ಕರ್ತವ್ಯದ ಮೇರೆಗೆ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಹೈಗ್ರೌಂಡ್ಸ್, ಬಸವ ಭವನ, ಬೆಂಗಳೂರು ಇಲ್ಲಿ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದು, ತಮಗೆ ವಹಿಸಿರುವ ವಿಚಾರಣಾಧಿಕಾರಿಯ ಕರ್ತವ್ಯವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಬದಲಿ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ಕೋರಿರುತ್ತಾರೆ. ಸದರಿ ವಿಚಾರಣಾಧಿಕಾರಿಗಳ ಮನವಿಯನ್ನು ಪರಿಗಣಿಸಿ ಶ್ರೀ ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರ ಬದಲಾಗಿ ಶ್ರೀ ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಧೀಶರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–580002 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್‌ಡಿ 47 ಎಡಿಇ 2005, ಬೆಂಗಳೂರು, ದಿನಾಂಕ: 4ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರ ಈ ಪ್ರಕರಣದಲ್ಲಿ ಈ ಹಿಂದೆ ದಿನಾಂಕ:03.03.2009ರ ಅದೇಶದಲ್ಲಿ ನೇಮಿಸಲಾಗಿದ್ದ ವಿಚಾರಣಾಧಿಕಾರಿಗಳಾದ ಶ್ರೀ ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಬದಲಿಗೆ ಶ್ರೀ ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿರಾಯಣ್ಣ ನಗರ, ಧಾರವಾಡ–580002 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಉಡುಪಿ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನೆಡೆಸತಕ್ಕದ್ದು ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಉಳಿದ ಅಂಶಗಳು ಸರ್ಕಾರದ ಆದೇಶ ಸಂ: ಆರ್‌ಡಿ 47 ಎಡಿಇ 2005, ದಿನಾಂಕ:03–03–2009 ರಲ್ಲಿರುವಂತೆ ಮುಂದುವರೆಯುತ್ತದೆ.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1402

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**FOREST, ENVIRONMENT AND ECOLOGY SECRETARIAT**

**NOTIFICATION**

**No .FEE 18 FEG 2004, Bangalore, Dated: 2nd June 2009**

In modification of Government Notification of even No. Dated 02-09-2005, the following officers are assigned eligibility dates of promotion in the cadre of Deputy Conservator of Forests as mentioned against their names.

| Sl. No. | Name of the Officer | Date of Eligibility |
|---|---|---|
| 1. | Sri Syed Hussain | 01-11-1956 |
| 2. | Sri D.G. Wesley | 01-11-1956 |
| 3. | Sri A.Krishnaswamy | 01-11-1956 |
| 4. | Sri T.G. Chandrashekaraih | 14-02-1957 |
| 5. | Sri S.C. Thippeswamy | 18-09-1958 |
| 6. | Sri M.D. Mahadev | 18-09-1958 |

The Accountant General, Bangalore shall regulate the pay and allowances of these officers as per Section 4 of the KCS (RPP&P) Act; 1973.

The Notification of even No. Dated 18-10-2007 is hereby rescinded with immediate effect.

By Order and in the name of the Governor of Karnataka

**VADAGAVE BASAVARAJ**

Under Secretary to Government,

Forest, Environment and Ecology Department (Services)

P.R. 1409

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** 2008–09ನೇ ಸಾಲಿನಲ್ಲಿ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರದಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳಿಗೆ 'ಕರ್ನಾಟಕ ರಾಜ್ಯ ಪರಿಸರ'' ಪ್ರಶಸ್ತಿ ಪ್ರಧಾನ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಅಪಜೀ 16 ಇಎನ್‌ಜಿ 2007 ದಿನಾಂಕ: 16–09–2008
2. ಪತ್ರಿಕಾ ಪ್ರಕಟಣೆ ದಿನಾಂಕ: 23–09–2008
3. ಸರ್ಕಾರದ ಆದೇಶ ಸಂಖ್ಯೆ : ಅಪಜೀ 16 ಇಎನ್‌ಜಿ 2007 (ಭಾಗ) ದಿನಾಂಕ: 19–11–2008

**ಪ್ರಸ್ತಾವನೆ:**

ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವ ಸಲುವಾಗಿ 2008–09ನೇ ಸಾಲಿನ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ನೀಡಲು ಸರ್ಕಾರವು ಉದ್ದೇಶಿಸಿರುತ್ತದೆ. ಈ ಪ್ರಶಸ್ತಿ ತಲಾ ರೂ.1,00,000/– (ರೂ. ಒಂದು ಲಕ್ಷಗಳು ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ಆಯ್ಕೆಯಾದ ವ್ಯಕ್ತಿ, ಮತ್ತು ಸಂಸ್ಥೆಗಳಿಗೆ ಪರಿಸರ ಸಂರಕ್ಷಣೆ ಮತ್ತು ಪರಿಸರ ವ್ಯವಸ್ಥಾಪನೆ ಕ್ಷೇತ್ರದಲ್ಲಿ ಆರಂಭ ಶೀಲತೆ / ಕೊಡುಗೆಗೆ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ರಾಜ್ಯದಲ್ಲಿ ಪರಿಸರ ಸಂರಕ್ಷಣೆ ಮತ್ತು ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸಿರುವ ಈ ಕೆಳಕಂಡ ವ್ಯಕ್ತಿ ಹಾಗೂ ಸಂಸ್ಥೆಗಳನ್ನು ಸರ್ಕಾರವು ಆಯ್ಕೆ ಮಾಡಿದ್ದು, ಇವರಿಗೆ ಪರಿಸರ ಪ್ರಶಸ್ತಿಗಳನ್ನು ನೀಡಲು ನಿರ್ಧರಿಸಲಾಗಿದೆ.

| | ವಲಯ | ಆಯ್ಕೆಯಾದ ವ್ಯಕ್ತಿ | ಆಯ್ಕೆಯಾದ ಸಂಸ್ಥೆ |
|---|---|---|---|
| 1 | ಉತ್ತರ ವಲಯ | ಪ್ರೊ: ಎಸ್. ಮಂಜಪ್ಪ, ಪ್ರಾಧ್ಯಾಪಕರು, ರಸಾಯನ ಶಾಸ್ತ್ರ ಮತ್ತು ಪರಿಸರ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗ, ಬಾಪೂಜಿ ಇಂಜಿನಿಯರಿಂಗ್ ಮತ್ತು ತಾಂತ್ರಿಕ ವಿದ್ಯಾಲಯ, ದಾವಣಗೆರೆ. | ಪೂಜ್ಯ ಶ್ರೀ ಮಾನಿಪ, ಶಿವಕುಮಾರ ಸ್ವಾಮಿಗಳು, ಕಪೋತಗಿರಿ, ಶ್ರೀ ನಂದಿವೀರಿ ಮಹಾ ಸಂಸ್ಥಾನ ಮಠ, ಸಿದ್ಧರಾಮೇಶ್ವರ ನಗರ, ಗದಗ. |
| 2 | ದಕ್ಷಿಣ ವಲಯ | ಸುಮಂಗಲ ಎಸ್. ಮುಮ್ಮಿಗಟ್ಟಿ ಟ್ರಾನ್ಸ್‌ಮಿಷನ್ ಎಕ್ಸಿಕ್ಯೂಟಿವ್ (ಸೈನ್ಸ್ ರಿಪೋರ್ಟಿಂಗ್) ಆಲ್ ಇಂಡಿಯಾ ರೇಡಿಯೋ, ರಾಜಭವನ ರೋಡ್, ಬೆಂಗಳೂರು. | ಟಿ.ಕೆ. ಪಟೇಲ್, ಬೆನಕಟ್ಟಿ ಚಾರಿಟಬಲ್ ಟ್ರಸ್ಟ್, ಬಸಂತವನ, ಶ್ರೀ ರುಕ್ಮಾಂಗದ ಮಹಾರಾಜ್ ಮಂದಿರದ ಹತ್ತಿರ, ಉಕ್ಕಲಿ ರಸ್ತೆ, ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 13, ಬಿಜಾಪುರ (ನೋಂದಣಿ ಕಛೇರಿ: ಬೆಂಗಳೂರು) |

| | ವಲಯ | ಆಯ್ಕೆಯಾದ ವ್ಯಕ್ತಿ | ಆಯ್ಕೆಯಾದ ಸಂಸ್ಥೆ |
|---|---|---|---|
| 3 | ಮಲೆನಾಡು ಮತ್ತು ಕರಾವಳಿ ವಲಯ | ಶ್ರೀ ಸತೀಶ್ ನಂ. 14, ಕೂರ್ಗ ಪಬ್ಲಿಕ್ ಸ್ಕೂಲ್, ಗೋಣಿಕೊಪ್ಪ, ಕೊಡಗು ಜಿಲ್ಲೆ. | ಗ್ರಾಮ ಭಾರತಿ ಟ್ರಸ್ಟ್, ಕರ್ನಾಗಿರಿ ಅಂಚೆ, ಹಾನಿಯಾ ಹೊಸನಗರ, ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |

ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಅಪಜೀ 7 ಇಎನ್‌ಜಿ 2008, ಬೆಂಗಳೂರು, ದಿನಾಂಕ: 6ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಠ ಸೇವೆ ಸಲ್ಲಿಸಿರುವ ಕೆಳಕಂಡ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಸರ್ಕಾರವು 2008–09ನೇ ಸಾಲಿನ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಆಯ್ಕೆ ಮಾಡಿದೆಯೆಂದು ಘೋಷಿಸಲು ಪ್ರಸನ್ನಚಿತ್ತವಾಗಿದೆ. ಈ ಪ್ರಶಸ್ತಿಯು ತಲಾ ರೂ. 1,00,000/– (ರೂ. ಒಂದು ಲಕ್ಷ ಮಾತ್ರ) ನಗದು ಮತ್ತು ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ.

| | ವಲಯ | ಆಯ್ಕೆಯಾದ ವ್ಯಕ್ತಿ | ಆಯ್ಕೆಯಾದ ಸಂಸ್ಥೆ |
|---|---|---|---|
| 1 | ಉತ್ತರ ವಲಯ | ಪ್ರೊ: ಎಸ್. ಮಂಜಪ್ಪ, ಪ್ರಾಧ್ಯಾಪಕರು, ರಸಾಯನ ಶಾಸ್ತ್ರ ಮತ್ತು ಪರಿಸರ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗ, ಬಾಪೂಜಿ ಇಂಜಿನಿಯರಿಂಗ್ ಮತ್ತು ತಾಂತ್ರಿಕ ವಿದ್ಯಾಲಯ, ದಾವಣಗೆರೆ. | ಪೂಜ್ಯ ಶ್ರೀ ಮಾನಿಪ, ಶಿವಕುಮಾರ ಸ್ವಾಮಿಗಳು, ಕಪೋತಗಿರಿ, ಶ್ರೀ ನಂದಿವೀರಿ ಮಹಾ ಸಂಸ್ಥಾನ ಮಠ, ಸಿದ್ಧರಾಮೇಶ್ವರ ನಗರ, ಗದಗ. |
| 2 | ದಕ್ಷಿಣ ವಲಯ | ಸುಮಂಗಲ ಎಸ್. ಮುಮ್ಮಿಗಟ್ಟಿ ಟ್ರಾನ್ಸ್‌ಮಿಷನ್ ಎಕ್ಸಿಕ್ಯೂಟಿವ್ (ಸೈನ್ಸ್ ರಿಪೋರ್ಟಿಂಗ್) ಆಲ್ ಇಂಡಿಯಾ ರೇಡಿಯೋ, ರಾಜಭವನ ರೋಡ್, ಬೆಂಗಳೂರು. | ಟಿ.ಕೆ. ಪಟೇಲ್, ಬೆನಕಟ್ಟಿ ಚಾರಿಟಬಲ್ ಟ್ರಸ್ಟ್, ಬಸಂತವನ, ಶ್ರೀ ರುಕ್ಮಾಂಗದ ಮಹಾರಾಜ್ ಮಂದಿರದ ಹತ್ತಿರ, ಉಕ್ಕಲಿ ರಸ್ತೆ, ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 13, ಬಿಜಾಪುರ (ನೋಂದಣಿ ಕಛೇರಿ: ಬೆಂಗಳೂರು) |
| 3 | ಮಲೆನಾಡು ಮತ್ತು ಕರಾವಳಿ ವಲಯ | ಶ್ರೀ ಸತೀಶ್ ನಂ. 14, ಕೂರ್ಗ ಪಬ್ಲಿಕ್ ಸ್ಕೂಲ್, ಗೋಣಿಕೊಪ್ಪ, ಕೊಡಗು ಜಿಲ್ಲೆ. | ಗ್ರಾಮ ಭಾರತಿ ಟ್ರಸ್ಟ್, ಕರ್ನಾಗಿರಿ ಅಂಚೆ, ಹಾನಿಯಾ ಹೊಸನಗರ, ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1410

**ಎನ್.ಆರ್. ಜಗನ್ನಾತ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸೇಸ್ಥಅ 2009 ಬೆಂಗಳೂರು, ದಿನಾಂಕ: 11ನೇ ಜೂನ್ 2009**

**ವಿಷಯ:** ಹತ್ತು ವರ್ಷಕ್ಕಿಂತಲೂ ಹೆಚ್ಚಿನ ಅವಧಿಯ ಸೇವೆ ಸಲ್ಲಿಸಿರುವ ದಿನಗೂಲಿ ನೌಕರರಿಗೆ ತಿಂಗಳಿಗೆ ರೂ.1,000–00 ಹೆಚ್ಚುವರಿ ಹಣ ನೀಡುವ ಬಗ್ಗೆ.

**ಪ್ರಸ್ತಾವನೆ :**

ದಿನಾಂಕ: 20.02.2009 ರಂದು ವಿಧಾನ ಮಂಡಲದಲ್ಲಿ ಮಂಡಿಸಲಾದ 2009–10ರ ಆಯವ್ಯಯ ಭಾಷಣದ ಪ್ಯಾರಾ 252ರಲ್ಲಿ ಹೀಗೆ ಹೇಳಲಾಗಿದೆ.

"10 ವರ್ಷಕ್ಕಿಂತಲೂ ಹೆಚ್ಚು ಸೇವೆ ಸಲ್ಲಿಸಿರುವ ದಿನಗೂಲಿ ನೌಕರರಿಗೆ ತಿಂಗಳಿಗೆ ರೂ.1,000/– ರವರೆಗೆ ಹೆಚ್ಚಿಸಲಾಗುವುದು"

ಆಯವ್ಯಯ ಭಾಷಣದ ಈ ಘೋಷಣೆಯ ಹಿನ್ನೆಲೆಯಲ್ಲಿ ಆದೇಶ ಹೊರಡಿಸುವುದನ್ನು ಪರಿಶೀಲಿಸಲಾಗಿದೆ.

**ಆದೇಶ**

ದಿನಾಂಕ:01.07.1984ರ ನಂತರ ಸರ್ಕಾರದ ವಿವಿಧ ಇಲಾಖೆಗಳಲ್ಲಿ ದಿನಗೂಲಿ ನೌಕರರಾಗಿ ನೇಮಕಗೊಂಡು ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಈಗ ನೀಡುತ್ತಿರುವ ಒಟ್ಟು ದಿನಗೂಲಿಯ ಜೊತೆಗೆ ಮಾಸಿಕ ರೂ.1,000/– ಗಳನ್ನು (ಒಂದು ಸಾವಿರ ರೂಪಾಯಿಗಳು ಮಾತ್ರ) ದಿನಾಂಕ: 01.04.2009 ರಿಂದ ಜಾರಿಗೆ ಬರುವಂತೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಮಂಜೂರಾತಿ ನೀಡಿದೆ:

1) ಸಂಬಂಧಿಸಿದ ದಿನಗೂಲಿ ನೌಕರರು ದಿನಾಂಕ: 20.02.2009 ರಂದು ದಿನಗೂಲಿ ನೌಕರರಾಗಿ ಹತ್ತು ವರ್ಷಕ್ಕಿಂತಲೂ ಹೆಚ್ಚು ಸೇವೆ ಸಲ್ಲಿಸಿರಬೇಕು;
2) ದಿನಾಂಕ: 01.04.2009 ರಂದು ಅವರು ದಿನಗೂಲಿ ಸೇವೆಯಲ್ಲಿರಬೇಕು;

3) ಪ್ರತಿ ತಿಂಗಳಿನಲ್ಲಿ, ಇಡೀ ತಿಂಗಳು ಕಾರ್ಯ ನಿರ್ವಹಿಸಿದ ನೌಕರರಿಗೆ ರೂ.1,000/– ಗಳ ಹೆಚ್ಚಳವನ್ನು ನೀಡತಕ್ಕದ್ದು, ಒಂದು ತಿಂಗಳಿನಲ್ಲಿ ಕೆಲವು ದಿನಗಳು ಮಾತ್ರ ಕಾರ್ಯನಿರ್ವಹಿಸಿದ ನೌಕರರಿಗೆ ಇದನ್ನು ಪ್ರಮಾಣಾನುಸಾರವಾಗಿ (proportionate ) ಕಡಿಮೆ ಮಾಡತಕ್ಕದ್ದು.

ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 596 ವೆಚ್ಚ–12/09 ದಿನಾಂಕ: 26.05.2009 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**

ಪಿ.ಆರ್. 1421 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

**PERSONNEL AND ADMINISTRATIVE REFORMS SECRETARIAT**

**CORRIGENDUM**

**No. DPAR 2 SLU 2009, Bangalore, Dated: 18th June 2009**

In Notification No. DPAR 2 SLU 2009 dated 15-06-2009 the figure “Rs.2,500” appearing in Sub-rule (ii) of rule 2 shall be read as “Rs.10,000”

By Order and in the name of the Governor of Karnataka,

**P. MARKANDEYA**

P.R. 1422 Under Secretary to Government,

Department of Personnel and Administrative Reforms (Service Rules-2)

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ :ಒಇ 78 ಪೊಸಿಲಿ 2009, ಬೆಂಗಳೂರು, ದಿನಾಂಕ: 27ನೇ ಜೂನ್ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 5 ಪೊಸಿಲಿ 2005, ದಿ: 26–07–2007 ರಲ್ಲಿ ಸಹಾಯಕ ಆಡಳಿತಾಧಿಕಾರಿ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿ ನೀಡಿ ನೀಡಿದ ಅಧಿಸೂಚನೆಯ ಆದೇಶದ ಕ್ರಮ ಸಂಖ್ಯೆ : 9 ರಲ್ಲಿ “ಸೈಯದ್ ಖಾಸಿಂ” ಎಂಬುದರ ಬದಲು “ಎಂ. ಸೈಯದ್ ಖಾಸಿಂ” ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1423 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ತಿದ್ದುಪಡಿ**

**ಸಂಖ್ಯೆ :ಒಇ 307 ಪಿಪಿಇ 2009, ಬೆಂಗಳೂರು, ದಿನಾಂಕ: 29ನೇ ಜೂನ್ 2009**

ಸರ್ಕಾರದ ಆದೇಶ ಸಂಖ್ಯೆ: ಒಇ 21 ಪಿಪಿಇ 2009, ದಿನಾಂಕ: 02–04–2009ರ ಆದೇಶ ಭಾಗದ ಪುಟ ಸಂಖ್ಯೆ 4ರ ಕ್ರಮ ಸಂಖ್ಯೆ: 15ರ ಅಂಕಣ 5 ರಲ್ಲಿ “08–02–2008” ಎಂಬುದರ ಬದಲಾಗಿ “08–03–2008” ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ:02–04–2009ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1443 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಶ್ರೀ ಕೆ.ಆರ್.ಬೇಗ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರ ರಜಾ ಅವಧಿ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರಗಳ ಸಂಖ್ಯೆ : ಎ2–ರಜೆ–ಸಿಆರ್–53/2001–02 ದಿನಾಂಕ 23–07–2002 ಮತ್ತು 17–01–2009.

**ಸರ್ಕಾರಿ ಆದೇಶ ಸಂಖ್ಯೆ : ಅಪಜೀ 186 ಅಪಸೇ 2002, ಬೆಂಗಳೂರು, ದಿನಾಂಕ: 6ನೇ ಜೂನ್ 2009**

ಶ್ರೀ ಕೆ.ಆರ್.ಬೇಗ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರ ದಿನಾಂಕ 01–04–1997 ರಿಂದ 26–06–1998 ರವರೆಗಿನ ಸಕ್ರಮಗೊಳ್ಳದೆ ಇರುವ ಅವಧಿಯನ್ನು ವೈದ್ಯಕೀಯ ಕಾರಣಗಳ ಮೇಲೆ ಈ ಕೆಳಕಂಡಂತೆ ಸಂಯುಕ್ತ ರಜೆಯೆಂದು ಪರಿಗಣಿಸಿ ಸಕ್ರಮಗೊಳಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| | | |
|---|---|---|
| 1) | ದಿನಾಂಕ 01–04–1997 ರಿಂದ 29–07–1997ರವರೆಗೆ | 120 ದಿವಸಗಳ ಗಳಿಕೆ ರಜೆಯೆಂದು |
| 2) | ದಿನಾಂಕ 30–07–1997 ರಿಂದ 24–09–1997ರ ರವರೆಗೆ | 56 ದಿನ ಅರ್ಧ ವೇತನ ರಜೆಯೆಂದು |
| 3) | ದಿನಾಂಕ 25–09–1997 ರಿಂದ 21–03–1998 ರವರೆಗೆ | 180 ದಿನ ಲೀವ್ ನಾಟ್ ಡ್ಯೂ |
| 4) | ದಿನಾಂಕ 22–03–1998 ರಿಂದ 26–06–1998 ರವರೆಗೆ | 97 ದಿನ ಅಸಾಧಾರಣ ರಜೆಯೆಂದು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಡಗಾವೆ ಬಸವರಾಜ್**

ಪಿ.ಆರ್. 1448 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

## ವಸತಿ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆ, ರಬಕವಿ – ಬನಹಟ್ಟಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ.ವಇ.42/ಹೆಚ್‌ಎಎಂ/1999, ದಿನಾಂಕ : 10–05–2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಬಾಗಲಕೋಟೆ ಜಿಲ್ಲೆ, ರಬಕವಿ – ಬನಹಟ್ಟಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವ ಇ 57 ಹೆಚ್‌ಎಎಸ್ 2008, ಬೆಂಗಳೂರು, ದಿನಾಂಕ: 3ನೇ ಜೂನ್ 2009**

ಬಾಗಲಕೋಟೆ ಜಿಲ್ಲೆ, ರಬಕವಿ–ಬನಹಟ್ಟಿ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ:

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಾಜು ಮಲ್ಲಪ್ಪ ನೀಲಪ್ಪಗೋಳ | ಸಾಮಾನ್ಯ |
| 2. | ಶ್ರೀ ಸುರೇಶ್ ನಿಂಗಪ್ಪ ಆಲಗೂರ | ಅಲ್ಪಸಂಖ್ಯಾತರು |
| 3. | ಶ್ರೀ ಈರಪ್ಪ ಚನ್ನಬಸಪ್ಪ ಕುಳ್ಳಿ | ಹಿಂದುಳಿದ ವರ್ಗ |
| 4. | ಶ್ರೀಮತಿ ಸುಶೀಲ ಅಪ್ಪಣ್ಣ ಮುಳ್ಳೆ | ಪರಿಶಿಷ್ಟ ಜಾತಿ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1458 **ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ:** ಇಂದಿರಾ ಆವಾಸ್ ಯೋಜನೆಯಡಿ ವಸತಿ ಸೌಕರ್ಯ ಕಲ್ಪಿಸಲು ಸರ್ವ ಕುಟುಂಬ ಸಮೀಕ್ಷೆ ಅಂಕಗಳನ್ನು ಸಡಿಲಿಸುವ ಬಗ್ಗೆ.

**ಓದಲಾಗಿದೆ:**
1. ಸುತ್ತೋಲೆ ಸಂಖ್ಯೆ: ಗ್ರಾಅಪ/59/ಇಸ್ವೈ 05, ದಿನಾಂಕ: 30–12–2006
2. ಸರ್ಕಾರದ ಆದೇಶ ಸಂಖ್ಯೆ: ವಇ 01 ಹೆಚ್‌ಎವೈ 09, ದಿನಾಂಕ: 29–01–2009
3. ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಪತ್ರ ಸಂಖ್ಯೆ : ಪಿಐ/ಆರ್‌ಜಿಆರ್‌ಹೆಚ್‌ಸಿಎಲ್/02 ಐಎವೈ/05/2009, ದಿನಾಂಕ : 20–04–2009.

**ಪ್ರಸ್ತಾವನೆ:**

ಇಂದಿರಾ ಆವಾಸ್ ಯೋಜನೆಯಡಿ ವಸತಿ ಸೌಕರ್ಯ ಕಲ್ಪಿಸುವುದಕ್ಕೆ ಕಡ್ಡಾಯವಾಗಿ ಸರ್ವ ಕುಟುಂಬ ಸಮೀಕ್ಷೆಯಡಿ 0–20 ಅಥವಾ 0–20 ಕ್ಕಿಂತ ಕಡಿಮೆ ಅಂಕಹೊಂದಿರುವ ಫಲಾನುಭವಿಗಳನ್ನು ಆಯ್ಕೆ ಮಾಡಬೇಕಾಗಿರುತ್ತದೆ. ಆದರೆ ಈಗ ರಾಜ್ಯದ ಜಿಲ್ಲೆಗಳಲ್ಲಿ ಸರ್ವ ಕುಟುಂಬ ಸಮೀಕ್ಷೆಯಡಿ 0–20 ಅಥವಾ 0–20ಕ್ಕಿಂತ ಅಂಕ ಹೊಂದಿರುವ ಫಲಾನುಭವಿಗಳು ಲಭ್ಯವಾಗುತ್ತಿಲ್ಲವಾದ್ದರಿಂದ ಇಂದಿರಾ ಆವಾಸ್ ಯೋಜನೆಯ ಪ್ರಗತಿ ತೀವ್ರವಾಗಿ ಕುಂಠಿತಗೊಳ್ಳುತ್ತಿವೆ. ಕೇಂದ್ರ ಸರ್ಕಾರದ ಈ ಯೋಜನೆಯ ಲಾಭವು ರಾಜ್ಯದ ಎಲ್ಲಾ ಫಲಾನುಭವಿಗಳಿಗೆ ದೊರಕಲು ಅನುಕೂಲವಾಗುವಂತೆ ಸರ್ವೆ ಕುಟುಂಬ ಸಮೀಕ್ಷೆ ಅಂಕಗಳನ್ನು 0–20 ರಿಂದ 0–30ಕ್ಕೆ ಸಡಿಲಿಸುವಂತೆ ಪ್ರಸ್ತಾಪಿಸಲಾಗಿದೆ. ಅಂತೆಯೇ ಈ ಕೆಳಕಾಣಿಸಿದ ಆದೇಶ.

**ಸರ್ಕಾರದ ಆದೇಶ ಸಂ. ವಇ 01 ಹೆಚ್‌ಎವೈ 2009, ಬೆಂಗಳೂರು ದಿನಾಂಕ: 1ನೇ ಜೂನ್ 2009**

ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ "ಇಂದಿರಾ ಆವಾಸ್ ಯೋಜನೆ" ಯಡಿಯಲ್ಲಿ ವಸತಿ ಸೌಕರ್ಯ ಕಲ್ಪಿಸುವುದಕ್ಕೆ ಸರ್ವ ಕುಟುಂಬ ಸಮೀಕ್ಷೆ ಅಂಕಗಳನ್ನು 0–20 ರಿಂದ 0–30ಕ್ಕೆ ಸಡಿಲಿಸಲು ಈ ಕೆಳಕಾಣಿಸಿದ ನಿಬಂಧನೆಗಳೊಂದಿಗೆ ಅನುಮತಿ ನೀಡಿದೆ.

ಅ) 0–20 ಅಂಕದೊಳಗೆ ಬರುವ ಎಲ್ಲಾ ಕುಟುಂಬಗಳಿಗೆ ವಸತಿ ಸೌಕರ್ಯ ಕಲ್ಪಿಸಿ, ಅಂತಹ ಕುಟುಂಬಗಳು ಸಿಗದಿದ್ದಲ್ಲಿ ಅದನ್ನು ಗ್ರಾಮ ಸಭೆಯು ದೃಢೀಕರಿಸಿ ಮುಂದಿನ ಶ್ರೇಣಿಯಲ್ಲಿ ಪರಿಗಣಿಸತಕ್ಕದ್ದು.

ಆ) ಪ್ರಥಮ ಆಧ್ಯತೆ 20–25 ಅಂಕಗಳು ಪಡೆದ ಕುಟುಂಬಗಳಿಗೆ ನೀಡಿ ನಂತರ 25–30 ಅಂಕ ಪಡೆದ ಕುಟುಂಬಗಳಿಗೆ ವಸತಿ ಸೌಕರ್ಯ ಕಲ್ಪಿಸತಕ್ಕದ್ದು.

2. ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ತನ್ನ ಟಿಪ್ಪಣಿ ಸಂ.ಆರ್‌ಡಿಪಿ/ಎಸ್‌ಇಸಿವೈ, ದಿನಾಂಕ 15–05–2009ರಲ್ಲಿ ಸಹಮತಿಸಿದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1459 **ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ. ಸಿದ್ದರಾಜು, ಪಿಎಸ್‌ಐ,ಆಜಾದ್‌ನಗರ ಪೊ.ಠಾಣೆ, ದಾವಣಗೆರೆ ಜಿಲ್ಲೆ (ಹಾಲಿ ತುಮಕೂರು ಗ್ರಾಮಾಂತರ ಪೊ.ಠಾಣೆ, ತುಮಕೂರು ಜಿಲ್ಲೆ) ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ:** 1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: 103/ಸಿಬ್ಬಂದಿ–1/2008–09 ದಿನಾಂಕ:09–02–2009

**ಪ್ರಸ್ತಾವನೆ :**

ಶ್ರೀ ಜಿ. ಸಿದ್ದರಾಜು, ಪಿ.ಎಸ್.ಐ. ರವರು ದಿನಾಂಕ 15–12–2003 ರಂದು ಪಿ.ಎಸ್.ಐ. ಆಗಿ ನೇಮಕಗೊಂಡಿದ್ದು, ಸದರಿ ಹುದ್ದೆಗೆ ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗುವ ನಿಬಂಧನೆಯ ಮೇಲೆ ನೇಮಕಗೊಂಡಿರುತ್ತಾರೆ. ಕಡ್ಡಾಯವಿರುವ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಲ್ಲವಾದ್ದರಿಂದ ಇವರ ಖಾಯಂ ಪೂರ್ವ ಅವಧಿಯನ್ನು ಕೆ.ಸಿ.ಎಸ್ (ಪ್ರೊಬೇಷನರಿ) ನಿಯಮಗಳು, 1977 ರ ನಿಯಮ 4 (1) (ii) ರನ್ವಯ 15–06–2006 ರಿಂದ 14–09–2007 ರವರೆಗೆ ವಿಸ್ತರಿಸಿರುತ್ತಾರೆ.

ಸದರಿ ಪಿ.ಎಸ್.ಐ. ರವರು ದಿನಾಂಕ 11–06–2008 ರಂದು ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ ಹಾಗೂ ಇವರ ವಿರುದ್ಧ ಚಾಲ್ತಿ ಶಿಕ್ಷೆ/ಇಲಾಖಾ ವಿಚಾರಣೆ ಹಾಗೂ ಕ್ರಿಮಿನಲ್ ಮೊಕದ್ದಮೆಗಳು ಬಾಕಿ ಇರುವುದಿಲ್ಲವಾದ್ದರಿಂದ ಖಾಯಂ ಪೂರ್ವ ಅವಧಿಯನ್ನು ದಿನಾಂಕ 15–09–2007 ರಿಂದ 10–06–2008 ರವರೆಗೆ ವಿಸ್ತರಿಸುವಂತೆ ಡಿ.ಜಿ. ಮತ್ತು ಐ.ಜಿ.ಪಿ. ರವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 58 ಪೊಸಿಇ 2009, ಬೆಂಗಳೂರು, ದಿನಾಂಕ: 1ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿಗಳು, 1977ರ ನಿಯಮ 4 (1)(i) ರನ್ವಯ ಶ್ರೀ ಜಿ.ಸಿದ್ದರಾಜು, ಪಿ.ಎಸ್.ಐ. ಆಜಾದ್‌ನಗರ ಪೊಲೀಸ್ ಠಾಣೆ, ದಾವಣಗೆರೆ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 15–09–2007 ರಿಂದ 10–06–2008 ರವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ. (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1460 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ರಾಮನಗರಂ ಜಿಲ್ಲೆಯ 1 ಜೀತಮುಕ್ತನಿಗೆ, ಮೈಸೂರು ಜಿಲ್ಲೆಯ 10 ಜೀತವಿಮುಕ್ತರಿಗೆ ಹಾಗೂ ದಾವಣಗೆರೆ ಜಿಲ್ಲೆಯ 12 ಜೀತವಿಮುಕ್ತರಿಗೆ 2009–10ನೇ ಸಾಲಿನಲ್ಲಿ ಸಹಾಯಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂ ಗ್ರಾಅಪ.15 ಆರ್.ಬಿ.ಎಲ್. 2004 ದಿನಾಂಕ: 21.01.2006
2. ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಯ ಪತ್ರ ಸಂ.ಆರ್‌ಬಿಎಲ್/ಸಿಆರ್/11/07–08 ದಿನಾಂಕ:22.05.2007
3. ಮೈಸೂರು ಜಿಲ್ಲಾಧಿಕಾರಿಯ ಪತ್ರ ಸಂ. ಎಂಎಜಿ(1)ಎಂಎಲ್‌ಓ:226/2007–08 ದಿನಾಂಕ:10.01.2008

4. ದಾವಣಗೆರೆ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಅ, ಸ. ಪ. ಸಂ. ಜಿಪಂದಾ:ಅಭಿ(3):ಇವಿ:ಸಿಆರ್:73:08–09 ದಿನಾಂಕ 26.11.2008
5. ಸರ್ಕಾರದ ಆದೇಶ ಸಂ. ಗ್ರಾಅಪ.3.ಆರ್.ಬಿ.ಎಲ್:2007 ದಿನಾಂಕ : 17.03.2008
6. ಸರ್ಕಾರದ ಆದೇಶ ಸಂ.ಗ್ರಾಅಪ.2/3,ಆರ್.ಬಿ.ಎಲ್. 2008 ದಿನಾಂಕ:3.7.2008 ಹಾಗೂ 9.2.2009

**ಪ್ರಸ್ತಾವನೆ:**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ: 21–01–2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ 21–01–2006 ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300–00 ರಂತೆ ಸಹಾಯಧಾನವನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

2. ಮೇಲೆ ಓದಲಾದ ಕ್ರ.ಸಂ. (5) ಹಾಗೂ (6) ರ ಆದೇಶಗಳಲ್ಲಿ ಈ ಯೋಜನೆಯಡಿ ಸಹಾಯಧನ ಒದಗಿಸುವ ಸಲುವಾಗಿ, ರಾಮನಗರಂ ಜಿಲ್ಲೆಯ ಮಾಗಡಿ ತಾಲ್ಲೂಕಿನ ಒಬ್ಬ ಜೀತ ವಿಮುಕ್ತನಿಗೆ 2007–08 ಹಾಗೂ 2008–09ರ ಸಾಲುಗಳ ಒಟ್ಟು 23 ತಿಂಗಳ ಅವಧಿಗೆ (2007 ಮೇ ಯಿಂದ 2009 ಮಾರ್ಚ್‌ವರೆಗೆ) ಒಟ್ಟು ರೂ.6900/– ಗಳ, ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ 10 ಜೀತವಿಮುಕ್ತರಿಗೆ 2007–08 ಹಾಗೂ 2008–09ರ ಸಾಲುಗಳ ಒಟ್ಟು 17 ತಿಂಗಳ ಅವಧಿಗೆ (2007 ನವೆಂಬರ್ ಇಂದ 2009 ಮಾರ್ಚ್‌ವರೆಗೆ) ಒಟ್ಟು ರೂ.51,000/– ಗಳ ಹಾಗೂ ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲ್ಲೂಕಿನ 12 ಜೀತವಿಮುಕ್ತರಿಗೆ 2008–09ನೇ ಸಾಲಿನ ಒಟ್ಟು 10 ತಿಂಗಳ ಅವಧಿಗೆ (2008 ಜೂನ್‌ನಿಂದ 2009 ಮಾರ್ಚ್‌ವರೆಗೆ) ಒಟ್ಟು ರೂ. 36,000/– ಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಹಾಲಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಜೀತವಿಮುಕ್ತರ ಪುನರ್ವಸತಿ ಯೋಜನೆಗಳಿಗೆ ಒದಗಿಸಿರುವ ಒಟ್ಟಾರೆ ಅನುದಾನ ರೂ. 91.67 ಲಕ್ಷ ಪೈಕಿ, 2009–10ನೇ ಸಾಲಿನಲ್ಲಿ ರಾಮನಗರಂ ಜಿಲ್ಲೆಯ ಒಬ್ಬ ಜೀತವಿಮುಕ್ತನಿಗೆ ಬಾಕಿ ಒಂದು ತಿಂಗಳ ಅವಧಿಗೆ (2009 ಏಪ್ರಿಲ್), ಮೈಸೂರು ಜಿಲ್ಲೆಯ 10 ಜೀತವಿಮುಕ್ತರಿಗೆ 7 ತಿಂಗಳ ಅವಧಿಗೆ (2009 ಏಪ್ರಿಲ್‌ನಿಂದ 2009 ಅಕ್ಟೋಬರ್‌ವರೆಗೆ) ಹಾಗೂ ದಾವಣಗೆರೆ ಜಿಲ್ಲೆಯ 12 ಜೀತವಿಮುಕ್ತರಿಗೆ 12 ತಿಂಗಳ ಅವಧಿಗೆ (2009 ಏಪ್ರಿಲ್ ನಿಂದ 2010 ಮಾರ್ಚ್‌ವರೆಗೆ) ಮಾಹೆಯಾನ ರೂ. 300/– ರಂತೆ ಸಹಾಯಧನಕ್ಕಾಗಿ ಕ್ರಮವಾಗಿ ತಗಲುವ ಅನುದಾನ ರೂ.300/– ಗಳನ್ನು ರಾಮನಗರಂ ಜಿಲ್ಲಾ ಪಂಚಾಯತಿಗೆ, ರೂ. 21,000/– ಗಳನ್ನು, ಮೈಸೂರು ಜಿಲ್ಲಾ ಪಂಚಾಯತಿಗೆ ಹಾಗೂ ರೂ. 43200/– ಗಳನ್ನು ದಾವಣಗೆರೆ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.1.ಜೀವಿಪು.2009 ಬೆಂಗಳೂರು, ದಿನಾಂಕ: 15ನೇ ಜೂನ್ 2009**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅಡಿ ರಾಮನಗರಂ, ಮೈಸೂರು ಹಾಗೂ ದಾವಣಗೆರೆ ಜಿಲ್ಲೆಗಳ ಒಟ್ಟು 23 ಜೀತವಿಮುಕ್ತರಿಗೆ 2009–10ನೇ ಸಾಲಿನಲ್ಲಿ ಮಾಹೆಯಾನ ರೂ. 300–00 ರಂತೆ ಸಹಾಯಧನ ಪಾವತಿಸಲು ರಾಮನಗರಂ, ಮೈಸೂರು, ಹಾಗೂ ದಾವಣಗೆರೆ ಜಿಲ್ಲಾ ಪಂಚಾಯತಿಗಳಿಗೆ ಈ ಕೆಳಕಂಡ ಒಟ್ಟಾರೆ ರೂ. 64,500–00 (ಅರವತ್ತ ನಾಲ್ಕು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ | ಜೀತವಿಮುಕ್ತರ ಸಂ. | ಸಹಾಯಧನ ಬಿಡುಗಡೆ | |
|---|---|---|---|---|
| | | | ಅವಧಿ | ಮೊತ್ತ ರೂ. |
| 1 | ರಾಮನಗರಂ | 1 | 1 ತಿಂಗಳು (2009 ಏಪ್ರಿಲ್) | 300–00 |
| 2 | ಮೈಸೂರು | 10 | 7 ತಿಂಗಳು (2009 ಏಪ್ರಿಲ್‌ನಿಂದ ಅಕ್ಟೋಬರ್‌ವರೆಗೆ) | 21,000–00 |
| 3 | ದಾವಣಗೆರೆ | 12 | 12 ತಿಂಗಳು (2009 ಏಪ್ರಿಲ್‌ನಿಂದ 2010 ಮಾರ್ಚ್‌ವರೆಗೆ | 43,200–00 |
| | **ಒಟ್ಟು** | **23** | | **64,500–00** |

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ –198 ಗ್ರಾಮ ಪಂಚಾಯತಿಗಳಿಗೆ ಸಹಾಯ–6–ಗ್ರಾಮ ಪಂಚಾಯತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ) –01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯತಿ (ಯೋಜನೆ) ಗೆ ಜಮಾ ಮಾಡತಕ್ಕದ್ದು.

3. ಸರ್ಕಾರದ ಆದೇಶ ಸಂ.ಗ್ರಾಅಪ.15.ಆರ್‌ಬಿಎಲ್.2004 ದಿನಾಂಕ:21–01–2006ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದು.

4. ಈ ಆದೇಶವನ್ನು ಮುಖ್ಯಸ್ಥರು (ಹಣಕಾಸು ಮತ್ತು ಲೆಕ್ಕಪತ್ರ), ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ನಿರ್ದೇಶನಾಲಯ ಇವರು ಸಹಮತಿ ದಿನಾಂಕ 13–05–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಪಿ.ಸಿ.ಜಾಫರ್**

ನಿರ್ದೇಶಕರು

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ

ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1467

**KARNATAKA GOVERNOR'S SECRETARIAT**

**NOTIFICATION**

**GS 18 VUM 2008, Bangalore, 4th July, 2009**

WHEREAS, a number of complaints have been received against the Registrar, Karnataka Veterinary, Animal and Fisheries Science University, Bidar, with regard to irregularities in granting promotion to the teaching staff of the Karnataka Veterinary, Animal and Fisheries Sciences University, under Career Advancement Scheme CAS.

WHEREAS, the Veterinary Council of India, New Delhi has derecognized the two Veterinary Colleges of Hassan and Shimoga which are constituent colleges of the Karnataka Veterinary, Animal an Fisheries Sciences Universtiy, Bidar, and the Veterinary Council of India, New Delhi, in its advertisement published in National and State level News papers has also advised the students and parents not to take admission into these two colleges, for the reason of non fulfillment of the statutory formalities by the University.

WHEREAS, it is felt that, mis-administration on the part of the University has resulted in de-recognition of the two Veterinary Colleges by the Veterinary Council of India.

WHEREAS, it is felt necessary to hold an inquiry into the affairs of the Karnataka Veterinary, Animal and Fisheries Sciences University, Bidar especially with regard to iirregularities in grant of Career Advancement Scheme (CAS) promotion to the teaching staff and de-recognition of two constituent Veterinary Colleges, by the Veterinary Council of India, New Delhi.

WHEREAS, the State Government has been consulted in this regard.

WHEREAS, the State Government vide its letter No.AHF 321 VET 2008, dated 24th November, 2008 and AHF 321 VET 2008 dated 19th February 2009 has opined that an inquiry into the affairs of the University is absolutely necessary and has also recommended to appoint the Regional Commissioner, Gulbarga as Inquiry Officer.

NOW, THEREFORE, in exercise of the powers conferred on me by Section 9(1) of the Karnataka Veterinary, Animal and Fisheries Sciences University Act, 2004, I, H.R.BHARDWAJ, Governor of Karnataka and Chancellor of the Universities in the State hereby appoint Shri Rajneesh Goel, IAS, Regional Commissioner, Gulbarga Region, Gulbarga to inquire into the complaints of irregularities reported to have taken place in the University while granting promotion under Career Advancement Scheme (CAS) and also to inquire into the breach of formalities by the University while starting colleges at Hassan and Shimoga as stated by the Veterinary Council of India, New Delhi. The Inquiry Officer shall examine all documents available in the University and also to examine the witnesses, Officers of the University etc., The Inquiry Report shall be submitted within three months from the date of issue of this Notification. The terms and conditions are enclosed.

**H.R. BHARDWAJ**

Governor and Chancellor

**K.H. SESHAGIRI**

Under Secretary to Governor

**TERMS AND CONDITIONS OF THE COMMISSION OF INQUIRY**

1. The sitting of the Inquiry Commission shall be at the Karnataka Veterinary, Animal and Fisheries Sciences University Campus, Bidar.
2. The Commission shall have all powers and obligations stipulated in Section 9(1) of the Karnataka Veterinary, Animal and Fisheries Sciences University Act, 2004.
3. The University shall render all secretarial assistance to the Inquiry Officer.
4. The Inquiry Officer shall draw his TA/DA and other admissible allowances from his Salary Head

**H.R. BHARDWAJ**
Governor and Chancellor

P.R. 1468

**K.H. SESHAGIRI**
Under Secretary to Governor

**ಸಹಕಾರ ಸಚಿವಾಲಯ**

**ವಿಷಯ:** 2009–10ನೇ ಸಾಲಿನಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ಪತ್ರ ಸಂಖ್ಯೆ:ಆರ್‌ಸಿಎಸ್/ ಯಶಸ್ವಿನಿ/35/2009–10 ದಿನಾಂಕ: 01.06.2009

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) 2009–10ನೇ ಸಾಲಿಗೆ ಸಂಬಂಧಿಸಿದಂತೆ ದಿನಾಂಕ: 15–05–2009ರ ಅಂತ್ಯಕ್ಕೆ 8.22 ಲಕ್ಷ ಸದಸ್ಯರು ನೋಂದಣಿಯಾಗಿದ್ದು ರೂ. 11.40 ಕೋಟಿಗಳ ವಂತಿಗೆ ಸಂಗ್ರಹವಾಗಿದ್ದು ಸುಮಾರು ರೂ. 70.00 ಕೋಟಿಗೆ ಮೀರಿ ವೆಚ್ಚವಾಗುವ ಸಾಧ್ಯತೆ ಇರುತ್ತದೆಂದೂ ತಿಳಿಸಿ 2009–10ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸಲಾದ ಅನುದಾನ ರೂ. 40.00 ಕೋಟಿಗಳನ್ನು ಬಿಡುಗಡೆ ಮಾಡಬೇಕೆಂದೂ ಕೋರಿದ್ದಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ 2009–10ನೇ ಸಾಲಿಗೆ ನಿಗದಿಯಾದ ಅನುದಾನದ ಪೈಕಿ ಈಗ ರೂ. 10,00 ಕೋಟಿಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 114 ಸಿಎಲ್‌ಎಸ್ 2009, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುವಾಗುವಂತೆ ರೂ. 1000.00 ಲಕ್ಷಗಳನ್ನು (ರೂಪಾಯಿ ಹತ್ತು ಕೋಟಿಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆಯಡಿ ಈ ಕೆಳಕಂಡಂತೆ ಭರಸತಕ್ಕದ್ದು.

| | | |
|---|---|---|
| 2425–00–108–0–57–ಯಶಸ್ವಿನಿ–059–ಇತರೆ ಖರ್ಚು | – | ರೂ. 632.50 ಲಕ್ಷಗಳು |
| 2425–00–108–0–57–ಯಶಸ್ವಿನಿ–422–ವಿಶೇಷ ಘಟಕ ಯೋಜನೆ | – | ರೂ. 247.50 ಲಕ್ಷಗಳು |
| 2425–00–108–0–57–ಯಶಸ್ವಿನಿ–423–ಗಿರಿಜನ ಉಪಯೋಜನೆ | – | ರೂ. 120.00 ಲಕ್ಷಗಳು |

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರ ಮೇಲು ರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರಿಗೆ ಖಜಾನೆಯಿಂದ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿರುವ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಟ್ರಸ್ಟಿನ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ: 16–05–2008 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1469

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**Sub:** Constitution of sub-committee for Technical Adivisory Panel for Computerization – reg.

**Read:** Government Order No.DPAR 41 EGV 2009 dated 21st May, 2009

**Preamble :**

In Government order read above, a Technical Advisory Panel (TAP) for computerization was re-consttitued under chairmanship of Additional Chief Secretary to overnment to advise Government departments on technical matters relating to compueterisation. Among the duties and responsibilities, prepare a panel of prequalified vendors for few standard items like computer hardware, peripherals, software, web designing, training, data entry, maintenance, UPS etc., to facilitate departments to purchase following normal procedures from such suppliers and Rate Contract for few standard items like computer, Laptop, peripheral,s software, UPS etc., to facilitate departments to purchse directly at these rates from such suppliers. Constitution of sub-committee to TAP is necessitated to review and evaluate the applications received for empanelment and Rate contract and recommending the same to TAP. Hence this order.

**Government Order No: DPAR 41 EGV 2009, Bangalore, Dated 21st May 2009**

Government are pleased to constitute a sub-committee to Technical Advisory Panel as follows :

| | | |
|---|---|---|
| 1. | Principal Secretary to Government, e-Governance, DPAR-AR | Chairperson |
| 2. | Sri R. Krishnamurthy, Principal, Research Scientist, Super Computer Education & Research Centre, Indian Institute of Science, Bangalore-560 012. | Member |
| 3. | Prof. Debabrata Das, Associate Professor, Indian Institute of Information Technology, (IIIT), Bangalore | Member |
| 4. | Representative from Planning, Programme Monitoring and Statistics Department | Member |
| 5. | Representative from Finance Department | Member |
| 6. | Deputy Director General & State Informatics Officer, National Informatics Centre, Bangalore. | Member |
| 7. | Additional Secretary to Government, e-Goverance, DPAR-AR | Member-Secretary |

2. The duties and responsibilities of the sub-committee in TAP are as follows :

i. The sub-committee to TAP would review and evaluate the application received from Vendors for empanelment for few standard items like computer hardware, peripherals, software, web designing, training, data entry, maintenance, UPS etc.,

ii. The sub-committee to TAP would review and evaluate the application received from vendors for Rate Contract for few standard items like computer, Laptop, peripherals,software, UPS etc.,

iii. Prepare a prequalified vendor list for Empanelment and Rate Contract.

iv. Monitor and review the performance of empanelled and Rate contract vendors with respect to government departments.

v. Reviewing the guidelines for empanelment and Rate contract of vendors.

vi. Prepare a standard configuration for servers, desktops, laptops, peripheral like printers, scanners etc.

vii. Recommend to TAP for approval of this prequalified vendor list and configurations.

By order and in the name of Governor of Karnataka

**CHANDRASHEKAR**

Desk Officer-I, e-Governance

Department of Personnel and Administrative Reforms (AR)

P.R. 1471

**Sub:** Reconstitution of Technical Advisory Panel for computerization – reg.

**Read:** G.O. No. DPAR 95 EGV 2004 dated 16.6.2005

**Preamble :**

In Government order read above a Technical Advisory Panel (TAP) for computerization was constituted under chairmanship of Additional Chief Secretary to Government to advise government departments on technical matters relating to computerization. Among the members of TAP, some of the members designations have changed and some of the members nominated by their parent organizations, have retired from the service or have moved out of their organizations on other assignments. Consequent to these factors, it is proposed to reconstitute the TAP. Hence this revised order.

**Government Order No. DPAR 41 EGV 2009, Bangalore, Dated: 21st May 2009**

Government is pleased to reconstitute the Technical Advisory Panel as follows :

| | | |
|---|---|---|
| 1. | Additional Chief Secretary to Government | Chairperson |
| 2. | Principal Secretary to Government, Department of Public Enterprises | Member |
| 3. | Principal Secretary to Government, Planning , Programme Monitoring and Statistics Department. | Member |
| 4. | Principal Secretary to Government, DPAR (AR) | Member |
| 5. | Principal Secretary to Government, Finance Department | Member |
| 6. | Chief Executive Officer, Centre for e-Goverance | Member |
| 7. | Director, Electronic Delivery of Citizen Serv ices | Member |
| 8. | Prof. V. Rajaraman, Hon. Professor, Super Computer Education and Research Centre, Indian Institute of Science, Bangalore-560 012. | Member |
| 9. | Sri R.Krishnamurthy, Principal Research Scientist, Super Computer Education & Research Centre, Indian Institute of Science, Bangalore-560 012. | Member |
| 10. | Prof. Debabrata Das, Associate Professor, Indian Institute of Information Technology (IIIT), Bangalore. | Member |
| 11. | Sri Jerry Rao, Chairman & CEO, Mphasis BFL Ltd., 139/1, Hosur Road, Koramangala, Bangalore-560 095. | Member |
| 12. | Sri Vivek Kulkarni, Chairman & CEO , Brickwork India, 55, 1st Main, 3rd Phase, JP Nagar, Bangalore | Member |
| 13. | Deputy Director General & State Informatics Officer, National Informatics Centre, Bangalore | Member |
| 14. | Principal Secretary to Government, e-Governance Secretariat | Member-Secretary |

2. The duties and responsibilities of the TAP is reiterated as follows :

i. The TAP shall prepare a panel of prequalified suppliers for few standard items like Computer hardware, peripherals, software, web designing, training, data entry, maintenance, UPS etc. to facilitate departments to purchase following normal procedures from such suppliers.

ii. The TAP shall prepare Rate Contract for few standard items like computer, Laptop, peripherals software, UPS etc. to facilitate departments to purchase directly at these rates from such suppliers .

iii. The TAP will closely monitor the progress of computerization in government departments and agencies in a time bound manner.

iv. The representative of Mphasis BFL Ltd., and Brick Work India will not participate in discussions on subjects in which their respective companies may have commercial interest.

v. The TAP should consider and recommend the broad directions for the use of information technology in the state.

By order and in the name of Governor of Karnataka

**CHANDRASHEKAR**

P.R. 1472

Desk Officer-I, e-Governance

Department of Personnel and Administrative Reforms (AR)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಸಿಆಸುಇ 240 ಸಅಸೇ 2009, ಬೆಂಗಳೂರು, ದಿನಾಂಕ: 23ನೇ ಮೇ 2009**

ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಾಹಿಸುತ್ತಿದ್ದ ನ್ಯಾಯಾಂಗ ಇಲಾಖೆಯ ಅಧಿಕಾರಿಗಳನ್ನು ಸಚಿವಾಲಯದ ಸೇವೆಯಿಂದ ಬಿಡುಗಡೆಗೊಳಿಸಲಾದ ಅಧಿಸೂಚನೆ ಸಂಖ್ಯೆ: ಸಿಆಸುಇ 240 ಸಸೇ 2009, ದಿನಾಂಕ: 05–05–2009 ರಲ್ಲಿನ ಕ್ರಮ ಸಂ: (5) ರಲ್ಲಿನ ಶ್ರೀಮತಿ ಎಸ್.ಹೆಚ್. ರೇಣುಕಾದೇವಿ ಇವರ ಪದನಾಮವನ್ನು ಕಾನೂನು ಕೋಶದ "ಮುಖ್ಯಸ್ಥರು, ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆ "ಎಂಬುದರ ಬದಲಾಗಿ" "ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಹಾಗೂ ಶಾಸನ ರಚನಾ ಇಲಾಖೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1473

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎನ್. ಸುಬ್ಬರಾವ್, ವಿಚಾರಣಾಧಿಕಾರಿಗಳು, ಹಾಗೂ ಜಿಲ್ಲಾ ಸೆಷನ್ಸ್ (ನಿವೃತ್ತ) ಇವರಿಗೆ ವಿಚಾರಣಾ ವರದಿ ಸಲ್ಲಿಸಿರುವುದಕ್ಕಾಗಿ ಗೌರವ ಧನ ಮತ್ತು ವಾಹನ ಭತ್ಯೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 165 ಎಸ್‌ಇಎನ್ 2007 ದಿನಾಂಕ: 04.06.2008

2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 155 ಎಸ್‌ಇಎನ್ 2007 ಸಂಖ್ಯೆ ದಿನಾಂಕ 04.05.2009

**ಪ್ರಸ್ತಾವನೆ:**

ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು) ಶಿಕ್ಷಣ ಇಲಾಖೆ, ಇವರು ಹಿಂದಿನ ನಿರ್ದೇಶಕರು, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, 2005–06 ಹಾಗೂ 2006–07ನೇ ಸಾಲಿನಲ್ಲಿ ಡೂಪ್ಲಿಕೇಟಿಂಗ್ ಖರೀದಿಸಲು ಟೆಂಡರ್ ಅಧಿಸೂಚನೆಯಲ್ಲಿ ತಿಳಿಸಿದ ಬೇಡಿಕೆಗಿಂತ ಹೆಚ್ಚಾಗಿ ಖರೀದಿಸಿರುವ ಬಗ್ಗೆ ವಿಚಾರಣೆಯನ್ನು ನೆಡೆಸಲು ಮೇಲೆ ಓದಲಾದ (1) ರಲ್ಲಿ ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ (2) ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆಯ ಅಂತಿಮ ವರದಿಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸದರಿ ವಿಚಾರಣಾಧಿಕಾರಿಯವರಿಗೆ ಗೌರವ ಧನ ಮತ್ತು ವಾಹನ ಭತ್ಯೆಯನ್ನು ನೀಡುವ ಕುರಿತು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 165 ಎಸ್‌ಇಎನ್ 2007, ಬೆಂಗಳೂರು, ದಿನಾಂಕ: 25ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ವಿಚಾರಣಾ ವರದಿ ಸಲ್ಲಿಸಿರುವ ಕಾರಣ ಇವರಿಗೆ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 22 ಸೇಇವಿ 2007, ದಿನಾಂಕ 11–04–2008 ರನ್ವಯ ರೂ.8000/–ಗಳ ಗೌರವಧನ ಹಾಗೂ ರೂ.1500/–ಗಳ ವಾಹನ ಭತ್ಯೆಯನ್ನು ಪಾವತಿ ಮಾಡಬೇಕೆಂದು ಆದೇಶಿಸಿದೆ.

ಈ ವೆಚ್ಚವನ್ನು ಆಯವ್ಯಯದ ಲೆಕ್ಕಶೀರ್ಷಿಕೆ 2052/ಸಚಿವಾಲಯ, ಸಾಮಾನ್ಯ ಸೇವೆಗಳು–090, ಸಚಿವಾಲಯ–01, ಕರ್ನಾಟಕ ಸರ್ಕಾರ ಸಚಿವಾಲಯ–051, ಸಾಮಾನ್ಯ ವೆಚ್ಚಗಳು ಇಲ್ಲಿ ಭರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1474

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**PERSONNEL AND ADMINISTRATIVE REFORMS SECRETARIAT**

**CORRIGENDUM**

**No.DPAR 75 SAS 2009, Bangalore, dated: 28th May 2009**

In the Government Notification of even number dated 28-5-2009, in third line of Para-22, the words "Ramanagara District, Ramanagara" shall be read as "Deputy Commissioner, Ramanagara District, Ramanagara".

By Order and in the Name of the Governor of Karnataka

**K.G. ANANTHA**

Under Secretary to Government

Department of Personnel and Administrative Reforms (Services-I)

P.R. 1475

**ADDENDUM**

**No.DPAR 174 SEP 2008, Bangalore, Dated: 11th June 2009**

In the G.O. of even number dated 27-05-2009, relating to the Departmental Enquiry against 8 IFS Officers, in the matter of irregularities in Hunsur Wildlife Division, the following para shall and shall always be deemed to have been added as the last para.

"The Enquiry Officer shall complete the joint enquiry against all the 8 Accused Government Officers in common proceedings and send the Enquiry Report to Government within 2 months positively."

By Order and in the Name of the Governor of Karnataka

**ASHOK P. ATRE**

Under Secretary to Government,

Department of Personnel and Administrative Reforms (Services-4)

P.R. 1482

**CORRIGENDUM**

**No.DPAR 2 SLU 2009, Bangalore, Dated: 18th June 2009**

In Notification No. DPAR 2 SLU 2009 dated 15-6-2009 the figure 'Rs.2,500" appearing in sub-rule (ii) of rule 2 shall be reas as "Rs.10,000".

By Order and in the Name of the Governor of Karnataka

**P. MARKANDEYA**

Under Secretary to Government,

Department of Personnel and Administrative Reforms (Service Rules-2)

P.R. 1483

**ವಸತಿ ಸಚಿವಾಲಯ**

**ವಿಷಯ:** ತುಮಕೂರು ಜಿಲ್ಲೆ, ತುರುವೇಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಾತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ವಇ /42/ಹೆಚ್‌ಎಎಂ/1999, ದಿನಾಂಕ: 10–05–2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ತುಮಕೂರು ಜಿಲ್ಲೆ, ತುರುವೇಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 34 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 4ನೇ ಜೂನ್ 2009**

ತುಮಕೂರು ಜಿಲ್ಲೆ, ತುರುವೇಕೆರೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ರಾಮಕೃಷ್ಣಯ್ಯ ಬಿನ್ ಭೀಮಯ್ಯ ವೈ.ಟಿ. ರಸ್ತೆ, ತುರುವೇಕೆರೆ | ಸಾಮಾನ್ಯ |
| 2. | ಶ್ರೀಮತಿ ಗಂಗಮ್ಮ ಕೋಂ ನಾಗರಾಜ್, ವಿದ್ಯಾನಗರ, ತುರುವೇಕೆರೆ | (ಮಹಿಳೆ) ಹಿಂ. ವರ್ಗ |
| 3. | ಶ್ರೀ ಭದ್ರಯ್ಯ ಬಿನ್ ಮಲ್ಲಯ್ಯ, ವಿನೋಭಾನಗರ, ತುರುವೇಕೆರೆ | ಪರಿಶಿಷ್ಠ ಜಾತಿ |
| 4. | ಶ್ರೀ ರಫೀಕ್ ಬಿನ್ ಸಫಿ ಅಹಮದ್, ಶಕ್ತಿನಗರ, ತುರುವೇಕೆರೆ | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. 1496

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ವಇ /42/ಹೆಚ್ಎಎಂ/1999, ದಿನಾಂಕ : 10–05–2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ಸಿವಇ 27 ಹೆಚ್ಎಎಸ್ 2009, ಬೆಂಗಳೂರು, ದಿನಾಂಕ: 4ನೇ ಜೂನ್ 2009**

ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಜಯಣ್ಣ ಬಿನ್ ಸಂಜೀವಪ್ಪ, ದಿಬ್ಬೂರು ಗ್ರಾಮ, ಕಾಕೋಳು ಅಂಚೆ, ಹೆಸರಘಟ್ಟ ಹೋ, ಬೆಂಗಳೂರು ಉತ್ತರ ತಾಲ್ಲೂಕು | ಸಾಮಾನ್ಯ |
| 2. | ಶ್ರೀ ಜಿ.ಹೆಚ್.ನಾಗರಾಜ್ ಬಿನ್ ಲೇ: ಹನುಮಂತಪ್ಪ, ಗಂಗೊಡನಹಳ್ಳಿ ಗ್ರಾಮ, ಲಕ್ಷ್ಮೀಪುರ ಅಂಚೆ, ದಾಸನಾಪುರ ಹೋ, ಬೆಂಗಳೂರು ಉತ್ತರ ತಾಲ್ಲೂಕು. | ಹಿಂ. ವರ್ಗ |
| 3. | ಶ್ರೀ ರಾಯಪ್ಪ ಬಿನ್ ಹೃದಯರಾಜ್ ಸಿಲುವೆಪುರ, ಹೆಸರಘಟ್ಟ ಹೋ, ಬೆಂಗಳೂರು ಉತ್ತರ ತಾಲ್ಲೂಕು | ಅಲ್ಪಸಂಖ್ಯಾತರು |
| 4. | ಶ್ರೀಮತಿ ಪಾರ್ವತಮ್ಮ ಕೋಂ ತಿಮ್ಮಯ್ಯ, ಕೊಲುವರಾಯನಹಳ್ಳಿ, ಕಾಕೋಳು ಅಂಚೆ, ಹೆಸರಘಟ್ಟ ಹೋ. ಬೆಂಗಳೂರು ಉತ್ತರ ತಾಲ್ಲೂಕು | (ಮಹಿಳೆ) ಪರಿಶಿಷ್ಟ ಜಾತಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1497

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ:** ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ವಇ/42/ಹೆಚ್ಎಎಂ/1999, ದಿನಾಂಕ : 10–05–2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 25 ಹೆಚ್ಎಎಸ್ 2009, ಬೆಂಗಳೂರು, ದಿನಾಂಕ: 4ನೇ ಜೂನ್ 2009**

ಚಿಕ್ಕಬಳ್ಳಾಪುರ ತಾಲ್ಲೂಕು, ಗುಡಿಬಂಡೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಮಂಜುನಾಥ ನಾಯ್ಡು, ಜಿ.ಎಲ್, ಬಿನ್ ಲಕ್ಷ್ಮೀಪತಿ ನಾಯ್ಡು, ಕಾಟನ್‌ಪೇಟೆ, ಗುಡಿಬಂಡೆ | ಹಿಂದುಳಿದ ವರ್ಗ |
| 2. | ಶ್ರೀಮತಿ ಎಸ್. ಸಂಧ್ಯಾ ಕೋಂ ವಿ. ಗಂಗಾಧರ, ವಿವೇಕಾನಂದನಗರ, ಕೋಟೆ, ಗುಡಿಬಂಡೆ | (ಮಹಿಳೆ) ಸಾಮಾನ್ಯ |
| 3. | ಶ್ರೀ ಎಸ್. ಶಫೀಉಲ್ಲಾ ಬಿನ್ ಗಫುರ್ ಸಾಬ್, ಬಾಪೂಜಿನಗರ, ಗುಡಿಬಂಡೆ | ಅಲ್ಪಸಂಖ್ಯಾತರು |
| 4. | ಶ್ರೀ ಮುನಿಸ್ವಾಮಿ ಬಿನ್ ನಾರಾಯಣಪ್ಪ, ಅಂಬೇಡ್ಕರ್ ನಗರ, ಗುಡಿಬಂಡೆ | ಪರಿಶಿಷ್ಟ ಪಂಗಡ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1498

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ:** ಬೆಳಗಾವಿ ಜಿಲ್ಲೆ ರಾಮದುರ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ವಇ/42/ಹೆಚ್ಎಎಂ/1999, ದಿನಾಂಕ : 10–05–2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೆಳಗಾವಿ ಜಿಲ್ಲೆ, ರಾಮದುರ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 23 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 4ನೇ ಜೂನ್ 2009**

ಬೆಳಗಾವಿ ಜಿಲ್ಲೆ, ರಾಮದುರ್ಗ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಶಿವಾನಂದ ದುಂಡಪ್ಪ ಬಟಕುರ್ಕಿ, ಸಾ: ರಾಮದುರ್ಗ, ಬೆಳಗಾವಿ ಜಿಲ್ಲೆ | ಸಾಮಾನ್ಯ |
| 2. | ಶ್ರೀಮತಿ ರಾಜಶ್ರೀ ಗಂಗಾಧರ ಭೋಸಲೆ, ರಾಮದುರ್ಗ, ಬೆಳಗಾವಿ ಜಿಲ್ಲೆ | (ಮಹಿಳೆ) ಹಿಂ. ವರ್ಗ |
| 3. | ಶ್ರೀ ವೆಂಕಪ್ಪ ವೆ. ಶಿರಸಂಗಿ, ರಾಮದುರ್ಗ, ಬೆಳಗಾವಿ ಜಿಲ್ಲೆ | ಪರಿಶಿಷ್ಟ ಜಾತಿ |
| 4. | ಶ್ರೀ ದಾದಾಸಾಬ ಹನೀಫ್‌ಸಾಬ್ ಸರಕಾರಜಿ, ರಾಮದುರ್ಗ, ಬೆಳಗಾವಿ ಜಿಲ್ಲೆ | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1499

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ:** ಹಾಸನ ಜಿಲ್ಲೆ, ಅರಕಲಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ವಇ/42/ಹೆಚ್‌ಎಎಂ/1999, ದಿನಾಂಕ : 10–05–2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಹಾಸನ ಜಿಲ್ಲೆ, ಅರಕಲಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 36 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 2ನೇ ಜೂನ್ 2009**

ಹಾಸನ ಜಿಲ್ಲೆ, ಅರಕಲಗೂಡು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀಮತಿ ಹೆಚ್.ವಿ. ಭಾಗ್ಯಮ್ಮ ಕೋಂ ಕೇಶವಗೌಡ, ಕೋಟೆ, ಅರಕಲಗೂಡು | (ಮಹಿಳೆ), ಹಿಂ, ವರ್ಗ |
| 2. | ಶ್ರೀ ವೆಂಕಟೇಶ್ ಬಿನ್ ವಿ. ಶ್ರೀನಿವಾಸಯ್ಯ, ಕೋಟೆ, ಅರಕಲಗೂಡು | ಸಾಮಾನ್ಯ |
| 3. | ಶ್ರೀ ಕೆ.ಜಿ. ಸುರೇಶ್ ಬಿನ್ ಜವರಯ್ಯ, ಕೆಲ್ಲೂರು, ಅರಕಲಗೂಡು ತಾ: | ಪರಿಶಿಷ್ಟ ಜಾತಿ |
| 4. | ಶ್ರೀ ಸುಭಾನ್ ಶರೀಫ್ ಬಿನ್ ಪ್ಯಾರೇಜಾನ್ ಸಾಬ್, ಕೋಟೆ, ಅರಕಲಗೂಡು ತಾ: | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1500

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾವೇರಿ ಹಾಗೂ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಸವಣೂರು, ಹಾವೇರಿ ಜಿಲ್ಲೆ, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:**
1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಪಿಎನ್. ಸಿಶಾ1:69: 2009–10, ದಿನಾಂಕ: 05–06–2009
2. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂ. ಲೋಕ್/ಐಎನ್‌ವಿ (ಜಿ)/ಎಲ್–20/ಸಿಆರ್–4/2009/ಹಾವೇರಿ, ದಿನಾಂಕ: 11–06–2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ದಿನಾಂಕ: 05–06–2009ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರವರ ಪತ್ರ ಮತ್ತು ಮೇಲೆ (2) ರಲ್ಲಿ ದಿನಾಂಕ 11–06–2009ರ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಗಳಲ್ಲಿ ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 4/2009ರ ಪ್ರಕರಣದಲ್ಲಿ ಆರೋಪಿಯಾಗಿರುವ ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾವೇರಿ, ಇವರು ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಸವಣೂರು ಹುದ್ದೆಯಲ್ಲಿ ಪ್ರಭಾರ ರೀತ್ಯಾ ಕಾಯ ನಿರ್ವಹಿಸುತ್ತಿದ್ದಾಗ ದಿನಾಂಕ:03–06–2009 ರಂದು ಸವಣೂರು ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಬೆಳಿಗೆ 11–00 ಗಂಟೆ ಸುಮಾರಿಗೆ ಸಿ.ಸಿ. ಸಂಖ್ಯೆ: 291/2008ರ ಅಡಿಯಲ್ಲಿ ದಾಖಲಾದ ಪ್ರಕರಣದ ಫಿರ್ಯಾದುದಾರರಾದ ಶ್ರೀ ಕರಿಯಪ್ಪ ನೀಲಪ್ಪ

ಮೆಡ್ಲೇರಿ, ಇವರಿಂದ ರೂ.1,000/– ಲಂಚವನ್ನು ಪಡೆಯುತ್ತಿದ್ದಾಗ ಹಾವೇರಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿರುವುದಾಗಿ ತಿಳಿಸಿರುತ್ತಾರೆ. ಸದರಿ ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲೆ ಸದರಿ ಲೋಕಾಯುಕ್ತ ಪೊಲೀಸರು ಗುನ್ನೆ ನಂ.4/2009, ಕಲಂ 7, 13 (1) (ಡಿ) ಸಹವಾಚಕ 13(2) ಭ್ರಷ್ಟಾಚಾರ ನಿರೋಧ ಕಾಯಿದೆ 1988ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು, ಸದರಿ ಅಧಿಕಾರಿಯನ್ನು ದಸ್ತಗಿರಿ ಮಾಡಿ ತನಿಖೆ ನಡೆಸುತ್ತಿರುವುದಾಗಿ ತಿಳಿಸಿರುತ್ತಾರೆ. ಆದಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ರೀತ್ಯಾ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ: 03–06–2009 ರಿಂದ ಜಾರಿಗೆ ಬರುವಂತೆ ನಿಲಂಬನೆಯಲ್ಲಿಟ್ಟು ಆದೇಶ ಹೊರಡಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 292 ಪಿಪಿಇ 2009, ಬೆಂಗಳೂರು, ದಿನಾಂಕ: 30ನೇ ಜೂನ್ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಕ್ಕಾಗಿ ಶ್ರೀ ಹನುಮಂತಪ್ಪ ವಿಠ್ಠಪ್ಪ ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಹಾವೇರಿ ಹಾಗೂ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಹಾವೇರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಎ)ರ ಅನುಸಾರ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ :03–06–2009 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಸದರಿ ಅಧಿಕಾರಿಯವರು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1957ರ ನಿಯಮ 98 ಅನುಸಾರ ಅಮಾನತ್ತಿನ ಅವಧಿಯಲ್ಲಿ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ನೇಮಕಾತಿ ಪ್ರಾಧಿಕಾರಿ/ಮೇಲಾಧಿಕಾರಿಯ ಪೂರ್ವಾನುಮತಿಯುನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು, ಕಾಫಿ ಪೋಸಾ ಮತ್ತು ಅಭಿಯೋಗ)

ಪಿ.ಆರ್. 1512

## ಸಹಕಾರ ಸಚಿವಾಲಯ

**ವಿಷಯ:** ಶ್ರೀ ವೈ.ಎಂ. ಚಂದ್ರಶೇಖರಯ್ಯ ಸ್ಮಾರಕ ಪದವಿ ಪೂರ್ವ ಕಾಲೇಜು, ಕಡೂರು, ಚಿಕ್ಕಮಗಳೂರು ಜಿಲ್ಲೆ, ಈ ಕಾಲೇಜಿಗೆ ಆಡಳಿತಾಧಿಕಾರಿಯನ್ನು ನೇಮಕಾತಿ ಮಾಡುವ ಕುರಿತು.

**ಓದಲಾಗಿದೆ:**
1. ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆರವರ ಪತ್ರ ದಿನಾಂಕ: 01-01–2009
2. ಅಧೀನ ಕಾರ್ಯದರ್ಶಿ (ಪ್ರೌಢ) ರವರಿಂದ ಹೊರಡಿಸಿದ ಕಾರಣ ಕೇಳುವ ನೋಟೀಸು ದಿನಾಂಕ:24/02/2009
3. ಕಾರ್ಯದರ್ಶಿಗಳು, ಜ್ಞಾನಗಂಗಾ ವಿದ್ಯಾ ಸಂಸ್ಥೆ (ರಿ), ಮರವಂಜಿ, ಕಡೂರು ತಾಲ್ಲೂಕುರವರ ಪತ್ರ ದಿನಾಂಕ: 16/03/2009

**ಪ್ರಸ್ತಾವನೆ:**

ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ರವರ ಮೇಲೆ ಓದಲಾದ ಕ್ರಮ ಸಂ. (1) ರ ದಿನಾಂಕ:01/01/2009ರ ಪತ್ರದಲ್ಲಿ ಜ್ಞಾನಗಂಗಾ ವಿದ್ಯಾ ಸಮಿತಿ (ರಿ), ಮರವಂಜಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ವತಿಯಿಂದ ಕಡೂರಿನಲ್ಲಿ ನಡೆಯುತ್ತಿರುವ ವೈ.ಎಂ. ಚಂದ್ರಶೇಖರಯ್ಯ ಸ್ಮಾರಕ ಪದವಿ ಪೂರ್ವ ಕಾಲೇಜಿನ ನಿವೇಶನವನ್ನು ನಿಯಮಬಾಹಿರವಾಗಿ ಇಬ್ಬರಿಗೆ ನೀಡಿರುವುದಾಗಿ, ಸರ್ಕಾರಿ ಮೀಸಲಾತಿ ನಿಯಮವನ್ನು ಉಲ್ಲಂಘಿಸಿರುವುದಾಗಿ, ಬ್ಯಾಂಕ್ ಖಾತೆಯನ್ನು ನಿಯಮಬಾಹಿರವಾಗಿ ಬದಲಾಯಿಸಿಕೊಂಡಿದ್ದು ನಂತರ ಸರಿಪಡಿಸಿಕೊಂಡಿರುವುದಾಗಿ, ಆಯುಕ್ತರು ಹೊರತಂದಿರುವ ದಾಖಲಾತಿ ಕೈಪಿಡಿ ಮಾರ್ಗಸೂಚಿ ಉಲ್ಲಂಘನೆ ಮತ್ತು ದಾಖಲಾತಿ ಮಾಡಿಕೊಂಡು ವಂತಿಗೆ ಮತ್ತು ಶುಲ್ಕದ ಬಾಬ್ತು ಬ್ಯಾಂಕ್ ಖಾತೆಗಳಿಗೆ ಜಮಾ ಮಾಡದೇ ಸರ್ಕಾರಿ ನಿಯಮವನ್ನು ಉಲ್ಲಂಘಿಸಿರುವುದಾಗಿ, ಸಂಚಿತ ನಿಧಿಯ ಹಣವನ್ನು ಆಡಳಿತ ಮಂಡಳಿಯ ಖಾತೆಗೆ ಜಮಾ ಮಾಡಲು ಆಡಳಿತ ಮಂಡಳಿಯವರು ಪ್ರಾಚಾರ್ಯರಿಗೆ ಪತ್ರ ಬರೆದಿರುವುದಾಗಿ, ಕಾಲೇಜಿನ ಕಡತಗಳನ್ನು ಆಡಳಿತ ಮಂಡಳಿಯವರ ಸಂಬಂಧಿಯಾದ ದ್ವಿತೀಯ ದರ್ಜೆ ಸಹಾಯಕರ ಸಹಾಯದಿಂದ ಪಡೆದುಕೊಂಡಿರುವುದಾಗಿ, ಇಲಾಖಾ ಅಧಿಕಾರಿಗಳು ತಪಾಸಣೆಗೆ ಬಂದ ಸಮಯದಲ್ಲಿ ತಪ್ಪು ಮಾಹಿತಿ ನೀಡಿ ತಪಾಸಣೆಗೆ ಅಡ್ಡಿ ಪಡಿಸಿರುವುದಾಗಿ, ನೌಕರರಿಗೆ ಗಳಿಕೆ ರಜಾ ಮತ್ತು ಸಾಂದರ್ಭಿಕ ರಜೆಯನ್ನು ನಿಯಮಬಾಹಿರವಾಗಿ ಆಡಳಿತ ಮಂಡಳಿಯವರು

ಮಂಜೂರು ಮಾಡುತ್ತಿರುವುದಾಗಿ, ಆಡಳಿತ ಮಂಡಳಿಯವರು ಅನಧಿಕೃತ ಗೈರು ಹಾಜರಾದವರಿಗೆ ವೇತನ ಪಾವತಿಸಲು ಪ್ರಾಚಾರ್ಯರಿಗೆ ಒತ್ತಡ ತರುವುದು, ಕಛೇರಿಯ ಗುಮಾಸ್ತರು ಯಾವುದೇ ಕೆಲಸ ನಿರ್ವಹಿಸುತ್ತಿಲ್ಲ ಎಂದು ಸಂಸದರ ನಿಧಿಯ ದುರುಪಯೋಗ ಮಾಡಿರುವುದಾಗಿ ತಪಾಸಣೆ ಸಮಯದಲ್ಲಿ ದುರುಪಯೋಗ ಮಾಡಿರುವುದಾಗಿ, ಇಲಾಖೆಯ ತಪಾಸಣೆ ಸಮಯದಲ್ಲಿ ದುರುಪಯೋಗವಾಗಿದೆ ಎನ್ನಲಾದ ರೂ. 67,000/– ಗಳ ಆಕ್ಷೇಪಣೆ ಇದ್ದು ಯಾವುದೇ ಕ್ರಮ ವಹಿಸಲಾಗಿಲ್ಲವೆಂದು, ಆಡಳಿತ ಮಂಡಳಿಯವರೊಂದಿಗೆ ಗುಮಾಸ್ತರು ಸೇರಿ ಹಣ ದುರುಪಯೋಗ ಪಡಿಸಿಕೊಂಡಿರುವುದಾಗಿ, ಇಲಾಖೆ ಸಿಬ್ಬಂದಿ ಕಾರ್ಯಭಾರದ ಬಗ್ಗೆ ತಪ್ಪು ಮಾಹಿತಿ ನೀಡಿ ಅನುದಾನ ಸಂಹಿತೆಯ ನಿಯಮಗಳನ್ನು ಉಲ್ಲಂಘಿಸಿರುವುದಾಗಿ, ಆಡಳಿತ ಮಂಡಳಿಯವರು ಇಬ್ಬರನ್ನು ಹೊರತುಪಡಿಸಿ ಉಳಿದೆಲ್ಲರೂ ಒಂದೇ ಕುಟುಂಬದವರು, ಇತ್ಯಾದಿ ಕಾರಣಗಳಿಂದಾಗಿ ಮತ್ತು ಕಾಲೇಜಿನ ಆಡಳಿತ ಮಂಡಳಿಯ ಮೂಲಭೂತ ಸೌಕರ್ಯಗಳನ್ನು ಒದಗಿಸುವಲ್ಲಿ ವಿಫಲವಾಗಿರುವುದಾಗಿ ಇವೆಲ್ಲಾ ಮೇಲ್ನೋಟಕ್ಕೆ ತಪ್ಪುಗಳು ಸಾಬೀತಾಗಿರುವುವು. ಈ ಹಿನ್ನೆಲೆಯಲ್ಲಿ ಜ್ಞಾನಗಂಗಾ ವಿದ್ಯಾ ಸಮಿತಿ (ರಿ), ಮರವಂಜಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಆಡಳಿತದಲ್ಲಿರುವ ವೈ.ಎಂ. ಚಂದ್ರಶೇಖರಯ್ಯ ಸ್ಮಾರಕ ಪದವಿ ಪೂರ್ವ ಕಾಲೇಜಿನ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಆಡಳಿತಾಧಿಕಾರಿಯನ್ನು ನೇಮಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂ. (2) ರಲ್ಲಿರುವ ದಿನಾಂಕ 24/02/2009 ರ ಕಾರಣ ಕೇಳುವ ನೋಟೀಸಿನಲ್ಲಿ ಸದರಿ ಸಂಸ್ಥೆಯ ವಿರುದ್ಧ ಬಂದ ದೂರುಗಳ ಬಗ್ಗೆ ತಿಳಿಸುತ್ತಾ, ಈ ಸಂಬಂಧ ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಚಿಕ್ಕಮಗಳೂರು ರವರ ತನಿಖಾ ವರದಿಯನ್ನು ಲಗತ್ತಿಸಿ ಕಾಲೇಜಿಗೆ ಕರ್ನಾಟಕ ಶಿಕ್ಷಣ ಕಾಯ್ದೆ 1983 ರ ನಿಯಮ 12ಎ ಪ್ರಕಾರ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಆಡಳಿತಾಧಿಕಾರಿಯನ್ನು ನೇಮಿಸಲು ಏಕೆ ಶಿಫಾರಸ್ಸು ಮಾಡಬಾರದೆಂಬ ಬಗ್ಗೆ ಸಮಾಜಾಯಿಷಿ/ವಿಚಾರಣೆಯನ್ನು ಪತ್ರಿ ಅಂಶಕ್ಕೂ ಸಂಬಂಧಿಸಿದಂತೆ ಲಿಖಿತ ಮೂಲಕವಾಗಿ 30 ದಿವಸಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸಲು ತಿಳಿಸಲಾಗಿ, ಉತ್ತರವನ್ನು ನಿಗದಿತ ಸಮಯದೊಳಗೆ ತಲುಪಿಸದಿದ್ದಲ್ಲಿ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ ಏಕಪಕ್ಷೀಯವಾಗಿ ನಿರ್ಧರಿಸಿ ಕರ್ನಾಟಕ ಶಿಕ್ಷಣ ಕಾಯ್ದೆಯಲ್ಲಿನ ನಿಯಮಗಳನ್ವಯ ಕ್ರಮ ಜರುಗಿಸಲಾಗುವುದೆಂದು ತಿಳಿಸುತ್ತಾ ವಿಫಲತೆಯನ್ನು ಗಂಭೀರವಾಗಿ ಪರಿಗಣಿಸಲಾಗುವುದು ಎಂದು ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂ. (3) ರಲ್ಲಿ ಕಾರ್ಯದರ್ಶಿಗಳು ಜ್ಞಾನಗಂಗಾ ವಿದ್ಯಾ ಸಂಸ್ಥೆ (ರಿ) ಮರವಂಜಿ, ಕಡೂರು ತಾಲ್ಲೂಕು, ರವರು ಕಾರಣ ಕೇಳುವ ನೋಟೀಸಿಗೆ ಉತ್ತರಿಸುತ್ತಾ, ಇವರ ವಿರುದ್ಧದ ಹೂಡಿರುವ ಎಲ್ಲಾ ಆರೋಪಗಳನ್ನು ತಿರಸ್ಕರಿಸುತ್ತಾ 1985–86 ರಿಂದ 2006 ರ ವರೆಗೆ ಯಾವುದೇ ದೂರುಗಳು ಇಲ್ಲದೇ ಕರ್ತವ್ಯ ಲೋಪಗಳಿಲ್ಲದೆ ನಡೆಸಿಕೊಂಡು ಬಂದ ಈ ಕಾಲೇಜಿನ ಆಡಳಿತ ಸಂಸ್ಥೆಯ ಬಗ್ಗೆ ಕಾಲೇಜಿನ ಪ್ರಾಚಾರ್ಯರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎ.ಪಿ. ಶಿವಮೂರ್ತಿ ರವರು ದೂರನ್ನು ನೀಡಿರುವುದು ವಿಷಾದನೀಯ ಸಂಗತಿ. ಇಲಾಖೆಯ ಅಧಿಕಾರಿಗಳಿಗೆ ತಪ್ಪು ಮಾಹಿತಿಯನ್ನು ನೀಡಿ ವಿದ್ಯಾ ಸಮಿತಿಯ ಬಗ್ಗೆ ಇಲಾಖಾಧಿಕಾರಿಗಳು ತಪ್ಪು ಭಾವಿಸಿಕೊಳ್ಳಲು ಇವರ ಮೇಲೆ ವಿದ್ಯಾ ಸಮಿತಿ ಹೊರಿಸಿರುವ ಆರೋಪಗಳೇ ಮುಖ್ಯ ಕಾರಣ. ಈ ಆರೋಪಗಳು ಮೇಲೆ ಸದರಿ ನೌಕರರನ್ನು ಮಾನ್ಯ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ರವರ ಅನುಮಿತಿಯಂತೆ ವಿದ್ಯಾ ಸಮಿತಿ ಅಮಾನತ್ತಿನಲ್ಲಿಟ್ಟು ವಿಚಾರಣೆಗೆ ಒಳಪಡಿಸಿದ್ದರ ಕಾರಣದಿಂದ ದುರುದ್ದೇಶ ಪೂರ್ವಕವಾಗಿ ವಿದ್ಯಾ ಸಮಿತಿಯ ಮೇಲೆ ಇಲ್ಲಸಲ್ಲದ ಆರೋಪಗಳನ್ನು ಸಲ್ಲಿಸಿದ್ದಾರೆಂದು ತಿಳಿಸುತ್ತಾ ಸತ್ಯಕ್ಕೆ ದೂರವಾದ ಈ ಆರೋಪಗಳನ್ನು ಮಾನ್ಯ ಮಾಡಬಾರದಾಗಿ ಕೋರಿರುತ್ತಾರೆ.

ಶಿಕ್ಷಣ ಸಂಸ್ಥೆಯು ನೀಡಿರುವ ವಿವರಣೆಯು ತೃಪ್ತಿಕರವಾಗಿರುವುದಿಲ್ಲ, ಹಣಕಾಸಿನ ವ್ಯವಹಾರಗಳು ಮೇಲ್ನೋಟಕ್ಕೆ ದುರುಪಯೋಗವಾಗಿರುವುದು ಕಂಡು ಬಂದಿರುತ್ತದೆಂದು, ಶಿಕ್ಷಣ ಸಂಸ್ಥೆಯು ನಿರ್ದಿಷ್ಟವಾಗಿ ದಾಖಲೆಯೊಡನೆ ಆಪಾದನೆಗಳನ್ನು ಅಲ್ಲಗೆಳೆದಿರುವುದಿಲ್ಲ. ಕೇವಲ ಆಪಾದನೆಗಳು ಆಗಿರುವುದಿಲ್ಲವೆಂದು ಮಾತ್ರ ಉತ್ತರಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸತ್ಯಾಸತ್ಯತೆಯನ್ನು ತಿಳಿಯುವುದು ಅಗತ್ಯವಾಗಿರುತ್ತದೆ. ಆದ್ದರಿಂದ ಇದಕ್ಕೆ ಶಿಕ್ಷಣ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸಿ ವಾಸ್ತವ ಚಿತ್ರಣ ಪಡೆಯಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಕಾಲೇಜಿಗೆ ಆಡಳಿತಾಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ಕಂಡು ಬಂದ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 82 ಸಸಂನೋ 2009 ಬೆಂಗಳೂರು, ದಿನಾಂಕ: 4ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವೈ.ಎಂ. ಚಂದ್ರಶೇಖರಯ್ಯ ಸ್ಮಾರಕ ಪದವಿ ಪೂರ್ವ ಕಾಲೇಜು, ಕಡೂರು, ಚಿಕ್ಕಮಗಳೂರು ಜಿಲ್ಲೆ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27ಎ(1)(ಸಿ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ತಹಶೀಲ್ದಾರ್, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರನ್ನು ಆಡಳಿತಾಧಿಕಾರಿಯಾಗಿ 6 (ಆರು) ತಿಂಗಳ ಅವಧಿಗೆ ಅಥವಾ ಸದರಿ ಅವಧಿಯಲ್ಲಿ ಕಾಲೇಜಿನ ಆಡಳಿತ ಮಂಡಳಿಯಿಂದ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನೂ ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1550 **ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆಯ ಔರಾದ್ ಕೈಗಾರಿಕಾ ತರಬೇತಿ ಸಂಸ್ಥೆಗೆ ಭೂದಾನಿಗಳ ಹೆಸರನ್ನು ಇಡಲು ಮಂಜೂರಾತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:** ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂಖ್ಯೆ ಉತನಿ/ತರಬೇತಿ/ಕಟ್ಟಡ/ವಿವ–19/2007–08 ದಿನಾಂಕ 04/02/2008 ಮತ್ತು 01/04/2009

**ಪ್ರಸ್ತಾವನೆ:**

ಮೇಲೆ ಓದಲಾದ ಉದ್ಯೋಗ ಮತ್ತು ತರಬೇತಿ ಇಲಾಖೆ ರವರು ತಮ್ಮ ಪತ್ರಗಳಲ್ಲಿ ಬೀದರ್ ಜಿಲ್ಲೆಯ ಔರಾದ್ ಕೈಗಾರಿಕಾ ತರಬೇತಿ ಸಂಸ್ಥೆಯು ಖಾಸಗಿ ಕಟ್ಟಡದಲ್ಲಿ ಬಾಡಿಗೆ ಆಧಾರದ ಮೇಲೆ ವಾಸ್ತವ್ಯ ಹೂಡಿದ್ದು ಕಾರ್ಯನಿರ್ವಹಿಸುತ್ತಿರುತ್ತದೆ ಎಂದು ತಿಳಿಸಿರುತ್ತಾರೆ. ಮುಂದುವರೆದು, ಔರಾದ್ ಪ್ರದೇಶದ ಸ್ಥಳೀಯರಾದ ಚಂದ್ರಪ್ಪ ಪಾಟೀಲ್ ಎಂಬುವವರು ತಮ್ಮ ಒಡೆತನದಲ್ಲಿರುವ ಸರ್ವೆ ನ.130(2) ಅ ರಲ್ಲಿ ಇರುವ 3 ಎಕರೆ ಜಮೀನನ್ನು ಔರಾದ್ ಮಹಿಳಾ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣದ ಸಲುವಾಗಿ ದಾನವಾಗಿ ಕೊಡಲು ಉತ್ಸುಕರಾಗಿದ್ದು ನೂತನ ಕಟ್ಟಡ ಶಿಲನ್ಯಾಸ ಅಥವಾ ಕಟ್ಟಡ ನಿರ್ಮಾಣವಾದ ನಂತರ ಭೂಮಾಲೀಕರ ಜ್ಞಾಪಕಾರ್ಥವಾಗಿ **"ಶ್ರೀ ಚಂದ್ರಪ್ಪ ಪಾಟೀಲ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ"** ಎಂಬುದಾಗಿ ನಾಮಕರಣ ಮಾಡಲು ಕೋರಿರುತ್ತಾರೆ ಎಂದು ತಿಳಿಸುತ್ತಾ, ಔರಾದ್ ಮಹಿಳಾ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣದ ಸಲುವಾಗಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವುದು ಸೂಕ್ತವಾಗಿರುತ್ತದೆ ಎಂದು ತಿಳಿಸುತ್ತಾ, ಕಟ್ಟಡ ನಿರ್ಮಾಣದ ನಂತರ **"ಶ್ರೀ ಚಂದ್ರಪ್ಪ ಪಾಟೀಲ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ"** ಎಂಬುದಾಗಿ ನಾಮಕರಣ ಮಾಡಲು ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 65 ಇಟಿಐ 2008 ಬೆಂಗಳೂರು, ದಿನಾಂಕ: 6ನೇ ಜೂನ್ 2009**

ಬೀದರ್ ಜಿಲ್ಲೆಯ ಔರಾದ್ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಔರಾದ್ ಪ್ರದೇಶದ ಸ್ಥಳೀಯರಾದ ಚಂದ್ರಪ್ಪ ಪಾಟೀಲ್ ಎಂಬುವವರು ತಮ್ಮ ಒಡೆತನದಲ್ಲಿರುವ ಸರ್ವೆ ನಂ.130(2) ಅ ರಲ್ಲಿ ಇರುವ 3 ಎಕರೆ ಜಮೀನನ್ನು ಕಟ್ಟಡ ನಿರ್ಮಾಣದ ಸಲುವಾಗಿ ದಾನವಾಗಿ ಕೊಟ್ಟಲ್ಲಿ, ಆ ಜಮೀನಿನಲ್ಲಿ ನೂತನ ಕಟ್ಟಡ ನಿರ್ಮಾಣವಾದ ನಂತರ ಔರಾದ್ ಮಹಿಳಾ ಕೈಗಾರಿಕಾ ತರಬೇತಿ ಸಂಸ್ಥೆಗೆ ಭೂಮಾಲೀಕರ ಜ್ಞಾಪಕಾರ್ಥವಾಗಿ **"ಶ್ರೀ ಚಂದ್ರಪ್ಪ ಪಾಟೀಲ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ"** ಎಂಬುದಾಗಿ ನಾಮಕರಣ ಮಾಡಲು ಈ ಕೆಳಕಂಡ 4 ಷರತ್ತುಗಳಿಗೆ ಒಳಪಟ್ಟು ಮಂಜೂರಾತಿಯನ್ನು ನೀಡಲಾಗಿದೆ.

1) ದಾನ ಸ್ವೀಕರಿಸಿದ ಸದರಿ ಕಟ್ಟಡ ಹಾಗೂ ಜಮೀನಿನ ಹಕ್ಕು ಪತ್ರ ಹಾಗೂ ದಾಖಲೆಗಳು ನ್ಯಾಯಬದ್ಧವಾಗಿರತಕ್ಕದ್ದು
2) ದಾನ ಸ್ವೀಕರಿಸಿದ ಸದರಿ ಕಟ್ಟಡ ಹಾಗೂ ಜಮೀನನ್ನು ನ್ಯಾಯಬದ್ಧವಾಗಿ ನೋಂದಣಿಯನ್ನು ದಾನ ಮಾಡುವವರೇ ಮಾಡಿಸತಕ್ಕದ್ದು.
3) ದಾನವಾಗಿ ಸ್ವೀಕರಿಸಿದ ಸದರಿ ಕಟ್ಟಡ ಹಾಗೂ ಜಮೀನನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ ಮತ್ತು
4) ಸದರಿ ಸಂಸ್ಥೆಗೆ ನಾಮಕರಣ ಮಾಡಲಿರುವ ಹೆಸರು ಸದರಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡಕ್ಕೆ ಮಾತ್ರ ಅನ್ವಯವಾಗುವುದೇ ವಿನ: ಉಳಿದ ಎಲ್ಲಾ ಪೂರ್ಣ ಹಕ್ಕು ಸರ್ಕಾರಕ್ಕೆ ಸೇರಿದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1551 **ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಲಾ 190ಎಲ್‌ಸಿಇ 2008, ಬೆಂಗಳೂರು, ದಿನಾಂಕ: 10ನೇ ಜೂನ್ 2009**

ಸರ್ಕಾರಿ ಆದೇಶದ ಸಂಖ್ಯೆ : ಲಾ 190 ಎಲ್‌ಸಿಇ 2008, ದಿನಾಂಕ 24.03.2009ರ ಆದೇಶ ಕಂಡಿಕೆ 2 ರಲ್ಲಿ ಲೆಕ್ಕ ಶೀರ್ಷಿಕೆ ಸಂಖ್ಯೆ : "2014–00–0–10 – ಸಿಬ್ಬಂದಿ ವೆಚ್ಚಗಳು ಯೋಜನೆ" ಎಂದು ನಮೂದಿಸಲಾಗಿರುವ ಪದಗಳ ಬದಲಾಗಿ "ಲೆಕ್ಕ ಶೀರ್ಷಿಕೆ ಸಂಖ್ಯೆ : 2014–00–105–0–10 ಸಿಬ್ಬಂದಿ ವೆಚ್ಚಗಳು (ಯೋಜನೆ) ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಪಿ.ಆರ್. 1552

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1) (ಪ್ರ)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ:** ಹೊಸಪೇಟೆ ಕಂದಾಯ ತಾಲ್ಲೂಕಿನ ನೋಟರಿ ನೇಮಕಾತಿ ಬಗ್ಗೆ (ಶ್ರೀ ಎಸ್. ಗುಂಡಯ್ಯ ರವರ ನಿಧನದಿಂದ ತೆರವು)

**ಓದಲಾಗಿದೆ:**
1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ರವರ ಪತ್ರ ಸಂಖ್ಯೆ : 3577/08 ಆಡಳಿತ ದಿನಾಂಕ : 04–07–08
2. ಸರ್ಕಾರಿ ಪತ್ರ ಸಂಖ್ಯೆ ಲಾ 12 ಎಲ್‌ಸಿಎಲ್ 2008 ದಿನಾಂಕ : 04–08–08
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರ ಪತ್ರ ಸಂಖ್ಯೆ 458/2009/ಆಡಳಿತ ದಿನಾಂಕ : 20/24/01/09

**ಪ್ರಸ್ತಾವನೆ:**

ಶ್ರೀ ಎಸ್. ಗುಂಡಯ್ಯ, ನೋಟರಿ, ಹೊಸಪೇಟೆ ರವರು ದಿನಾಂಕ 24–11–07 ರಂದು ನಿಧನರಾಗಿರುವುದಾಗಿ ಅವರ ಪತ್ನಿ ದಿನಾಂಕ 09–01–2008ರ ಮನವಿಯಲ್ಲಿ ತಿಳಿಸಿದಂತೆ, ಸದರಿ ಹುದ್ದೆ ಭರ್ತಿ ಅವಶ್ಯಕತೆ ಬಗ್ಗೆ ವರದಿ ಸಲ್ಲಿಸುವಂತೆ ಕೋರಲಾಗಿತ್ತು. ಅದರಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿರವರು ಮೇಲೆ ಓದಲಾದ (1)ರ ದಿನಾಂಕ:04–07–08ರ ಪತ್ರದಲ್ಲಿ ಹೊಸಪೇಟೆ ಕಂದಾಯ ತಾಲ್ಲೂಕಿಗೆ ಶ್ರೀ ಎಸ್.ಗುಂಡಯ್ಯರವರಿಂದ ಖಾಲಿಯಾಗಿರುವ ಹುದ್ದೆ ತುಂಬುವ ಅವಶ್ಯಕತೆ ಇರುವುದೆಂದು ತಿಳಿಸಿದ್ದರು. ಅದರಿಂದ ಸದರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿ ಅಧಿನಿಯಮ/ನಿಯಮಾನುಸಾರ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 04–08–08ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರನ್ನು ಕೋರಲಾಗಿತ್ತು.

ಅದರಂತೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 20/24/01/09ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಳ್ಳಾರಿ ಇವರು 23 ಮನವಿಗಳನ್ನೊಳಗೊಂಡ ಪ್ರಸ್ತಾವನೆಯನ್ನು ವರದಿಯೊಂದಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 12 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ: 6ನೇ ಜೂನ್ 2009**

ನೋಟರಿ ನಿಯಮಗಳ (1956)ರ ನಿಯಮ 8 (1) ರಲ್ಲಿ ಪದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯಾ ಶ್ರೀ ಕೆ. ರಘುನಾಥರಾವ್, ವಕೀಲರು, ಮಾಧವಪತಿ ಕಾಂಪೌಂಡ್, ಡಾ: ಅಮರೇಶ್ವರ ನರ್ಸಿಂಗ್ ಹೋಂ ಹಿಂಭಾಗ, ಪಟೇಲ್ ನಗರ, ಹೊಸಪೇಟೆ, ಬಳ್ಳಾರಿ ಜಿಲ್ಲೆ, ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹೊಪೇಟೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 2070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗಿದೆ. ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 1553

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನಾನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**URBAN DEVELOPMENT SECRETARIAT**

**Sub:** Continuation of Dr.H.S. Sudhira, as Land-use-and Transportation Specialist in the Directorate of Urban Land Transport – Reg.

**Read:**
1. G.O. No. UDD 134 BMR 2006, (1), BANGALORE, Dated 08-03-2007
2. G.O. No. UDD 03 CAR Bangalore Dated 02-06-2008
3. G.O. No. UDD 03 CAR Bangalore Dated 02-03-2009

**Preamble:**

The Govt. of Karnataka in its Govt. Order read at (1) has created the state Directorate of Urban Land Transport (DULT) under Urban Development Department. Their key objective of DULT is to ensure integration and c-ordination of land use planning and development of transport related infrastructure in Urban Area.

One of the key functions is to take up Comprehensive Traffic and Transporation Studies (CTTS) for six cities, excluding Bangalore. Thus the need for integrating land-use planning and transportation is seen as a major thrust and challenge for the DULT.

The team under the Commissioner, DULT is required to address the above mentioned critical areas on priority. It is noted that addressing these tasks and challenges requires the active role of specialists with multidisciplinary approaches. The specialists should have an understanding of the planning, technology for planning, land-use changes, planning with focus on mobility related aspects and capacity building competencies.

Sri Dr.H.S. Sudhira who has been a research scholar at the Centre for Sustainable Technologies and Department of Management Studies, Indian Institute of Science (IISC), Banalore for his doctoral research on **Urban Planning and Governance. An Engineer by training, he has specifically addressed urban sprawl in relation to transport and has studied the case of Bangalore.** He has also undertaken land-use change analysis for Bangalore using the land-use data for 1973, 1992, 2000 and 2006. **Earlier during 2006-2007, Sri Sudhira worked as an Intern with the Bangalore Mahanagara Palike** and prepared a report on “Enhancing Mobility Through Integrated Traffic and Transportation Plan” for Bangalore.

Dr. H.S. Sudhira has worked in DULT as Land use and Tansportation Specialist from 03-06-2008 up to November 2008 as per the Government Order No. UDD 03 CAR 2008 Bangalore, Dated:02.06.2008.

Further as per G.O. No. UDD 03 CAR Bangalore, Dated 02-03-2009 his services are utilized in DULT as Land Use and Transportation Specialist against the sanctioned vacant post of Transport Planner for a period of 3 months from 23-03-2009 and his period of contract expires on 22-06-2009.

Now DULT finds it necessary to utilize the services of Dr.H.S. Sudhira as Land Use and Transportation Specialist in DULT against the sanctioned vacant post of Traffic Engineer beyond 22-06-2009 with a consolidated pay of Rs.30,000-00 per month. This has a reference of an approval from Principal Secretary, UDD on the file No. **DULT 83 ADM 2008/2009-10 dated 05.06.2009.** Hence the following order.

**Government Order No. UDD 03 CAR 2009 Bangalore, Dated: 6th June 2009**

Government are pleased to accord sanction to utilize the services of Dr. H.S. Sudhira as Land use and Transportation Specialist – in the Directorate of Urban Land Transportation on Contract basis against the sanction vacant post of Traffic Engineer for a period of 6 months only from 23-06-2009. His services will be utilized in the following areas :

1. Preparation of integrated Transort and Land Use Master Plans for Bangalore and six Corporation cities.
2. Comprehensive Transport and Traffic Plan for six city corporations and other two tier cities

3. Capacity building – Academic and Educational Programmes
4. Communication and Public awareness activities, non motorized transport policy, skywalk policy, Abide and Exhibition Centre
5. Integration of Land Use and Transportation Planning Map browser Co-Oranizing BMLTA and its Sub-Committee and HLTF.
6. Any other work assigned by the Commissioner, DULT.

The services of Dr. H.S. Sudhira Land-use and Transportation Specialist, will be utilized for 6 months or until such time the Commissioner, DULT deems fit.

Dr. H.S. Sudhira would be paid a consolidated compensation of Rs.30,000/- per month.

By Order and in the name of the Governor of Karnataka,

**M.S. PREMACHANDRA**

Under Secreatary to Government,

Urban Development Department

P.R. 1554

**Sub:** Continuation of Sri B.N. Viswanath as Technical Advisor in Directorate of Urban Land Transport for a period of 6 months from 5.6.2009 (beyond June 2009)

**Read:**
1. Government Order No.UDD 134 BMR 2007 (1) BANGALORE, Dated 08.03.2007
2. Government Order No.UDD 01 CAR 2008 BANGALORE, Dated 28.02.2008
3. Government Order No. UDD 01 CAR 2008 BANGALORE, Dated 28.02.2009.

**Preamble:**

As per the recommendation for the National Working Group on Urban Transport for the 11$^{th}$ Plan and the guidelines of the National Urban Transport Policy, the Government of Karnataka in its Government Order read at (1) has created the State Directorate of Urban Land Transport (DULT) under the Urban Development Department. The key objective of the DULT is to ensure integration and co-ordination of land-use planning and development of transport related infrastructure in urban areas.

The functions of DULT has been defined in G.O. read at (1) with jurisdictions of seven Municipal Corporations in the State, viz., Bangalore, Mysore, Mangalore, Hubli-Dharwad, Belgaum, Gulbarga and Bellary. Accordingly, one of the key functions is to take up Comprehensive Traffic and Transportation Studies (CTTS) for six cities, excluding Bangalore. Thus the need for integrating land-use planning and transporation is seen as a major thrust and challenge for the DULT.

The team under the Commissioner, DULT is required to address the above mentioned critical areas on priority. It is noted that addressing theses tasks and challenges requires the active role of specialists with multidisciplinary approaches. The specialists should have an understanding of the planning, technology for planning, land-use changes, planning with focus on mobility related aspects and capacity building competencies.

Sri B.N. Viswanath, M.Tech, Indian Institute of Technology, Delhi earlier worked as the Executive Director in Karnataka Power Corporation Limited (KPCL) prior to his retirement and he was involved in the execution of major power projects in Karnataka. He has extensive experience in Project Management and Contract Management areas.

Sri B.N. Viswanath worked as Technical Advisor, JnNurm at Brhuat Bangalore Mahanagara Palike (BBMP) during 2007-08. He was actively involved in the preparation of Detailed Project Reports for Road and Road related Infrastructures, Storm Water Drains and Basic Services to Urban Poor. He has vast experience in laisoning with the consultants and during his tenure in BBMP, he had extensively interacted with MoUD for getting the DPRs reviewed before the same were swanctioned by Government of India.

As per GO No. Urban Development Department 01 CAR 2008 Bangalore dated 28-02-2008 Sri B.N.Viswanath has worked as Technical Advisor in Directorate of Urban Land Transport on contract

basis from 06-03-2008 for a period of one year (i.e. 05-03-2009). The services are utilized for a further period of 3 months from 06-03-2009 as per the GO No.UDD No.UDD 01 CAR 2008 BANGALORE, Dated 28-02-2009 under reference No.3.

Since the DULT has taken up number of project studies and also intends to initiated new schemes as per the NUTP guidelines, it finds essential to continue services f Sri B.N. Viswanath as Technical Advisor to a further period of 6 months on Contract basis from 06-03-2009. This has reference of approval from Principal Secretary, Urban Development Department, on file No.DULT 61/ADM/ 2007/2009-10, dated 04.06.2009. Hence the following order.

**Government Order No. UDD 01 CAR 2008, Bangalore, Dated: 4th June 2009**

Government are pleased to accord sanction to utilize the services of Sri B.N.Viswanath, Technical Advisor on Contract basis for an extension period of 6 months from 06-06-2009.

His services can be utilized in the following areas :

1. Contract Management (relating to Consultants)
   a) Floating of bids, Evaluation
   b) Fixing terms and conditions, award of work
   c) Monitoring of Projects
2. Project Management (relating to ULBs and parasatatal agencies)
   a) Intensive monitoring of certain high priority projects of agencies
   b) Deciding milestones of project and follow up with agencies involved
   c) Formatting new projects relating to traffic and transportation leading to convergence of work between different agencies, and lading to an integrated road net work
   d) Proposing projects under JNNURM
3. Compilation, Collation, updation and maintenance of transport network data
   a) Road network planning
   b) Identifying critical interventions required for improvement of traffic like improving geometrics, construction of grade separators, bridges or tunnels etc.,
   c) Putting out information for general public on the website.
4. Interacting with BBMP, BDA, BMRDA, BMTC, Banalore Airport, RTA, Traffic Police, Bangalore Metro Rail Corporation Ltd., etc.,
   a) Follow up action to be taken on the BMLTA and HLTF etc.,
5. Any other work assigned by the Commissioner, Directorate of Urban Land Transport.

The services of Sri B.N.Viswanath, Technical Advisor, will be utilized until such time the Commissioner, DULT deems fit.

In the extended period of six months, Sri B.N.Viswanath would be paid a consolidated compensation of Rs. 35,000-00 per month.

By Order and in the name of the Governor of Karnataka,

**M.S. PREMACHANDRA**

P.R. 1555

Under Secreatary to Government,
Urban Development Department

**Sub:** Financial assistance towards payment of consultancy assignment from Megacity Fund of Rs. 25 lakhs – Refunding the same to KUIDFC.

**Ref:**
1. D.O No.DULT/95/ADM/2008 dated 23.01.2009
2. Proceedings of 22nd SLSC meeting held on 12.02.2009 (Subject No.07)
3. KUIDFC/MCS/DULT/2008-09, dated 16-03-2009
4. Approval by Princiapl Secretary, UDD, on file No.DULT/170/ADM/2009 Dated:01.06.2009

**Preamble:**

DULT had requested the KUIDFC under Ref (1), to sanction an interest free loan of Rs.100 lakhs to enable DULT to make payment for the services rendered by the various consultants in connection with the following five assignments :

a) Preparation of Policy paper for Parking in Bangalore Metropolitan Region
b) Preparation of Policy paper for Pedestrian Policy in Banalore Metropolitan Region
c) Package-2 : Enhancing Traffic, Flow and Easing Congestion
d) Package 6: Preparation of Bangalore Mobility Indicators – 2008
e) Package -1 – Better Access to Majestic Area

In the 22nd SLSC meeting under Megacity Scheme held on 12-02-2009 under the Chairmanship Additional Chief Secretary at Room No.331, Vidhana Soudha, the Committee pleased to approve to rerlease Rs.25 lakhs of Megacity Fund to DULT for the payment of the above said 5 schemes. Accordingly the KUIDF has forwarded a Cheque bearing No. 076351, dated 16-03-3009 for Rs.25 Lakhs drawn on Vijaya Bank, Indiranagar Branch, to DULT under ref (3) above, with the condition that it should be refunded back to Megacity fund immediately on receipt of Central Financial Assistance and the State Budgetary Support by DULT. The above fund received is utilized for the initial payment of the above said 5 scheme.

DULT has received State Budgetary Support of Rs.500.02 Lakhs for the Financial Year 2009-10, under the head of Account 2217-80-800-0-23 and also Rs.6,07,200 from the MoUD (UT) Govt. of India, New Delhi, as Central Financial Assistance for initial payment of above 5 schemes at 10% of 80% (CFA) of the total cost of the above 5 schemes.

Now the DULT has to pay the above Megacity fund to KUIDFC. Hence the following order.

**Government Order No. UDD 142 BMR 2009 Bangalore, Dated: 8th June 2009**

Under the circumstances as explained above the Government are pleased to approve to refund to KUIDFC the Megacity Fund of Rs.25 Lakhs, obtained by DULT, from KUIDFC for making initial payment to the Consultants in connection with the following 5 assignments.

a. Preparation of Policy paper for Parking in Bangalore Metropolitan Region
b. Preparation of Policy for Pedestrian Policy in Bangalore Metropolitan Region
c. Package -2: Enhaning Traffic, Flow and Easing Congestion
d. Package – 6: Preparation of Bangalore Mobility indicators – 2008
e. Package -1 : Better Access to Majestic Area.

By Order and in the name of the Governor of Karnataka,

**M.S. PREMACHANDRA**

Under Secretaray to Government,

Urban Development Department

P.R. 1556

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ ಮತ್ತಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಕೋಲಾರ ಜಿಲ್ಲಾಧಿಕಾರಿಯವರ ಪತ್ರ ಸಂ.ಸಿಸಿಎ:ಸಿಆರ್:11:2004–05 ದಿನಾಂಕ: 07–01–2005
2. ಶ್ರೀ ದಾದರಾವ್, ತಹಶೀಲ್ದಾರ್ ಮತ್ತು ಇತರ ನೌಕರರಿಗೆ ನೀಡಿರುವ ತಿಳುವಳಿಕೆ ಪತ್ರ ಸಂ ಸಂ;ಕಂಇ44 ಎಡಿಇ 04, ದಿನಾಂಕ : 07–03–2005
3. ಅಧಿಕಾರಿ/ನೌಕರರರು ನೀಡಿರುವ ಲಿಖಿತ ಹೇಳಿಕೆ :
   ಅ) ಶ್ರೀ ದಾದರಾವ್, ತಹಶೀಲ್ದಾರ್, ದಿನಾಂಕ : 11–10–2002
   ಆ) ಶ್ರೀ ಎಂ.ಎನ್. ಸತೀಶ್ ಕುಮಾರ್, ಗ್ರಾಮಲೆಕ್ಕಿಗ, ದಿನಾಂಕ: 02–05–2005
   ಇ) ಶ್ರೀ ಕೆ.ವಿ. ಚಂಗಲರಾಯಪ್ಪ, ಪ್ರ..ದ.ಸ., ದಿನಾಂಕ: 12–05–2005
   ಈ) ಶ್ರೀ ಶ್ರೀನಿವಾಸ್, ಶಿರಸ್ತೇದಾರ್, ದಿನಾಂಕ: –05–2005
   ಉ) ಶ್ರೀ ಗಂಗಯ್ಯ, ಪ್ರ.ದ.ಸ., ದಿನಾಂಕ: 13–05–2005
   ಊ) ಶ್ರೀ ಎ. ಶಿವರಾಜು, ಬೆರಳಚ್ಚುಗಾರರು, ದಿನಾಂಕ: 30–04–2005

4. ಸರ್ಕಾರದ ಆದೇಶ ಸಂ: ಆರ್‌ಡಿ 44 ಎಡಿಇ 2004, ದಿನಾಂಕ: 08–08=2005
5 ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ಜಿಲ್ಲಾ ಸತ್ರ ನ್ಯಾಯಾಧೀಶರು, ಬೆಂಗಳೂರು, ಇವರ ವಿಚಾರಣಾ ವರದಿ, ದಿನಾಂಕ: 27–06–2006
6 ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ : 02–11–2006
7 ಎರಡನೇ ಕಾರಣ ಕೇಳುವ ನೋಟೀಸಿಗೆ ಅಧಿಕಾರಿ/ನೌಕರರು ನೀಡಿರುವ ಲಿಖಿತ ಹೇಳಿಕೆ:
ಅ) ಶ್ರೀ ದಾದರಾವ್, ತಹಶೀಲ್ದಾರ್, ದಿ: 23–11–2006
ಆ) ಶ್ರೀ ಗಂಗಯ್ಯ, ಪ್ರ.ದ.ಸ. ದಿನಾಂಕ: 08–12–2006
ಇ) ಶ್ರೀ ಶ್ರೀನಿವಾಸ್, ನಿವೃತ್ತ ಶಿರಸ್ತೇದಾರ್, ದಿ: 28–11–2006
8 ಸರ್ಕಾರದ ಆದೇಶ ಸಂ. ಆರ್‌ಡಿ 44 ಎಡಿಇ 2004, ದಿನಾಂಕ : 28–03–2007
9 ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಇವರ ಪತ್ರ ಸಂ. ಪಿಎಸ್‌ಸಿ 226 ಸಿಎನ್‌ಎಸ್ 2006, ದಿನಾಂಕ: 20–02–2009

**ಪ್ರಸ್ತಾವನೆ :**

ಕೋಲಾರ ತಾಲ್ಲೂಕು, ಸುಗಟೂರು ಹೋಬಳಿ, ಕೆಂಬತ್ತನಹಳ್ಳಿ ಗ್ರಾಮ ಸರ್ಕಾರಿ ಖರಾಬು ಜಮೀನು 8 ರಲ್ಲಿ ಶ್ರೀಮತಿ ಮುನಿಯಮ್ಮ ಕೋಂ ಕೆ.ಜಿ.ಭೈರೇಗೌಡ ಇವರಿಗೆ ನಿಯಮಬಾಹಿರವಾಗಿ ಅನಧಿಕೃತ ಸಾಗುವಳಿ ಸಕ್ರಮೀಕರಣ ಯೋಜನೆಯಡಿ 4 ಎಕರೆ ಜಮೀನನ್ನು ಸಕ್ರಮೀಕರಣಗೊಳಿಸಲು ಸಹಕರಿಸಿ ಕರ್ತವ್ಯಲೋಪ ಎಸಗಿದ ಕೋಲಾರ ತಾಲ್ಲೂಕಿನ ಹಿಂದಿನ ತಹಶೀಲ್ದಾರ್‌ರಾದ ಶ್ರೀ ದಾದರಾವ್ ಹಾಗೂ ಇನ್ನಿತರ 5 ಮಂದಿ ಸಿಬ್ಬಂದಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಇವರುಗಳ ವಿರುದ್ಧ ಕರಡು ದೋಷಾರೋಪಣೆಗಳನ್ನು ತಯಾರಿಸಿ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ:07.01.2005ರ ಪತ್ರದಲ್ಲಿ ಕೋಲಾರ ಜಿಲ್ಲಾಧಿಕಾರಿಯವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರಡಿಯಲ್ಲಿ ದೋಷಾರೋಪಣೆಗಳನ್ನು (ಅನುಬಂಧ 1 ರಿಂದ 4ರವರೆಗೆ) ಆರೋಪಿತ ಅಧಿಕಾರಿ/ನೌಕರರುಗಳಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ದಿನಾಂಕ: 07–03–2005ರ ನೋಟೀಸು ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು.

ಆಪಾದಿತ ಅಧಿಕಾರಿ/ನೌಕರರಲ್ಲಿ ಮೇಲೆ ಓದಲಾದ ಕ್ರ.ಸಂ. (3) ರಲ್ಲಿ ಹೇಳಲಾಗಿರುವ ಆರೋಪಿತ ಅಧಿಕಾರಿ/ನೌಕರರಾದ ಶ್ರೀ ದಾದರಾವ್, ಶ್ರೀ ಎಂ.ಎನ್. ಸತೀಶ್ ಕುಮಾರ ಮತ್ತು ಶ್ರೀ ಕೆ.ವಿ. ಚಂಗಲರಾಯಪ್ಪ ರವರುಗಳು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿ, ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಉಳಿದ ನೌಕರರು ಈಗಾಗಲೇ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಕಾರಣ ಕೇಳುವ ನೋಟೀಸಿನಲ್ಲಿ ತಿಳಿಸಿರುವಂತೆ, ನಿಗದಿಪಡಿಸಿದ ಅವಧಿಯೊಳಗೆ ಲಿಖಿತ ಸಮಜಾಯಿಷಿ ನೀಡದಿದ್ದಲ್ಲಿ, ಅವರ ಪ್ರತಿವಾದವೇನು ಇಲ್ಲವೆಂದು ಭಾವಿಸಿ, ಏಕಪಕ್ಷೀಯವಾಗಿ ಕ್ರಮ ಜರುಗಿಸಬಹುದಾಗಿರುವುದರಿಂದ ಸರ್ಕಾರವು ಆರೋಪಿತರ ವಿರುದ್ಧದ ಆರೋಪಗಳನ್ನು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿ, ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸುವುದು ಸೂಕ್ತವೆಂದು ತೀರ್ಮಾನಿಸಿ ಮೇಲೆ ಓದಲಾದ ಕ್ರ. ಸಂ. (4) ರ ದಿನಾಂಕ: 08–08–2005ರಲ್ಲಿ ಶ್ರೀ ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೋಲಾರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಿ, ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ: 27–06–2006ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಈ ಕೆಳಕಂಡಂತೆ ಅಧಿಕಾರಿ/ನೌಕರರ ವಿರುದ್ಧ ಆರೋಪಗಳ ಕುರಿತು ನಿರ್ಣಯಿಸಿರುತ್ತಾರೆ.

1) ಶ್ರೀ ದಾದರಾವ್, ಹಿಂದಿನ ತಹಶೀಲ್ದಾರ್, ಕೋಲಾರ – ಆರೋಪ ಸಾಬೀತಾಗಿರುತ್ತದೆ.
2) ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್, ಕೋಲಾರ – ಆರೋಪ ಸಾಬೀತಾಗಿರುತ್ತದೆ
3) ಶ್ರೀ ಗಂಗಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು – ಆರೋಪ ಸಾಬೀತಾಗಿರುತ್ತದೆ
4) ಶ್ರೀ ಎ. ಶಿವರಾಜ್, ಹಿಂದಿನ ಬೆರಳಚ್ಚುಗಾರರು – ಆರೋಪ ಸಾಬೀತಾಗಿರುತ್ತದೆ
5) ಶ್ರೀ ಎಂ. ಎನ್. ಸತೀಶ್, ಹಿಂದಿನ ಗ್ರಾಮಲೆಕ್ಕಿಗ – ಆರೋಪ ಸಾಬೀತಾಗಿರುವುದಿಲ್ಲ
6) ಶ್ರೀ ಕೆ.ವಿ. ಚಂಗಲರಾಯಪ್ಪ, ಹಿಂದಿನ ಪ್ರ.ದ.ಸ. – ಆರೋಪ ಸಾಬೀತಾಗಿರುವುದಿಲ್ಲ

ಮೇಲ್ಕಂಡ ವಿಚಾರಣಾ ವರದಿಯಂತೆ, ಕ್ರ.ಸಂ. (1) ರಿಂದ 4 ರವರೆಗೆ ಅಧಿಕಾರಿ/ನೌಕರರ ವಿರುದ್ಧ ಆರೋಪಗಳು ಸಾಬೀತಾಗಿದ್ದರಿಂದ, ಅವರುಗಳಿಗೆ ಮೇಲೆ ಓದಲಾದ ಕ್ರ.ಸಂ. (6) ದಿನಾಂಕ: 02–11–2006 ರಲ್ಲಿ 2ನೇ ಕಾರಣ ಕೇಳುವ

ನೋಟೀಸನ್ನು ವಿಚಾರಣಾ ವರದಿಯೊಂದಿಗೆ ಜಾರಿ ಮಾಡಲಾಗಿತ್ತು. ಈ ಮಧ್ಯೆ ವಿಚಾರಣಾ ವರದಿಯಲ್ಲಿ, ಆರೋಪಗಳು ಸಾಬೀತಾಗಿಲ್ಲದ ಕಾರಣ, ಶ್ರೀ ಎಂ.ಎನ್. ಸತೀಶ್, ಹಿಂದಿನ ಗ್ರಾಮಲೆಕ್ಕಿಗರು ಹಾಗೂ ಶ್ರೀ ಕೆ.ವಿ. ಚಂಗಲರಾಯಪ್ಪ, ಹಿಂದಿನ ಪ್ರ.ದ.ಸ. ಇವರುಗಳನ್ನು ಮೇಲೆ ಓದಲಾದ ಕ್ರ.ಸಂ. (8)ರ ದಿನಾಂಕ:28–03–2007ರಲ್ಲಿ ಆರೋಪಗಳಿಂದ ದೋಷಮುಕ್ತರನ್ನಾಗಿ ಆದೇಶ ಹೊರಡಿಸಲಾಗಿರುತ್ತದೆ. ಮುಂದುವರೆದು, ಸರ್ಕಾರ ಎರಡನೇ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರ.ಸಂ. (7)ರನ್ವಯ ಅಧಿಕಾರಿ/ನೌಕರರು ಈ ಕೆಳಕಂಡಂತೆ, ತಮ್ಮ ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸಿರುತ್ತಾರೆ.

**1) ಶ್ರೀ ದಾದಾರಾವ್, ಹಿಂದಿನ ತಹಶೀಲ್ದಾರ್, ಕೋಲಾರ :**

"ಸಕ್ರಮೀಕರಣ ಸಮಿತಿಯ ಸಭೆಯಲ್ಲಿ ಏಕೆ ಕಾಲಕ್ಕೆ ಸುಮಾರು ನೂರೈವತ್ತರಿಂದ ಇನ್ನೂರು ನಮೂನೆ 53ರ ಅರ್ಜಿಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಬೇಕಾಗಿರುವುದರಿಂದ ಪ್ರತಿ ಅರ್ಜಿಯನ್ನು ಸಹ ಕೂಲಂಕುಷವಾಗಿ ಪರಿಶೀಲಿಸುವ ಜವಾಬ್ದಾರಿಯನ್ನು ಸಂಬಂಧಪಟ್ಟ ರಾಜಸ್ವ ನಿರೀಕ್ಷಕರು, ಶಿರಸ್ತೇದಾರರು ಹಾಗೂ ವಿಷಯ ನಿರ್ವಾಹಕರ ಜವಾಬ್ದಾರಿಯೂ ಸಹ ಆಗಿರುತ್ತದೆ. ಈ ತರಹದ ಲೋಪ ದೋಷಗಳ ಬಗ್ಗೆ ನನ್ನನ್ನು ಹೊಣೆಗಾರನನ್ನಾಗಿ ಮಾಡುವುದು ಸರಿಯಿಲ್ಲವೆಂದು ಭಾವಿಸಲು ಕೋರಿದೆ. ನನ್ನ ಮೇಲೆ ಎಸಗಿರುವ ಆಪಾದನೆ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ತೋರಿಸಿರುವ ಆಪಾದನೆಗಳನ್ನು ಆಧಾರ ರಹಿತವೆಂದು ಪರಿಗಣಿಸಿ ನನ್ನ ವಿರುದ್ಧ ಹೂಡಲಾದ ಆಪಾದನೆಗಳನ್ನು ತಳ್ಳಿಹಾಕಿ ನನ್ನನ್ನು ದೋಷ ಮುಕ್ತನಾಗಿ ಮಾಡಲು ಈ ಮೂಲಕ ವಿನಂತಿಸಿಕೊಂಡಿರುತ್ತೇನೆ."

**2) ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್ :**

"ವಿಸ್ತೀರ್ಣಕ್ಕೆ ಸಂಬಂಧಿಸಿದಂತೆ ಮೋಜಣಿದಾರರು ತಪ್ಪಿತಸ್ತರಾಗಿದ್ದು, ಇವರನ್ನು ಕೈ ಬಿಟ್ಟು ವಿಚಾರಣೆ ಮಾಡಿರುವುದು ಸರಿಯಾದ ಕ್ರಮವಾಗಿರುವುದಿಲ್ಲ. ಆದ್ದರಿಂದ ವಿಚಾರಣೆಯಲ್ಲಿ ನನ್ನನ್ನು ದೋಷಮುಕ್ತಗೊಳಿಸಲು ಕೋರುತ್ತೇನೆ. ಅಥವಾ ಬೇರೆಯವರಿಂದ ನ್ಯಾಯಯುಕ್ತ ವಿಚಾರಣೆ ಮಾಡಲು ತಮ್ಮಲ್ಲಿ ಕೋರುತ್ತೇನೆ".

**3) ಶ್ರೀ ಗಂಗಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು :**

"ಆರೋಪದಲ್ಲಿನ ಅಂಶಗಳಲ್ಲಿ ಯಾವುದೇ ತಪ್ಪನ್ನು ಎಸಗಿಲ್ಲವೆಂದು ನಿವೇದಿಸುತ್ತಾ ಆರೋಪದಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ".

**4) ಶ್ರೀ ಎ. ಶಿವರಾಜ್, ಹಿಂದಿನ ಬೆರಳಚ್ಚುಗಾರರು :**

"ನಾನು ಒಬ್ಬ ಬೆರಳಚ್ಚುಗಾರನಾಗಿದ್ದರೂ ಕೂಡ, ನನ್ನ ಮೇಲಾಧಿಕಾರಿಗಳೂ ಸರ್ಕಾರದ/ಸಾರ್ವಜನಿಕ ಕೆಲಸದ ಹಿತದೃಷ್ಟಿಯಿಂದ, ಬೆರಳಚ್ಚು ಕೆಲಸ ಜೊತೆ, ಕೆಲಸದ ಒತ್ತಡವಿರುವ ಬೇರೆ ಕೆಲಸವನ್ನು ನನಗೆ ಮೌಖಿಕ ಆದೇಶಾನುಸಾರ ವಹಿಸುತ್ತಿದ್ದರು. ಆದುದರಿಂದ ನಿಷ್ಠೆಯಂತೆ ಕರ್ತವ್ಯ ನಿರ್ವಹಿಸಿರುತ್ತೇನೆ. ಅದರಲ್ಲಿ ಆಗಿರುವುದೆಂದು ಹೇಳಲಾದ ಅಕ್ರಮಗಳಿಗೆ ನಾನು ಹೊಣೆಗಾರನಲ್ಲ. ನನ್ನ ಮೇಲಾಧಿಕಾರಿಗಳ ಆದೇಶ ಪಾಲಿಸಿರುವುದಕ್ಕೆ ನನಗೆ ದಂಡನೆ ವಿಧಿಸುವುದು ಸರಿಯಲ್ಲ. ನಾನು ಸರ್ಕಾರದ ಕೆಲಸವನ್ನು ನಿಷ್ಠೆಯಿಂದ ಮಾಡಿದ್ದಕ್ಕೆ ನನ್ನನ್ನು ದೋಷಿಯೆಂದು ತೀರ್ಮಾನಿಸಿ ದಂಡನೆ ವಿಧಿಸುವುದು ಸೂಕ್ತವಲ್ಲ. ದಯವಿಟ್ಟು ಇದರಲ್ಲಿ ನನ್ನ ತಪ್ಪೇನಿಲ್ಲವೆಂದು ಪರಿಗಣಿಸಿ ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ".

ಮೇಲ್ಕಂಡ ಲಿಖಿತ ಸಮಜಾಯಿಷಿಗಳನ್ನು ಸರ್ಕಾರವು ಪರಿಶೀಲಿಸಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ತಹಶೀಲ್ದಾರ್, ಶಿರಸ್ತೇದಾರ್, ಕಂದಾಯ ನಿರೀಕ್ಷಕರು ಹಾಗೂ ಬೆರಳಚ್ಚುಗಾರರು ಒಟ್ಟಿಗೆ ಸೇರಿ ಕಾನೂನಿಗೆ ವಿರುದ್ಧವಾಗಿ, ಕರ್ನಾಟಕ ಭೂ ಮಂಜೂರಾತಿಗೆ ವಿರುದ್ಧವಾಗಿ 4 ಎಕರೆ ಸರ್ಕಾರೀ ಜಮೀನನ್ನು, ಖೊಟಾ ದಾಖಲೆಗಳನ್ನು ಸೃಷ್ಟಿಸಿ, ಭೈ ಮಂಜೂರಾತಿ ಮಾಡಿದ್ದರೆಂದು, ನಿರ್ಣಯಿಸಿ, ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ನು ಒಪ್ಪಿ, ಮೇಲ್ಕಂಡ ಕ್ರ. ಸಂ. (1) ರಿಂದ (4) ರ ವರೆಗಿನ ಅಧಿಕಾರಿ/ನೌಕರರ ವಿರುದ್ಧ ಕಠಿಣ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುತ್ತದೆ. ಅದರಂತೆ, ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿ, ಆಯೋಗದವರು ಮೇಲೆ ಓದಲಾದ ಕ್ರ.ಸಂ. (9)ರ 20.02.2009ರಲ್ಲಿ " ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲದ ಕಾರಣದಿಂದ ಮತ್ತು ತಪ್ಪು ಗ್ರಹಿಕೆಯಿಂದ ಮಂಜೂರಾಗಿರುವ ಸರ್ಕಾರಿ ಭೂಮಿಯನ್ನು ಹಿಂದಕ್ಕೆ ಪಡೆಯಲು ಎಲ್ಲಾ ಕ್ರಮಗಳನ್ನು ತಹಶೀಲ್ದಾರ್‌ರವರು ತೆಗೆದುಕೊಂಡಿರುತ್ತಾರೆ. ತಹಶೀಲ್ದಾರರು ಮತ್ತು ಇತರೆ ಸಿಬ್ಬಂದಿ ವರ್ಗದವರಿಗೆ ಸಿಪಿಎ ನಿಯಮಗಳಡಿ ಸರ್ಕಾರ ವಿಧಿಸುವ ದಂಡ ಆಪಾದಿತ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಎಸಗಿರುವ ದುಷ್ಕೃತ್ಯಕ್ಕೆ ಸಮರ್ಪಕವಾಗಿರುವಂತಹದ್ದಾಗಿರ ಬೇಕಾಗಿರುತ್ತದೆ (Appropriate). ಆದರೆ ಈ ಪ್ರಕರಣದಲ್ಲಿನ ಆಪಾದಿತ ಅಧಿಕಾರಿ ಮತ್ತು ಸಿಬ್ಬಂದಿಗಳು ಎಸಗಿರುವ ಕೃತ್ಯವು ಅವರುಗಳನ್ನು ಸೇವೆಯಿಂದಲೇ ತೆಗೆದುಹಾಕಬಹುದಾದಂತಹ ಕಠಿಣ ದಂಡನೆ ವಿಧಿಸಬಹುದಾದ ತೀವ್ರತೆ ಹೊಂದಿಲ್ಲವಾದ್ದರಿಂದ ಪ್ರಕರಣದಲ್ಲಿ ಶ್ರೀ ದಾದಾರಾವ್, ತಹಶೀಲ್ದಾರ್ ಮತ್ತು ಇತರೆ ಸಿಬ್ಬಂದಿ ವರ್ಗದವರಿಗೆ ಸಿಸಿಎ 8 (ii) ರಿಂದ 8 (iv-ಎ) ರಲ್ಲಿನ ಯಾವುದಾದರೂ ಒಂದು "ಲಘು ದಂಡನೆ" ವಿಧಿಸುವುದು ಸೂಕ್ತವೆಂದು ಆಯೋಗ ಅಭಿಪ್ರಾಯಪಡುತ್ತದೆ.

ಹಾಗೆಯೇ ಪ್ರಕರಣದಲ್ಲಿ ಆಪಾದಿತರಲ್ಲೊಬ್ಬರಾದ ಶ್ರೀ ಶ್ರೀನಿವಾಸ್, ಶಿರಸ್ತೇದಾರ್ ಇವರು ಸೇವೆಯಿಂದ ನಿವೃತ್ತರಾಗಿರುವುದರಿಂದ ಇವರೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಂತೆ ದಂಡನೆ ವಿಧಿಸಬೇಕಾಗಿರುತ್ತದೆ. ಲೋಕಸೇವಾ ಆಯೋಗವು ನೀಡಿರುವ ಸಹಮತಿಯನ್ವಯ ಸರ್ಕಾರವು ಪರಿಶೀಲಿಸಿ, ಈ ಪ್ರಕರಣದಲ್ಲಿ ಭಾಗಿಯಾಗಿರುವ ಅಧಿಕಾರಿ/ನೌಕರರ ವಿರುದ್ಧ ಈ ಕೆಳಕಂಡಂತೆ, ದಂಡನೆ ವಿಧಿಸಲು ನಿರ್ಧರಿಸಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ. ಆರ್‌ಡಿ 44 ಎಡಿಇ 2004, ಬೆಂಗಳೂರು, ದಿನಾಂಕ: 1ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಪ್ರಸ್ತುತ ಪ್ರಕರಣದಲ್ಲಿ ಭಾಗಿಯಾಗಿರುವ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (ii) ರಿಂದ 8 (iv)ರನ್ವಯ ದಂಡನೆಯನ್ನು ವಿಧಿಸಿ ಆದೇಶಿಸಿದೆ.

1) ಶೀ ದಾದಾರಾವ್, ಹಿಂದಿನ ತಹಶೀಲ್ದಾರ್, ಕೋಲಾರ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಟಿ.ಎಫ್, ಬೆಂಗಳೂರು – ಇವರಿಗೆ ವಾಗ್ದಂಡನೆ.
2) ಶ್ರೀ ಗಂಗಯ್ಯ, ಹಿಂದಿನ ಕಂದಾಯ ನಿರೀಕ್ಷಕರು – ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮ ಬೀರದಂತೆ ಒಂದು ವರ್ಷದವರೆಗೆ ತಡೆಹಿಡಿಯುವ ದಂಡನೆ
3) ಶ್ರೀ ಎ. ಶಿವರಾಜ್, ಹಿಂದಿನ ಬೆರಳಚ್ಚುಗಾರರು – ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮ ಬೀರದಂತೆ ಒಂದು ವರ್ಷದವರೆಗೆ ತಡೆಹಿಡಿಯುವ ದಂಡನೆ.
4) ಶ್ರೀ ಶ್ರೀನಿವಾಸ್, ಹಿಂದಿನ ಶಿರಸ್ತೇದಾರ್ – ಇವರು ಈಗಾಗಲೇ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಇವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214 ರಡಿಯಲ್ಲಿ ದಂಡನೆ ವಿಧಿಸಲು ಪ್ರತ್ಯೇಕವಾಗಿ ಕ್ರಮಕೈಗೊಳ್ಳಲಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1557 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು –3)

**ವಿಷಯ:** ಶ್ರೀ ಟಿ.ವಿ. ಪ್ರಕಾಶ್, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್ , ಹರಪನಹಳ್ಳಿ ತಾಲ್ಲೂಕು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ. ಕಂಇ 110 ಎಎಸ್‌ಡಿ 2006, ದಿನಾಂಕ: 22–06–2006
2. ಶ್ರೀ ಟಿ.ವಿ. ಪ್ರಕಾಶ್, ಇವರ ಮನವಿ ದಿನಾಂಕ: 13–12–2006

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1), ದಿನಾಂಕ 22–06–2006ರ ಅಧಿಸೂಚನೆಯಲ್ಲಿ, ಶ್ರೀ ಟಿ.ವಿ. ಪ್ರಕಾಶ್ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ ಸೇರುವ ಪೂರ್ವದಲ್ಲಿ ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರಿನಲ್ಲಿ ಪ್ರೊಬೇಷನರಿ ಪಿ.ಎಸ್.ಐ. ಆಗಿ ದಿನಾಂಕ: 01–09–2005 ರಿಂದ 05–07–2006ರ ರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ನಿರ್ದೇಶಕರು, ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಇವರ ಜ್ಞಾಪನ ಪತ್ರ ಸಂ: ತರಬೇತಿ/06/2005–06 ದಿನಾಂಕ:5.7.2006 ರನ್ವಯ ಪೊಲೀಸ್ ಇಲಾಖೆಯಿಂದ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಸದರಿಯವರು ಪೊಲೀಸ್ ಇಲಾಖೆಯಲ್ಲಿ ದಿನಾಂಕ: 01–09–2005 ರಿಂದ 05–07–2006 ರ ವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಟಿ.ವಿ. ಪ್ರಕಾಶ್ ಇವರ ಮನವಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಸದರಿಯವರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಪೊಲೀಸ್ ಇಲಾಖೆಯಲ್ಲಿ ಪ್ರೊಬೇಷನರಿ ಪಿ.ಎಸ್.ಐ. ಆಗಿ ಸಲ್ಲಿಸಿದ್ದ ದಿನಾಂಕ: 01–09–2005 ರಿಂದ 05–07–2006ರ ವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224 (ಎ) ರೀತ್ಯಾ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಆರ್‌ಡಿ 40 ಎಎಸ್‌ಡಿ 2007, ಬೆಂಗಳೂರು, ದಿನಾಂಕ: 2ನೇ ಜೂನ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಟಿ.ವಿ. ಪ್ರಕಾಶ್, ತಹಶೀಲ್ದಾರ್, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ, ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಪೊಲೀಸ್ ಇಲಾಖೆಯಲ್ಲಿ ಪ್ರೊಬೇಷನರಿ ಪಿ.ಎಸ್.ಐ. ಆಗಿ ದಿನಾಂಕ 01–09–2005 ರಿಂದ 05–07–2006 ರ ವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224 (ಎ) ರೀತ್ಯಾ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ.ಆಇ 111 ವೆಚ್ಚ–7/2009 ದಿನಾಂಕ:17/04/2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1558 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) (ನಿವೃತ್ತಿ) ಅವರ ವಿರುದ್ಧ ಇಲಾಖಾ ವಿಚಾರಣೆ – ಆರೋಪ ಮುಕ್ತರನ್ನಾಗಿ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**
1. ನೋಟೀಸ್ ಸಂ. ಕಂಇ 26 ಭೂದಾಸೇ (1) 2001 ದಿ: 22–09–2001
2. ಶ್ರೀ ವಿ. ಪ್ರಸನ್ನಕುಮಾರ್, ಭೂ.ಉ.ನಿ. ಅವರ ದಿ: 31–12–2001 ರ ಲಿಖಿತ ಹೇಳಿಕೆ
3 ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) ರವರ ದಿ: 5–11–2001ರ ಲಿಖಿತ ಹೇಳಿಕೆ.
4 ಸರ್ಕಾರದ ಆದೇಶ ಸಂ. ಕಂಇ 26 ಭೂದಾಸೇ (1) 2001 ದಿನಾಂಕ 21–09–2007
5 ಶ್ರೀ ಸೋಸಲೆ ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ದಿನಾಂಕ: 04–03–2009ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂತ್ರಿಕ) (ನಿವೃತ್ತಿ) ರವರು ಈ ಹಿಂದೆ ದಿನಾಂಕ: 8–6–95 ರಿಂದ 11–7–2000ರವರೆಗೆ ಕ್ರಮವಾಗಿ ಭೂದಾಖಲೆಗಳ ಉಪ ನಿರ್ದೇಶಕರು ಮಂಗಳೂರು ವಿಭಾಗ, ಮಂಗಳೂರು ಹಾಗೂ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಮಡಿಕೇರಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮಡಿಕೇರಿ ತಾಲ್ಲೂಕು, ಬಾಗಮಂಡಲ ಹೋಬಳಿ, ಬೆಟ್ಟತ್ತೂರು ಗ್ರಾಮದ ಸ.ನಂ.1/24ಎ ಮತ್ತು 1/21ಬಿ ಇವುಗಳ ಗ್ರಾಮ ನಕಾಶೆಯಲ್ಲಿ ತಪ್ಪಾಗಿ ಪ್ಲಾಟ್ ಮಾಡಿ ಅದನ್ನಾಧರಿಸಿ ಮರ ಕಡಿತಲೆ ಮಾಡಲು ಜಂಟಿ ಅಳತೆ ನಕ್ಷೆಗೆ ಸಹಿ ಮಾಡಿ ಅರ್ಜಿದಾರರಿಗೆ ಅನುಕೂಲ ಮಾಡಿಕೊಡುವ ಉದ್ದೇಶ ಹೊಂದಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ–3(i) ಹಾಗೂ (iii)ನ್ನು ಉಲ್ಲಂಘಿಸಿದ ಆರೋಪಗಳಿಗಾಗಿ ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು, ಭೂಮಾಪನ ಇಲಾಖೆ, ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು(ತಾಂ) (ನಿವೃತ್ತಿ) ಇವರುಗಳು ಮೇಲೆ (1) ರಲ್ಲಿ ಓದಲಾದ ದಿನಾಂಕ:22.9.2001 ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ಮತ್ತು (3) ರಲ್ಲಿ ಓದಲಾದ ದಿನಾಂಕ: 31–12–2001 ಹಾಗೂ 5–11–2001 ರ ಲಿಖಿತ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಸರ್ಕಾರಿ ಸರ್ಕಾರಿ ಆದೇಶ ಸಂ. ಕಂಇ 26 ಭೂದಾಸೇ (1) 2001, ದಿ: 21–1–2002ರಲ್ಲಿ ಶ್ರೀ ಕೆ. ಈಶ್ವರಭಟ್, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು. ಆದರೆ, ಶ್ರೀಯುತರು ವಿಳಾಸದಲ್ಲಿಲ್ಲ ಎಂದು ದಾಖಲೆಗಳು ಹಿಂದಿರುಗಿ ಬಂದಿರುತ್ತದೆ. ನಂತರ ಸರ್ಕಾರಿ ಆದೇಶ ಸಂ. ಕಂಇ 26 ಭೂದಾಸೇ (1) 2001, ದಿ: 08–04–2004 ರಲ್ಲಿ ಶ್ರೀ ಎಂ.ಜೆ. ಇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು. ಆದರೆ ಶ್ರೀ ಎಂ.ಜೆ. ಇಂದ್ರಕುಮಾರ್ ರವರು ಸದರಿ ವಿಚಾರಣೆಯನ್ನು ತಮ್ಮಿಂದ ತೆಗೆದುಕೊಳ್ಳಲು ಸಾಧ್ಯವಾಗದಿರುವುದರಿಂದ ಬೇರೆಯವರಿಗೆ ವಹಿಸಿಕೊಡಲು ಸೂಚಿಸಿರುತ್ತಾರೆ. ಸರ್ಕಾರಿ ಆದೇಶ ಸಂ. ಕಂಇ 26 ಭೂದಾಸೇ (1) 2001, ದಿ:23.7.2004 ರಲ್ಲಿ ಶ್ರೀ ವಿ.ಎನ್. ಕುಲಕರ್ಣಿ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ನೇಮಕ ಮಾಡಲಾಗಿತ್ತು. ಆದರೆ ಸದರಿಯವರು ಸಹ ವಿಳಾಸದಲ್ಲಿಲ್ಲವಾದುದರಿಂದ, ಸರ್ಕಾರದ ಆದೇಶ ಸಂಖ್ಯೆ: ಕಂಇ 26 ಭೂದಾಸೇ (1) 2001, ದಿನಾಂಕ: 15–6–2007ರಲ್ಲಿ ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಆದರೆ ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು ಅವರ ವೈಯಕ್ತಿಕ ಕಾರಣಗಳಿಂದಾಗಿ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲ ಎಂದು ತಿಳಿಸಿರುವ ಕಾರಣ, ಮೇಲೆ (4) ರಲ್ಲಿ ಓದಲಾದ ದಿನಾಂಕ:21.9.2007ರ ಸರ್ಕಾರಿ ಆದೇಶದಲ್ಲಿ, ಶ್ರೀ ಎಸ್. ಇಂದೂಧರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಹಾಜರುಪಡಿಸಿರುವ ಸಾಕ್ಷ್ಯಾಧಾರವನ್ನು ಪರಿಗಣಿಸಿ ಶ್ರೀ ವಿ. ಪ್ರಸನ್ನಕುಮಾರ್ ಮತ್ತು ಶ್ರೀ ಕೆ.ಜಿ.ದುಂಡಪ್ಪ ರವರ ಮೇಲೆ ಹೊರಿಸಲಾಗಿರುವ ಆಪಾದನೆ ರುಜುವಾತಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ಮೇಲೆ (5) ರಲ್ಲಿ ಓದಲಾದ

ದಿನಾಂಕ:4.3.2009 ರಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ಈ ವಿಚಾರಣಾ ವರದಿಯನ್ನು ಆರೋಪಣಾ ದಾಖಲೆಗಳೊಂದಿಗೆ ಪುನರ್ ಪರಿಶೀಲಿಸಲಾಯಿತು.

1) ಭೂದಾಖಲೆಗಳ ಜಂಟಿ ನಿರ್ದೇಶಕರಾದ ಶ್ರೀ ಶಿವಮಾದಯ್ಯನವರು ತಮ್ಮ ಸಾಕ್ಷಿ ಹೇಳಿಕೆಯಲ್ಲಿ ಮೇಲ್ಕಂಡ ಎರಡು ಜಮೀನುಗಳು ಭೂಮಾಪಕರು ನಮೂದಿಸಿರುವ ಹಾಗೆ ಸಂಪೂರ್ಣವಾಗಿ ಅರಣ್ಯ ಪ್ರದೇಶದ ಒಳಗಡೆ ಬರುತ್ತದೆ ಎಂದು ತಿಳಿಸಿರುವುದು ಸರಿಯಾಗಿರುತ್ತದೆ. ಕೊಡಗಿನಲ್ಲಿ ಯಾವುದೇ ಭೂಮಿಯನ್ನು ಅಳತೆ ಮಾಡಬೇಕಾದರೆ ಗ್ರಾಮ ನಕ್ಷೆಯನ್ನೇ ಮೂಲ ಆಧಾರವಾಗಿಟ್ಟುಕೊಂಡು ಅಳತೆ ಮಾಡಲಾಗುತ್ತದೆ ಎಂದು ಸಾಕ್ಷಿದಾರರಾದ ಶ್ರೀ ಶಿವಮಾದಯ್ಯನವರು ತಿಳಿಸಿರುತ್ತಾರೆ. ಆಪಾದಿತರು ಹಾಗೂ ಜಿಲ್ಲಾಧಿಕಾರಿಯವರಿಂದ ನಿಶಾನೆ ಡಿ–3ನ್ನು ಪಡೆದು ಹಾಜರುಪಡಿಸಿರುತ್ತಾರೆ ಎಂದೂ ಮತ್ತು 1:24ಬಿ ಜಮೀನಿನ ಸುತ್ತ ಇರುವ ಜಮೀನು ಸರ್ಕಾರಿ ಪೈಸಾರಿ ಎಂದು ನಮೂದಿಸಿರುತ್ತದೆ ಎಂದು ಹೇಳುವುದು ಸರಿಯಾಗಿದೆ. ನಿಶಾನೆ ಪಿ–3 ಮತ್ತು ನಿಶಾನೆ ಪಿ–2 ಗಳಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲವೆಂದೂ ಮತ್ತು ಇದರಿಂದಾಗಿ ನಿಶಾನೆ ಪಿ–2 ಅನ್ನು ತಯಾರಿಸುವಲ್ಲಿ ಯಾವ ತಪ್ಪು ಇರುವುದಿಲ್ಲ ಎಂದು ಶ್ರೀ ಶಿವಮಾದಯ್ಯನವರು ತಿಳಿಸಿರುತ್ತಾರೆ.

2) ಸಾಕ್ಷಿದಾರರಾದ ಶ್ರೀ ಶಿವಮಾದಯ್ಯ ಅವರು ತಮ್ಮ ಸಾಕ್ಷಿ ಹೇಳಿಕೆಯಲ್ಲಿ ಸ್ಥಳದಲ್ಲಿ ಕಚ್ಚಾ ನಕ್ಷೆಯನ್ನು ತಯಾರು ಮಾಡಿ ಅದರ ಆಧಾರದ ಮೇಲೆ ಪ್ಲಾಟ್ ನಕ್ಷೆಯನ್ನು ತಯಾರಿಸಿ ಅದನ್ನು ತಮ್ಮ ವರದಿಯೊಂದಿಗೆ ಕಳುಹಿಸಿರುವುದಾಗಿ ತಿಳಿಸಿರುತ್ತಾರೆ. ಆದರೆ ತಾವು ತಯಾರಿಸಿದ ಕಚ್ಚಾ ನಕ್ಷೆಯನ್ನು ಈ ಪ್ರಕರಣದಲ್ಲಿ ಹಾಜರುಪಡಿಸಿರುವುದಿಲ್ಲವೆಂದೂ ಮತ್ತು ಅದನ್ನು ತಮ್ಮ ಮೇಲಾಧಿಕಾರಿಯವರಿಗೂ ಸಹ ವರದಿ ಜೊತೆ ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

3) ಭೂಮಾಪಕರು ಜಮೀನನ್ನು ಅಳತೆ ಮತ್ತು ಗುರುತು ಮಾಡುವುದು ಭೂದಾಖಲೆಗಳ ಆಧಾರದ ಮೇಲೆ ವಿನ: ಚಕ್ಕುಬಂದಿ ಆಧಾರದ ಮೇಲಾಗಿರುವುದಿಲ್ಲ, ವಿವಾದಿತ ಸ.ನಂ.ಗಳ ಉತ್ತರ ಭಾಗದಲ್ಲಿ ಗ್ರಾಮನಕಾಶೆಯಂತೆ ಪೂರ್ವ ಪಶ್ಚಿಮವಾಗಿ ಹರಿಯುವ ಕೋಡಿನ ಗುರುತು ಇರುತ್ತದೆಂದೂ ಮತ್ತು ಇದರಿಂದಾಗಿ ಸಾಕ್ಷಿದಾರರು ಸ್ಥಳ ಪರೀಕ್ಷೆ ನಡೆಸಿದ ಸಮಯದಲ್ಲಿ ಮೇಲ್ಕಂಡ ನೀರು ಹರಿಯುವ ತೋಡು ಕಂಡುಬರಲಿಲ್ಲವಾದ್ದರಿಂದ ಆಪಾದಿತರು ಕರ್ತವ್ಯಲೋಪವೆಸಗಿರುವುದು ಕಂಡುಬರುತ್ತದೆಂದು ಮಂಡನಾಧಿಕಾರಿಯವರು ತಮ್ಮ ಲಿಖಿತ ವಾದದಲ್ಲಿ ತಿಳಿಸಿರುತ್ತಾರೆ. ಸ್ಥಳ ತಣಿಖೆ ಸಮಯದಲ್ಲಿ ವ್ಯತ್ಯಾಸ ಕಂಡುಬಂದಲ್ಲಿ, ಅಳತೆಯನ್ನು ನಿಲ್ಲಿಸಿ, ವಿಷಯವನ್ನು ಮೇಲಾಧಿಕಾರಿಯವರ ಗಮನಕ್ಕೆ ತರಬೇಕಾಗಿದ್ದುದು ಸಾಕ್ಷಿದಾರರ ಕರ್ತವ್ಯವಾಗಿದ್ದರೂ ಅವರು ಹಾಗೆ ಮಾಡಿರುವುದಿಲ್ಲ. ತಮ್ಮ ಸ್ಥಳ ಪರೀಕ್ಷೆ ಸಮಯದಲ್ಲಿ ಆಪಾದಿತರು ಹಾಜರಿರಲಿಲ್ಲವೆಂದು ಶ್ರೀ ಶಿವಮಾದಯ್ಯನವರು ತಿಳಿಸಿರುತ್ತಾರೆ.

4) ಈ ಪ್ರಕರಣದ 1:24 (ಎ) ಮತ್ತು 1:24 (ಬಿ) ಜಮೀನಿಗೆ ಸಂಬಂಧಿಸಿದ ಜಮಾಬಂದಿ ದಾಖಲೆಗಳನ್ನು ಹಾಜರುಪಡಿಸಲಾಗಿದೆ. ಇದರಲ್ಲಿ ಭೂಮಾಲೀಕರ ಹೆಸರನ್ನು ನಮೂದಿಸಿರುವುದರಿಂದ ಹಾಗೂ ಈ ಭೂಮಿಗೆ ಕಂದಾಯವನ್ನು ನಿಷ್ಕರ್ಷೆ ಮಾಡಿರುವುದು ಕಂಡು ಬಂದಿರುವುದರಿಂದ ಇದು ಪಟ್ಟಾ ಜಮೀನೆಂದು ಸ್ಪಷ್ಟವಾಗಿ ದೃಢಪಡುತ್ತದೆ. ಈ ಜಮೀನನ್ನು ಮಾಲೀಕರು ದಸ್ತಾವೇಜು ನಂ 319:82–83 ರಂತೆ ಕಾವೇರಪ್ಪ ಮತ್ತು ಇತರೆ 9 ಮಂದಿಯಿಂದ ಕ್ರಯಕ್ಕೆ ಪಡೆದಿರುವುದು ಕಂಡುಬಂದಿರುವುದರಿಂದ, ಮೇಲ್ಕಂಡ ಜಮೀನು ಪಟ್ಟಾ ಜಮೀನೆಂದು ದೃಢಪಟ್ಟಿರುತ್ತದೆ.

5) ಜಂಟಿ ಅಳತೆಯಲ್ಲಿ ಸಹ ಮೂಲ ನಕ್ಷೆಯಂತೆ ಇರುವ ಚಕ್ಕುಬಂದಿಯನ್ನು ನಮೂದಿಸಿರುವುದು ಕಂಡುಬರುತ್ತಿರುವುದರಿಂದ ಹಾಗೂ ಅರಣ್ಯ ಇಲಾಖೆಯವರ ಸಮಕ್ಷಮ ಅಳತೆ ಮಾಡಲಾಗಿದ್ದು, ಅರಣ್ಯ ಇಲಾಖೆಯವರು ಯಾವುದೇ ಆಕ್ಷೇಪಣೆಯನ್ನು ಎತ್ತದೆ ಅಳತೆಯನ್ನು ಒಪ್ಪಿ ಸಹಿ ಮಾಡಿರುತ್ತಾರೆ.

6) ಸಾಮಾನ್ಯವಾಗಿ ಭೂಮಾಪಕರು ಅರಣ್ಯ ಇಲಾಖೆಗೆ ಪತ್ರ ಬರೆಯುವ ಅಧಿಕಾರವನ್ನು ಹೊಂದಿಲ್ಲದೇ ಇದ್ದರೂ ಸಹ ಈ ಪ್ರಕರಣದಲ್ಲಿ ಸರ್ವೇಯರ್‌ರವರು ಅರಣ್ಯ ವಲಯಾಧಿಕಾರಿಯವರಿಗೆ ಪತ್ರ ಬರೆದಿರುತ್ತಾರೆ. ಭೂಮಾಪಕರು ತನಿಖಾ ಸಮಯದಲ್ಲಿ ವ್ಯತ್ಯಾಸವನ್ನು ಗಮನಿಸಿದ್ದರೆ, ಈ ವಿಷಯವನ್ನು ತಮ್ಮ ಮೇಲಾಧಿಕಾರಿಯವರ ಗಮನಕ್ಕೆ ತರಬೇಕಾಗಿದ್ದಿತು. ಹಾಗಲ್ಲದೆ, ಭೂಮಪಕರೆ ನೇರವಾಗಿ ಅರಣ್ಯ ವಲಯಾಧಿಕಾರಿಯವರಿಗೆ ಪತ್ರವನ್ನು ಬರೆದಿರುವುದನ್ನು ಗಮನಿಸಿದರೆ, ಈ ಪ್ರಕರಣದ ಹಿನ್ನಲೆಯಲ್ಲಿ ಭೂಮಾಪಕರ ನಕ್ಷೆ ಮತ್ತು ವರದಿ ಸಂಶಯಾಸ್ಪದದಿಂದ ಕೂಡಿರುವುದು ಕಂಡುಬರುತ್ತದೆ.

7) ಸರ್ವೆ ನಂ 1:24 (ಎ) ಮತ್ತು ಸರ್ವೆ ನಂ. 1:24 (ಬಿ) ಕಾಯ್ದಿರಿಸಿದ ಅರಣ್ಯ ಮಧ್ಯೆ ಬರುತ್ತದೆ ಎಂದು ತೋರಿಸಲು ಸ್ಪಷ್ಟ ದಾಖಲೆಯನ್ನು ಹಾಜರುಪಡಿಸಿರುವುದಿಲ್ಲ. ಮೇಲ್ಕಂಡ ಎಲ್ಲಾ ಕಾರಣಗಳಿಂದಾಗಿ ಸರ್ವೆ ನಂ.1 1:24 (ಎ) ಮತ್ತು 1:24 (ಬಿ) ಕಾಯ್ದಿರಿಸಿದ ಅರಣ್ಯ ಪ್ರದೇಶದಲ್ಲಿ ಬರುತ್ತದೆ ಎಂಬುದು ರುಜುವಾತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

8) ಈ ಪ್ರಕರಣದಲ್ಲಿ ನಿಶಾನೆ ಪಿ–2 ನ್ನು ಆಪಾದಿತರು ಸ್ಥಳ ಪರಿಶೀಲಿಸಿದೆ, ಅದು ಮೂಲ ದಾಖಲೆಗಳಂತೆ ಸರಿ ಇದೆ ಎಂದು ತಪ್ಪಾಗಿ ದೃಢೀಕರಿಸಿದ್ದಾರೆ ಎಂದು ಆಪಾದಿಸಿರುವುದು ಕಂಡುಬರುತ್ತದೆ. ನಿಶಾನೆ ಪಿ–2 ನ್ನು ಪರಿಶೀಲಿಸಲಾಗಿ ಸಂಪಾಜಿ ಮತ್ತು ಬೆಟ್ಟತ್ತೂರು ಗ್ರಾಮದ ಗಡಿಯಿಂದ ಮಡಿಕೇರಿ ಮಂಗಳೂರು ರಸ್ತೆಯನ್ನು ಅಳತೆ ಮಾಡಿರುವುದು ಕಂಡುಬರುತ್ತದೆ.

ನಿಶಾನೆ ಪಿ–2 ರಲ್ಲಿ ಕಾಣಿಸಿರುವ ಎಲ್ಲಾ ವಿವರಗಳು ಮೂಲ ನಕ್ಷೆಯಲ್ಲಿ ಇರುತ್ತದೆ ಎಂದು ಮತ್ತು ಇದರಿಂದಾಗಿ ಆಪಾದಿತರು ಏನನ್ನೂ ಹೊಸದಾಗಿ ಸ್ಪಷ್ಟ ಮಾಡಿರುವುದಿಲ್ಲವೆಂದೂ ಹಾಗೂ ನಿಶಾನೆ ಪಿ–2 ಮತ್ತು ನಿಶಾನೆ ಪಿ–3 ರಲ್ಲಿ ಯಾವ ವ್ಯತ್ಯಾಸವೂ ಕಂಡುಬರುತಿಲ್ಲವಾದ್ದರಿಂದ ನಿಶಾನೆ ಪಿ–2 ತಯಾರಿಸಿರುವುದಿಲ್ಲ. ಯಾವ ತಪ್ಪೂ ಇರುವುದಿಲ್ಲವೆಂದು ಸಾಕ್ಷಿದಾರರಾದ ಶ್ರೀ ಶಿವಮಾದಯ್ಯನವರು ಪಾಟೀ ಸವಾಲಿನಲ್ಲಿ ಸ್ಪಷ್ಟವಾಗಿ ಒಪ್ಪಿರುವುದು ಕಂಡುಬರುತ್ತದೆ. ಇದರಿಂದಾಗಿ ಜಂಟಿ ನಕ್ಷೆಯನ್ನು ಆಪಾದಿತರು ಸ್ಥಳ ಪರಿಶೀಲಿಸದೇ, ಅದು ಮೂಲ ದಾಖಲಾತಿಗಳಂತೆ ಸರಿ ಇದೆ ಎಂದು ತಪ್ಪಾಗಿ ದೃಢೀಕರಿಸಿರುತ್ತಾರೆಂದು ಆಪಾದಿತರ ಮೇಲೆ ಹೊರಸಿರುವ ಆರೋಪ "ರುಜುವಾತಾಗಿರುವುದಿಲ್ಲ,"

9) ಆಪಾದಿತರಿಗೂ ಅರ್ಜಿದಾರರಿಗೂ ಸಂಪರ್ಕ ಇರುವ ಬಗ್ಗೆಯಾಗಲೀ ಅಥವಾ ಸರ್ಕಾರಕ್ಕೆ ನಷ್ಟ ಉಂಟುಮಾಡುವ ಉದ್ದೇಶ ಆಪಾದಿತರಿಗೆ ಇದ್ದಿತು ಎಂಬ ಬಗ್ಗೆ ಯಾವ ಸಾಕ್ಷ್ಯಾಧಾರವನ್ನು ಕೊಟ್ಟಿರುವುದಿಲ್ಲ. ಈ ಪ್ರಕರಣದಲ್ಲಿ ಜಂಟಿ ಅಳತೆಯನ್ನು ಸಿವಿಲ್ ನ್ಯಾಯಾಲಯ ಆದೇಶ ಮತ್ತು ಜಿಲ್ಲಾಧಿಕಾರಿಗಳಿಂದ ಬಂದ ಸೂಚನೆಗಳನ್ವಯ ಸಹಾಯಕ ನಿರ್ದೇಶಕರು, ಕಾನೂನು ರೀತ್ಯಾ ಅಳತೆಗೆ ಆದೇಶಿಸಿರುವುದು ಕಂಡುಬರುತ್ತದೆ. ಇದರಿಂದಾಗಿ ಆಪಾದಿತರ ಮೇಲಿನ ಮೇಲ್ಕಂಡ ಆಪಾದನೆ ಸಮಂಜಸವಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ.

10) ಜಂಟಿ ನಕ್ಷೆಗೆ ಸಹಿ ಮಾಡಿರುವ ಆಗಿನ ಕಛೇರಿ ಮುಖ್ಯಸ್ಥರಾದ ಶ್ರೀ ಶ್ರೀನಿವಾಸಯ್ಯರವರನ್ನು ಹಾಗೂ ಸ್ಥಳ ಪರಿಶೀಲನಾ ಕಾಲದಲ್ಲಿ ಜಂಟಿ ನಿರ್ದೇಶಕರೊಂದಿಗೆ ಹಾಜರಿದ್ದ ಶ್ರೀ ಜೈಪ್ರಕಾಶ್‌ರವರನ್ನು ಸಾಕ್ಷಿಗೆ ಕರೆಸದೆ ಇರುವುದು ಸಂಶಯಕ್ಕೆ ಎಡೆ ಮಾಡಿದಂತಾಗುತ್ತದೆ. ಮೇಲಾಗಿ ಜಂಟಿ ಕಾರ್ಯವನ್ನು ದಿನಾಂಕ 22–3–97 ರಂದು ಮಾಡಿ ಮುಗಿಸಿದ್ದರೂ, ಅದರಲ್ಲಿ ಸಹಿ ಮಾಡಿರುವ ಅರಣ್ಯ ಇಲಾಖೆಯ ಸರ್ವೆ ರೇಂಜರ್ ಮೇಲಾಗಲೀ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಮೇಲಾಗಲೀ, ಭೂದಾಖಲೆಗಳ ಸಹಾಯಕ ನಿರ್ದೇಶಕರ ಮೇಲಾಗಲೀ, ಯಾವುದೇ ವಿಚಾರಣೆ ನಡೆಸದೆ, ಈ ಪ್ರಕರಣದ ಆಪಾದಿತರಿಬ್ಬರ ಮೇಲೆ ಆರೋಪ ಹೊರಿಸಿರುವುದನ್ನು ಗಮನಿಸಿದರೆ, ಆಪಾದಿತರೆ ಮೇಲಿನ ಸೇಡಿನಿಂದಾಗಿ ಆಪಾದಿತರ ಮೇಲೆ ಈ ಪ್ರಕರಣವನ್ನು ದಾಖಲಿಸಿರುವುದು ಕಂಡುಬರುತ್ತದೆ ಹಾಗೂ ಸಾಕ್ಷಿದಾರರು ಸ್ಥಳದಲ್ಲಿ ಸಿದ್ಧಪಡಿಸಿದ ಕಚ್ಚಾ ನಕ್ಷೆಯನ್ನು ವಿಚಾರಣೆ ಸಮಯದಲ್ಲಿ ಹಾಜರುಪಡಿಸಿರುವುದಿಲ್ಲ.

ಹಾಗೂ ಒಂದನೇ ಸಾಕ್ಷಿದಾರರು ತಮ್ಮ ಮೇಲಾಧಿಕಾರಿಯವರಿಗೂ ಕಳುಹಿಸಿರುವುದಿಲ್ಲ. ನಿಶಾನೆ ಪಿ–2 ಹಾಗೂ ನಿಶಾನೆ ಪಿ–3 ಗೂ ಯಾವುದೇ ವ್ಯತ್ಯಾಸ ಇರುವುದಿಲ್ಲವೆಂದೂ ಹಾಗೂ ನಿಶಾನೆ ಪಿ–2ರಲ್ಲಿ ಕಾಣಿಸಿರುವ ಎಲ್ಲಾ ವಿವರಗಳು ಮೂಲ ನಕ್ಷೆಯಲ್ಲಿ ಇರುತ್ತದೆ ಹಾಗೂ ನಿಶಾನೆ ಪಿ–2 ತಯಾರಿಸಿರುವುದರಲ್ಲಿ ಯಾವ ತಪ್ಪೂ ಇರುವುದಿಲ್ಲವೆಂದು ಸಾಕ್ಷಿದಾರರಾದ ಶ್ರೀ ಶಿವಮಾದಯ್ಯನವರು ಒಪ್ಪಿರುವುದು ಕಂಡುಬರುತ್ತದೆ.

ಮೇಲ್ಕಂಡ ಎಲ್ಲಾ ಕಾರಣಗಳಿಂದಾಗಿ ಹಾಗೂ ಈ ಪ್ರಕರಣದಲ್ಲಿ ಹಾಜರುಪಡಿಸಿರುವ ಸಾಕ್ಷ್ಯಾಧಾರವನ್ನು ಪರಿಗಣಿಸಿ, ಶ್ರೀ ವಿ. ಪ್ರಸನ್ನಕುಮಾರ್ ಮತ್ತು ಶ್ರೀ ಕೆ.ಜಿ. ದುಂಡಪ್ಪ ರವರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿಲ್ಲವೆಂಬ ವಿಚಾರಣಾಧಿಕಾರಿಯವರ ನಿರ್ದಿಷ್ಟ ನಿರ್ಣಯದ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 26 ಭೂದಾಸೇ (1) 2001 ಬೆಂಗಳೂರು, ದಿನಾಂಕ: 1ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು, ಹಾಗೂ ಶ್ರೀ ದುಂಡಪ್ಪ, ಅಧೀಕ್ಷಕರು (ತಾಂ) (ನಿವೃತ್ತಿ) ರವರುಗಳನ್ನು ದಿನಾಂಕ: 22–9–2001 ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) (ನಿವೃತ್ತಿ) ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1559

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಭೂಮಾಪನ)

**ವಿಷಯ:** ಶ್ರೀ ಎಸ್.ಡಿ.ಸ್ವಾದಿ, ಹಿಂದಿನ ತಹಶೀಲ್ದಾರ್, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ, ಹಾಲಿ ನಿವೃತ್ತರು, ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ** 1. ಬೀದರ್ ಜಿಲ್ಲೆಯ ಜಿಲ್ಲಾಧಿಕಾರಿಯವರ ದಿನಾಂಕ: 20–06–2003ರ ಪತ್ರ ಸಂ. ಕಂ/ಸಿಬ್ಬಂದಿ/ವಿಚಾರಣೆ/ಸಿಆರ್:23/2002–03/3393

2. ದಿನಾಂಕ: 06–04–2004ರ ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 9 ಎಡಿಇ 2004
3 ಲಿಖಿತ ಉತ್ತರ :
   ಎ) ಶ್ರೀ ಸುಭಾಷ್, ಗ್ರಾಮಲೆಕ್ಕಿಗ, ದಿನಾಂಕ: 14–05–2004
   ಬಿ) ಶ್ರೀ ಎಸ್. ಡಿ. ಸ್ವಾದಿ, ನಿವೃತ್ತ ತಹಶೀಲ್ದಾರ್, ದಿ: 20–05–04
   ಸಿ) ಶ್ರೀ ಕಾಶೀನಾಥ್‌ರಾವ್, ಕಂದಾಯ ನಿರೀಕ್ಷಕ, ದಿನಾಂಕ: 10–06–2004
4 ಸರ್ಕಾರದ ಆದೇಶ ಸಂ. ಆರ್‌ಡಿ 9 ಎಡಿಇ 2004, ದಿನಾಂಕ: 30–03–2005
5 ವಿಚಾರಣಾಧಿಕಾರಿಗಳ ದಿನಾಂಕ : 09–10–2006ರ ವಿಚಾರಣಾ ವರದಿ
6 ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ 05–05–2007.
7 ಶ್ರೀ ಸುಭಾಷ್, ಹಿಂದಿನ ಗ್ರಾಮಲೆಕ್ಕಿಗ, ಭಾಲ್ಕಿ, ಅವರ ದಿನಾಂಕ: 14–08–2007ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಭಾತಂಭ್ರಾ ಗ್ರಾಮದ ಸರ್ವೆ ನಂ. 162/3ರ 2 ಎಕರೆ 20 ಗುಂಟೆ ಜಮೀನನ್ನು 1961ರ ಕರ್ನಾಟಕ ಭೂ ಸುಧಾರಣೆ ಕಾಯಿದೆ ಕಲಂ 79(ಬಿ) ಉಲ್ಲಂಘಿಸಿ ಶ್ರೀ ದಸ್ತಗೀರ, ಅಧ್ಯಕ್ಷರು, ದಾರೂಲ ಉಲಮ ಅರಬಿಯಾ ಇಸ್ಲಾಮಿಯಾ ಸಂಸ್ಥೆ, ಭಾತಂಬ್ರಾ ಇವರ ಹೆಸರಿಗೆ ಕಾನೂನು ಬಾಹಿರವಾಗಿ ವರ್ಗಾವಣೆ ಮಾಡಿದ್ದು, ಕೃಷಿ ಭೂಮಿಯನ್ನು ಕೃಷಿಯೇತರ ಭೂಮಿಯನ್ನಾಗಿ ಬಳಸಿಕೊಳ್ಳಲು ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿ ಮೇಲಾಧಿಕಾರಿಗಳಿಗೆ ತಪ್ಪು ಮಾಹಿತಿ ನೀಡಿ ಮಂಜೂರಾತಿಗಾಗಿ ಶಿಪಾರಸ್ಸು ಮಾಡಿರುತ್ತಾರೆ ಎಂಬ ಕಾರಣಕ್ಕಾಗಿ ಈ ಕೆಳಕಂಡ ಅಧಿಕಾರಿ ಹಾಗೂ ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಪತ್ರದಲ್ಲಿ ಬೀದರ್ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

1) ಶ್ರೀ ಎಸ್.ಡಿ. ಸ್ವಾದಿ, ಹಿಂದಿನ ತಹಶೀಲ್ದಾರ್, ಭಾಲ್ಕಿ ತಾಲ್ಲೂಕು, ಹಾಲಿ ನಿವೃತ್ತರು
2) ಶ್ರೀ ಕಾಶೀನಾಥ್, ಹಿಂದಿನ ಕಂದಾಯ ನಿರೀಕ್ಷಕ, ಹಾಲಿ ನಿವೃತ್ತರು
3) ಶ್ರೀ ಸುಭಾಷ್, ಹಿಂದಿನ ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಭಾಲ್ಕಿ

ಸದರಿ ಅಧಿಕಾರಿ/ನೌಕರರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ಮೇಲೆ ಕ್ರ.ಸಂ.(2) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಎಸ್.ಡಿ. ಸ್ವಾದಿ, ಹಿಂದಿನ ತಹಶೀಲ್ದಾರ್, ಶ್ರೀ ಸುಭಾಷ್, ಗ್ರಾಮಲೆಕ್ಕಿಗ, ಶ್ರೀ ಕಾಶೀನಾಥ್‌ರಾವ್, ಕಂದಾಯ ನಿರೀಕ್ಷಕ ಇವರುಗಳ ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ. ಆದುದರಿಂದ ಆರೋಪಿತ ಅಧಿಕಾರಿ/ನೌಕರರ ವಿರುದ್ಧದ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನಾಯಾಧೀಶರು, ತುರುವಿಹಾಳ್ ಅಂಚೆ, ಸಿಂಧನೂರು, ಇವರನ್ನು ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ 30–03–2005 ರಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಈ ಪ್ರಕರಣದ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಮೇಲೆ ಓದಲಾದ ಕ್ರ.ಸಂ. (5) ರ ದಿನಾಂಕ 9–10–2006 ರಲ್ಲಿ ಸಲ್ಲಿಸಿರುತ್ತಾರೆ. ಶ್ರೀ ಎಸ್.ಡಿ. ಸ್ವಾದಿ, ತಹಶೀಲ್ದಾರ್, ಇವರು ದಿನಾಂಕ 29–02–2000 ರಂದು ವಯೋ ನಿವೃತ್ತಿ ಹೊಂದಿದ್ದು, ನಿವೃತ್ತಿ ಹೊಂದಿದ 4 ವರ್ಷಗಳ ನಂತರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 214ರನ್ವಯ ಇಲಾಖಾ ವಿಚಾರಣೆ ಪ್ರಾರಂಭಿಸಲಾಗಿದ್ದರಿಂದ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ ಎಂದು, ಶ್ರೀ ಕಾಶೀನಾಥ್‌ರಾವ್ ರವರು ನಿಧನ ಹೊಂದಿದ್ದರಿಂದ ಅವರ ವಿರುದ್ಧ ವಿಚಾರಣೆಯು ಸಹ ಅಂತ್ಯಗೊಂಡಿದೆಯೆಂದು ಶ್ರೀ ಸುಭಾಷ್, ಗ್ರಾಮಲೆಕ್ಕಿಗ, ಇವರು ವಿರುದ್ಧ ಆಪಾದನೆ ಮಾತ್ರ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ವರದಿ ನೀಡಿದ್ದಾರೆ.

ಆಪಾದಿತ ನೌಕರರಾದ ಶ್ರೀ ಸುಭಾಷ್ ಇವರಿಗೆ ಮೇಲೆ ಓದಲಾದ ಕ್ರ.ಸಂ. (6) ರ ದಿನಾಂಕ 05–05–2007 ರಲ್ಲಿ ಎರಡನೇ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿತ್ತು. ಸದರಿಯವರ ಲಿಖಿತ ಉತ್ತರವನ್ನು ಮೇಲೆ ಓದಲಾದ ಕ್ರ. ಸಂ. (7) ರಲ್ಲಿ ಸಲ್ಲಿಸಿರುತ್ತಾರೆ. ಭಾತಂಬ್ರಾ ಗ್ರಾಮದ ಸರ್ವೆ ನಂ. 162/3, ವಿಸ್ತೀರ್ಣ 2 ಎಕರೆ 20 ಗುಂಟೆ ಜಮೀನು ಟ್ರಸ್ಟಿನ ಪರ ಮಾರಾಟ ಆಗಿರುವುದು ತಮಗೆ ತಿಳಿದು ಬಂದಿಲ್ಲವೆಂದು ಶ್ರೀ ಗೂಲಮ ದಸ್ತಗಿರಿ, ತಂದೆ ಇಸ್ಮಾಯಿಲ್ ಅವರ ಪರ ಮಾರಾಟವಾಗಿರುವುದಾಗಿ ತಿಳಿದು ಬಂದಿದ್ದು ಹಾಗೂ ಸದರಿ ಭೂ ವ್ಯವಹಾರ ಕಲಂ 79 (ಬಿ) ಕೆ.ಎಲ್.ಆರ್. ಕಾಯ್ದೆ

ಉಪಬಂಧಗಳ ಅಡಿಯಲ್ಲಿ ನಿಷೇದಕ್ಕೆ ಒಳಗಾಗಿರುವ ವಿಷಯ ತಿಳಿದು ಬಂದಿಲ್ಲವೆಂದು ಹಾಗೂ ಜಂಟಿ ಇಲಾಖಾ ವಿಚಾರಣೆಯಲ್ಲಿ ಇನ್ನುಳಿದ ಇಬ್ಬರು ಆಪಾದಿತರನ್ನು ಆಪಾದನೆಯಿಂದ ಮುಕ್ತಗೊಳಿಸಿ, ಕೇವಲ ತಮ್ಮ ವಿರುದ್ಧದ ಆಪಾದನೆ ಸಾಬೀತಾಗಿದೆಯೆಂದು ಹೇಳುವುದು ಸಮಂಜಸವಾಗಿಲ್ಲ ಹಾಗೂ ಇನ್ನು ಮುಂದೆ ನಿರ್ವಹಿಸುವ ಕರ್ತವ್ಯಗಳಿಗೆ ಸಂಬಂಧಿತ ಕಾಯ್ದೆ ಕಾನೂನುಗಳ ತಿಳುವಳಿಕೆ ಮಾಡಿಕೊಂಡು ಸರಿಯಾಗಿ ಕಾರ್ಯ ನಿರ್ವಹಿಸಲು ಒಂದು ಅವಕಾಶ ಮಾಡಿಕೊಡುವಂತೆ ತಿಳಿಸಿ ಅವರ ವಿರುದ್ಧ ಆಪಾದನೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಶ್ರೀ ಸುಭಾಷ್, ಹಿಂದಿನ ಗ್ರಾಮಲೆಕ್ಕಿಗರು, ಭಾತಂಬ್ರಾ ಗ್ರಾಮ ಇವರು ವಿರುದ್ಧ ಆಪಾದನೆ ಸಾಬೀತಾಗಿರುವುದರಿಂದ ಹಾಗೂ ನಿಯಮಗಳ ಉಲ್ಲಂಘನೆ ಬಗ್ಗೆ ತಿಳುವಳಿಕೆ ಇಲ್ಲವೆಂದು ಪರೋಕ್ಷವಾಗಿ ಒಪ್ಪಿಕೊಂಡಿರುತ್ತಾರೆ. ಮೇಲೆ ಕಾಣಿಸಿದಂತೆ, ವಿಚಾರಣಾಧಿಕಾರಿಗಳು, ವಿಚಾರಣಾ ವರದಿಯನ್ನು ಒಪ್ಪಿ, ಶ್ರೀ ಎಸ್.ಡಿ ಸ್ವಾದಿ, ನಿವೃತ್ತ ತಹಶೀಲ್ದಾರ್ ಮತ್ತು ಕಾಶೀನಾಥ್‌ರಾವ್ (ದಿವಂಗತ) ಇವರುಗಳ ವಿರುದ್ಧ ಮಾಡಲಾದ ಆಪಾದನೆಯಿಂದ ಮುಕ್ತಗೊಳಿಸಲು ಹಾಗೂ ಶ್ರೀ ಸುಭಾಷ್, ಗ್ರಾಮ ಲೆಕ್ಕಾಧಿಕಾರಿಗಳು ಇವರ ವಿರುದ್ಧ ಮಾಡಲಾದ ಆಪಾದನೆ ಸಾಬೀತಾಗಿರುವುದರಿಂದ ಇವರಿಗೆ ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. 09 ಎಡಿಇ 2004, ಬೆಂಗಳೂರು, ದಿನಾಂಕ: 3ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ಜಂಟಿ ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ, (1) ಶ್ರೀ ಎಸ್.ಡಿ. ಸ್ವಾದಿ, ನಿವೃತ್ತ ತಹಶೀಲ್ದಾರ್, (23) ದಿವಂಗತ ಕಾಶೀನಾಥರಾವ್ ಇವರುಗಳ ವಿರುದ್ಧ ಮಾಡಲಾದ ಆಪಾದನೆಯಿಂದ ಮುಕ್ತಗೊಳಿಸಿದೆ ಹಾಗೂ ಶ್ರೀ ಸುಭಾಷ್, ಗ್ರಾಮ ಲೆಕ್ಕಾಧಿಕಾರಿಗಳು, ಭಾತಂಬ್ರಾ, ಭಾಲ್ಕಿ ತಾಲ್ಲೂಕು, ಪ್ರಸ್ತುತ ಗ್ರಾಮಲೆಕ್ಕಾಧಿಕಾರಿಗಳು, ಕೀಕುಳಗಿ, ಬೀದರ್ ತಾಲ್ಲೂಕು, ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1560

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಪುತ್ತೂರು ತಾಲ್ಲೂಕು, ಬೆಳಿನೆಲೆ ಗ್ರಾಮದ ಸರ್ವೆ ನಂ. 12/1ಎ2, 12/1ಬಿ, 19/3ಎ ಮಾಫಿ ಪಾಸು ಪ್ರಕರಣದಲ್ಲಿ ಗಡಿಗಳನ್ನು ಗುರುತಿಸುವಾಗ ಪಕ್ಕದ ಸರ್ಕಾರಿ ಜಾಗವನ್ನು ಸೇರಿಸಿ ಗಡಿ ಗುರುತುಗಳನ್ನು ನಿಗದಿಪಡಿಸಿ, ಸರ್ಕಾರಕ್ಕೆ ನಷ್ಟ ಉಂಟಾಗಲು ಕಾರಣರಾದ ಭೂದಾಖಲೆಗಳ ಉಪ ನಿರ್ದೇಶಕರು, ಮಂಗಳೂರು ಹಾಗೂ ಇತರೆ ಭೂಮಾಪನ ಸಿಬ್ಬಂದಿ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಕಾರಣ ಕೇಳುವ ನೋಟೀಸು ಸಂಖ್ಯೆ : ಕಂಇ 7 ಭೂದಾಸೇ (1) 2001, ದಿ: 1–6–2001
2. ಶ್ರೀ ಆರ್. ಸುರೇಶ್ ರಾವ್, ಪ್ರಥಮ ದರ್ಜೆ ಭೂಮಾಪಕರುರವರ ದಿ:16–02–2002ರ ರಕ್ಷಣಾ ಹೇಳಿಕೆ
3 ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರುರವರ ದಿ: 18–4–2002ರ ರಕ್ಷಣಾ ಹೇಳಿಕೆ
4 ಶ್ರೀ ಪಿ. ಪ್ರಸನ್ನಕುಮಾರ್, DDLR ರವರ ದಿ: 13-7-2001ರ ರಕ್ಷಣಾ ಹೇಳಿಕೆ
5 ಸರ್ಕಾರದ ಆದೇಶ ಸಂಖ್ಯೆ: ಕಂಇ 7 ಭೂದಾಸೇ (1) 2001, ದಿ: 21–8–2002
6 ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ದಿ: 6–4–2004
7 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ : ಕಂಇ 7 ಭೂದಾಸೇ (1) 2001, ದಿ:26.5.2004
8 ಶ್ರೀ ವಿ. ಪ್ರಸನ್ನಕುಮಾರ್, DDLRರವರ 2ನೇ ಕಾರಣ ಕೇಳಿ ನೋಟೀಸಿಗೆ ದಿ: 1–1–2005ರ ಲಿಖಿತ ಉತ್ತರ
9 ಶ್ರೀ ಆರ್. ಸುರೇಶ್‌ರಾವ್‌ರವರು 2ನೇ ಕಾರಣ ಕೇಳಿ ನೋಟೀಸ್‌ಗೆ ದಿ: 23–7–2004 ಲಿಖಿತ ಉತ್ತರ
10 ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರುರವರ 2ನೇ ಕಾರಣ ಕೇಳಿ ನೋಟೀಸ್‌ಗೆ ದಿ: 16–7–2004ರ ಲಿಖಿತ ಉತ್ತರ
11 ಸರ್ಕಾರದ ಆದೇಶ ಸಂಖ್ಯೆ ಕಂಇ 7 ಭೂದಾಸೇ (1) 2001, ದಿನಾಂಕ: 29–5–2008
12 ಸರ್ಕಾರದ ಪತ್ರ ಸಂಖ್ಯೆ : ಕಂಇ 7 ಭೂದಾಸೇ (1) 2001, ದಿ: 5–6–2008
13 ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಸಂಖ್ಯೆ : ಪಿಎಸ್ಸಿ 54 ಸಿಎನ್‌ಎಸ್ 08, ದಿ:3.2.2009

**ಪ್ರಸ್ತಾವನೆ:**

ಶ್ರೀ ವಿ. ಪ್ರಸನ್ನಕುಮಾರ್‌ರವರು ಭೂದಾಖಲೆಗಳ ಉಪ ನಿರ್ದೇಶಕರು, ಮಂಗಳೂರು, ಶ್ರೀ ಆರ್. ಸುರೇಶ್‌ರಾವ್, ಪ್ರ.ದ.ಭೂ. ಉಪ ನಿರ್ದೇಶಕರು ಭೂದಾಖಲೆಗಳ ಇಲಾಖೆರವರ ಕಛೇರಿ, ಮಂಗಳೂರು, ಶ್ರೀ ಮಲ್ಲೇಶಪ್ಪ, ದ್ವಿ.ದ.ಭೂ. ಸಹಾಯಕ ನಿರ್ದೇಶಕರ ಕಛೇರಿಯ ಪುತ್ತೂರಿನಲ್ಲಿ ಕಾಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಪುತ್ತೂರು ತಾಲ್ಲೂಕು, ಬಿಳೆನೆಲೆ ಗ್ರಾಮದ ಸ.ನಂ. 12:1ಎ2, 12:1ಬಿ, 19:3ಎ ಬಾಬ್ತು ಭೂದಾಖಲೆಗಳ ಸಹಾಯಕ ನಿರ್ದೇಶಕರು ಪುತ್ತೂರು ಕಛೇರಿಯ ಕಡತ ನಂ. ಎಫ್.ಓ.ಆರ್ 81/95–96ಕ್ಕೆ ಸಂಬಂಧಿಸಿದಂತೆ ಜಂಟಿ ನಕ್ಷೆ ತಯಾರಿಸುವಾಗ ವಾಸ್ತವವಾಗಿ ಇರಬೇಕಾದ ಗಡಿಗಳನ್ನು ಸ್ಥಳದಲ್ಲಿ ಬದಲಾಯಿಸಿ ಪಟ್ಟಾ ಸ್ಥಳದ ಸರ್ವೆ ನಂಬರ್‌ಗಳಾದ 12:1ಎ2 ಮತ್ತು 12:1ಬಿ ಹಾಗೂ 19:3ಎ ಗಳಿಗೆ ಹೊಂದಿಕೊಂಡಂತೆ ಇರುವ ಸರ್ಕಾರಿ ಸ್ಥಳವಾದ 12:1ಎ1ಎ, 19:3ಬಿ ಮತ್ತು ಸಂರಕ್ಷಿತ ಅರಣ್ಯದಿಂದ ಕೂಡಿರುವ ಸರ್ವೆ ನಂಬರ್ 175 ರಲ್ಲಿ ಇರುವ 76 ಮರಗಳನ್ನು ಮೇಲಿನ ಪಟ್ಟಾ ಸ್ಥಳದೊಳಗಡೆ ಬರುತ್ತವೆಂದು ಜಂಟಿ ನಕ್ಷೆ ಮತ್ತು ಕಡಿಯಲಿರುವ ಮರಗಳ ಪಟ್ಟಿಯಲ್ಲಿ ಸೇರಿಸಿ ಆ ಸರ್ಕಾರಿ ಜಾಗದಲ್ಲಿನ 76 ಮರಗಳು ಕಡಿತಗೊಳ್ಳಲು ಕಾರಣರಾಗಿ ಸರ್ಕಾರಕ್ಕೆ ಈ ದುರ್ನಡತೆಯಿಂದ ರೂ. 4,25,869–00 ರೂಪಾಯಿಗಳ ಆರ್ಥಿಕ ನಷ್ಟ ಉಂಟಾಗಲು ಅವಕಾಶ ಮಾಡಿಕೊಟ್ಟು ಪರಿಸರ ನಾಶಕ್ಕೂ ಜವಾಬ್ದಾರರಾಗಿರುತ್ತಾರೆ. ಇದರಿಂದಾಗಿ ಕರ್ನಾಟಕ ಸರ್ಕಾರಿ (ನಡತೆ) ನಿಯಮಾವಳಿ 1966ರ ನಿಯಮ 3 (i) ಮತ್ತು (iii) ನ್ನು ಉಲ್ಲಂಘಿಸಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ಅಕ್ರಮ ಎಸಗಿರುತ್ತಾರೆ. ಈ ಬಗ್ಗೆ ಸದರಿ ಅಧಿಕಾರಿ ನೌಕರರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನ ಕೈಗೊಂಡು ಮೇಲೆ (1) ರಲ್ಲಿ ಓದಲಾದ ದಿ: 1–6–2001 ಕಾರಣ ಕೇಳುವ ನೋಟೀಸು ಹಾಗೂ ಆರೋಪಣಾ ಪಟ್ಟಿಯನ್ನು ಹೊರಡಿಸಲಾಯಿತು. ಈ ಬಗ್ಗೆ ಮೇಲೆ ಓದಲಾದ (2), (3) ಮತ್ತು (4) ರಲ್ಲಿ ಕ್ರಮವಾಗಿ ದಿನಾಂಕ : 16–2–2002, 18–4–2002 ಮತ್ತು 13–7–2001 ರ ಲಿಖಿತ ಹೇಳಿಕೆಗಳಲ್ಲಿ ಶ್ರೀ ಆರ್. ಸುರೇಶ್‌ರಾವ್, ಪ್ರಥಮ ದರ್ಜೆ ಭೂಮಾಪಕರು, ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರು, ಮತ್ತು ಶ್ರೀ ವಿ, ಪ್ರಸನ್ನಕುಮಾರ್, ಭೂದಾಖಲೆಗಳ ಉಪನಿರ್ದೇಶಕರು ರವರುಗಳು ತಮ್ಮ ಮೇಲಿನ ಆರೋಪಗಳನ್ನು ಅಲ್ಲಗೆಳೆದು ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ.

ಈ ಬಗ್ಗೆ ಆರೋಪಿತ ಅಧಿಕಾರಿ ನೌಕರರುಗಳು ಎಸಗಿರುವ ಗಂಭೀರ ದುರ್ನಡತೆ ಕರ್ತವ್ಯ, ನಿರ್ಲಕ್ಷ್ಯತೆ ತೋರಿರುವ ಆರೋಪಗಳು ಮೇಲ್ನೋಟಕ್ಕೆ ನಿಜವೆಂದು ಕಂಡು ಬಂದಿರುವುದರಿಂದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಮೇಲೆ (5) ರಲ್ಲಿ ಓದಲಾದ ದಿನಾಂಕ 21–8–2002 ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಜೆ. ಇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (6) ರಲ್ಲಿ ಓದಲಾದ ದಿ: 6–4–2004 ರ ವಿಚಾರಣಾ ವರದಿಯನ್ನು ಸಲ್ಲಿಸಿ "ಪುತ್ತೂರು ತಾಲ್ಲೂಕಿನ ಬಿಳಿನೆಲೆ ಗ್ರಾಮದ ಸರ್ವೆ ನಂಬರ್ 12:1ಎ2, 12:1ಬಿ, 19:3ಎ ಜಮೀನುಗಳಿಗೆ ಸಂಬಂಧಿಸಿದಂತೆ ಮಾಫಿಪಾಸು ನೀಡುವ ಪ್ರಕರಣದಲ್ಲಿ ಅದರ ಗಡಿಗಳನ್ನು ಗುರ್ತಿಸುವಾಗ ಪಟ್ಟಾ ಜಮೀನಿನ ಗಡಿ ಅಳತೆ ಜೊತೆಗೆ ಸರ್ಕಾರಿ ಜಮೀನನ್ನೂ ಸೇರಿಸಿ, ಸರ್ವೆ ಮಾಡಿ, 76 ಮರಗಳು ಪಟ್ಟಾ ಜಮೀನಿನಲ್ಲಿ ಬರುತ್ತದೆ ಎಂಬುದಾಗಿ ತೋರಿಸಿ, ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗಲು 1, 2 ಮತ್ತು 3ನೇ ಆರೋಪಿತ ಅಧಿಕಾರಿ/ನೌಕರರು ಕಾರಣಕರ್ತರು ಎಂಬುದರ ಬಗ್ಗೆ ಸಂದೇಹವಿಲ್ಲ. ಆರೋಪಿತ ಅಧಿಕಾರಿಗಳು ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಗಳಾಗಿದ್ದು, ಗುರುತರ ಕಾರ್ಯವನ್ನು ನಿರ್ವಹಿಸುವಲ್ಲಿ ನಿರ್ಲಕ್ಷ್ಯ ಮನೋಭಾವವನ್ನು ತೋರಿಸಿ ಸರ್ಕಾರದ ಜಾಗದಲ್ಲಿರುವ ಅರಣ್ಯ ಸಂಪತ್ತಿನ ನಷ್ಟಕ್ಕೆ ಕಾರಣರಾಗಿ, ಕರ್ತವ್ಯ ಲೋಪವನ್ನು ಎಸಗಿದ್ದಾರೆ, ಹಾಗೂ ಸರ್ಕಾರಿ ನೌಕರರಾಗಿರಲು ಅರ್ಹರಲ್ಲದ ರೀತಿಯಲ್ಲಿ ನಡೆದುಕೊಂಡಿರುವುದು ಸಾಬೀತುಪಡಿಸಲ್ಪಟ್ಟಿದೆ. "ಎಂದು ತಿಳಿಸುತ್ತಾ 3 ಜನ ಆರೋಪಿ ಅಧಿಕಾರಿಗಳ ವಿರುದ್ಧ ಮಾಡಿರುವ ಆರೋಪಣೆಗಳು ಸಾಬೀತಾಗಿರುತ್ತದೆಂದು ತಮ್ಮ ವರದಿಯಲ್ಲಿ ತೀರ್ಮಾನ ನೀಡಿದ್ದಾರೆ. ಈ ಬಗ್ಗೆ ಮೇಲೆ (7) ರಲ್ಲಿ ಓದಲಾದ ದಿ: 26–5–2004ರ 2ನೇ ಕಾರಣ ಕೇಳುವ ನೋಟೀಸನ್ನು ಆರೋಪಿತರುಗಳಿಗೆ ಜಾರಿ ಮಾಡಿ ಅದರೊಡನೆ ವಿಚಾರಣಾ ವರದಿಯ ಪ್ರತಿ ಒದಗಿಸಲಾಗಿತ್ತು.

ಈ ಬಗ್ಗೆ ಲಿಖಿತ ಹೇಳಿಕೆ ನೀಡಿದ ಆರೋಪಿತರುಗಳಾದ, ಶ್ರೀ ವಿ. ಪ್ರಸನ್ನಕುಮಾರ್‌ರವರು ಮೇಲೆ (8) ರಲ್ಲಿ ಓದಲಾದ ದಿ: 1–1–2005ರ ತಮ್ಮ 2ನೇ ಕಾರಣ ಕೇಳಿ ನೋಟೀಸ್‌ಗೆ ಉತ್ತರಿಸುತ್ತಾ ಪ್ರಸ್ತುತ ಪ್ರಕರಣದಲ್ಲಿ ತಮ್ಮಿಂದ ಯಾವುದೇ ತಪ್ಪು ನಡೆದಿಲ್ಲ ಎಂದು ತಿಳಿಸುತ್ತಾ ಆರೋಪಮುಕ್ತರನ್ನಾಗಿಸಲು ಹಾಗೂ ಅಮಾನತ್ತಿನ ಅವಧಿಯನ್ನು ಕ್ರಮಬದ್ಧಗೊಳಿಸಲು ಕೋರಿದ್ದಾರೆ.

ಶ್ರೀ ಆರ್. ಸುರೇಶ್‌ರಾವ್, ಪ್ರಥಮ ದರ್ಜೆ ಭೂಮಾಪಕರು ಮೇಲೆ (9) ರಲ್ಲಿ ಓದಲಾದ ದಿ: 23–7–2004ರ 2ನೇ ಕಾರಣ ಕೇಳಿ ನೋಟೀಸ್‌ಗೆ ಲಿಖಿತ ಉತ್ತರ ಮತ್ತು ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರು ಮೇಲೆ (10)ರಲ್ಲಿ ಓದಲಾದ ದಿ: 6–7–2004 ಲಿಖಿತ ಉತ್ತರ ನೀಡಿ ಈ ಹಿಂದೆ ನೀಡಿದ್ದ ಹೇಳಿಕೆಗಳನ್ನು ಪರಿಗಣಿಸಬೇಕೆಂದು ತಮ್ಮಿಂದ ಯಾವುದೇ ತಪ್ಪಾಗಿಲ್ಲ, ಮೇಲಾಧಿಕಾರಿಗಳ ನಿರ್ದೇಶನದಂತೆ ಕಾರ್ಯ ಮಾಡಿದ್ದೇವೆ, ಆದುದರಿಂದ ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ.

ಪ್ರಸ್ತುತ ಪ್ರಕರಣದಲ್ಲಿ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಕೆಳಕಂಡ ಅಂಶಗಳು ತಿಳಿದು ಬರುತ್ತದೆ.

(ಅ) ವಿಚಾರಣಾ ವರದಿಯಲ್ಲಿ 3 ಜನ ಆರೋಪಿತರ ವಿರುದ್ಧ ಮಾಡಿರುವ ಆರೋಪಗಳು ಸಾಬೀತಾಗಿರುತ್ತದೆ

(ಆ) ಖಾಸಗಿ ಹಿಡುವಳಿದಾರರೊಂದಿಗೆ ಬಳಸಂಚು ನಡೆಸಿ ದುರುದ್ದೇಶದಿಂದ ಸರ್ಕಾರಿ ಜಾಗ ಮತ್ತು ರಕ್ಷಿತ ಅರಣ್ಯದಲ್ಲಿ ಬರುವ 76 ಮರಗಳನ್ನು ಅಕ್ರಮವಾಗಿ ಕಡಿಯಲು ಅವಕಾಶ ಮಾಡಿಕೊಟ್ಟು ಈ ಅಕ್ರಮದಿಂದ ಸರ್ಕಾರಕ್ಕೆ ಅಂದಿನ ಬೆಲೆ ರೂ. 4,25,869–00 ನಷ್ಟ ಉಂಟಾಗಿರುತ್ತದೆ.

(ಇ) ಆರೋಪಿತರು ಪರಿಸರ ನಾಶ ಹಾಗೂ ಅಮೂಲ್ಯವಾದ ಪ್ರಕೃತಿ ಮತ್ತು ಅರಣ್ಯ ನಾಶಕ್ಕೂ ಜವಾಬ್ದಾರರಾಗಿರುತ್ತಾರೆ.

(ಈ) ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ನಾಟಕ ನಾಗರೀಕ (ನಡತೆ) ನಿಯಮಾವಳಿ 1966ರ ನಿಯಮ 3 (i) ಮತ್ತು (iii)ನ್ನು ಉಲ್ಲಂಘಿಸಿರುತ್ತಾರೆ.

ಮೇಲೆ (11) ರಲ್ಲಿ ಓದಲಾದ ದಿನಾಂಕ 29–5–2008 ರ ಆದೇಶದಲ್ಲಿ ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ಮತ್ತು ಶ್ರೀ ಆರ್. ಸುರೇಶ್‌ರಾವ್, ಪ್ರಥಮ ದರ್ಜೆ ಭೂಮಾಪಕರವರುಗಳಿಗೆ ದಂಡನೆ ವಿಧಿಸಿ ಆದೇಶ ಹೊರಡಿಸಿದೆ.

ಆರೋಪಿತ ನೌಕರರಲ್ಲಿ ಒಬ್ಬರಾದ ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರವರು ದಿನಾಂಕ 21–12–2007 ರಂದು ಮೃತರಾಗಿರುವ ಅವರ ಬಗ್ಗೆ ಪ್ರತ್ಯೇಕವಾಗಿ ಆದೇಶ ಹೊರಡಿಸಬೇಕಾಗಿದ್ದುದರಿಂದ, ದಿವಂಗತ ಮಲ್ಲೇಶಪ್ಪನವರ ವಿರುದ್ಧ ಆರೋಪಗಳು ಸಾಬೀತಾಗಿದ್ದು, ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿರುವುದರಿಂದ ಸರ್ಕಾರಕ್ಕೆ ಉಂಟಾದ ಒಟ್ಟಾರೆ ನಷ್ಟ ರೂ. 4,25,869/– ರ ಪೈಕಿ 1/3 ಭಾಗಾಂಶವಾದ ರೂ. 1,41,956/– ಹಾಗೂ ಅದರ ಮೇಲೆ ನಷ್ಟವುಂಟಾದ ದಿನಾಂಕದಿಂದ ಅಂದರೆ, ಮಾರ್ಚಿ 1996 ರಿಂದ ಹಣ ಪೂರ್ತಿಯಾಗಿ ವಸೂಲಿಯಾಗುವರೆಗೆ ಸರ್ಕಾರದ ನೋಟಿಫಿಕೇಷನ್ No.DPAR 16 SDE 2004, ದಿನಾಂಕ 17–11–2005 ರಂತೆ ಶೇಕಡ 8 ರಷ್ಟು ಬಡ್ಡಿ ದರದಲ್ಲಿ ಲೆಕ್ಕ ಹಾಕಿ ಮೃತ ಆರೋಪಿತರ ಲೆಕ್ಕದಲ್ಲಿ ಅವರಿಗೆ ದೊರೆಯಬಹುದಾದ ಆರ್ಥಿಕ ಸೌಲಭ್ಯದಿಂದ ವಸೂಲಿಸಲು ಮೇಲೆ (12) ರಲ್ಲಿ ಓದಲಾದ ಸರ್ಕಾರದ ಪತ್ರ ದಿನಾಂಕ 5–6–2008 ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ನೀಡುವಂತೆ ಕೋರಲಾಗಿತ್ತು. ಮೇಲೆ (13) ರಲ್ಲಿ ಓದಲಾದ ದಿನಾಂಕ 3–2–2009 ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ದಿವಂಗತ ಶ್ರೀ ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರ ವಿರುದ್ಧ ದಂಡನೆ ಆದೇಶ ಹೊರಡಿಸಲು ತನ್ನ ಸಹಮತಿ ನೀಡಿರುವುದರಿಂದ ಕೆಸಿಎಸ್‌ಆರ್ ನಿಯಮ 214 (ಎ) (ಬಿ) ರ ಪ್ರಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 7 ಭೂದಾಸೇ (1) 2001 (ಭಾ), ಬೆಂಗಳೂರು, ದಿನಾಂಕ: 2ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iv) ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮ 1958ರ ನಿಯಮ 214ರ (1) (ಎ) (ಬಿ) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಆರೋಪಿತರುಗಳಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ. 4,25,869–00 ಗಳ ಪೈಕಿ ಅದರ 1/3 ಭಾಗ ಅಂದರೆ ತಲಾ ರೂ. 1,41,956–00 (ಒಂದು ಲಕ್ಷದ ನಲವತ್ತೊಂದು ಸಾವಿರದ ಒಂಭೈನೂರ ಐವತ್ತಾರು ರೂಪಾಯಿಗಳು ಮಾತ್ರ) ದಿ: ಮಲ್ಲೇಶಪ್ಪ, ದ್ವಿತೀಯ ದರ್ಜೆ ಭೂಮಾಪಕರಿಂದ ಮಾರ್ಚಿ 1996 ರಿಂದ ಹಣವನ್ನು ಪೂರ್ಣವಾಗಿ ಪಾವತಿಸುವವರೆಗೆ ಶೇಕಡ 8% ದರದಲ್ಲಿ ಬಡ್ಡಿ ಸೇರಿಸಿ, ದಿವಂಗತ ಶ್ರೀ ಮಲ್ಲೇಶಪ್ಪನವರಿಗೆ ದೊರೆಯಬಹುದಾದ ಆರ್ಥಿಕ ಸೌಲಭ್ಯದಿಂದ ವಸೂಲು ಮಾಡುವುದೆಂದು ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1561

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

**ವಿಷಯ:** ಶ್ರೀ ಕೆ. ಕೇಶವರಾಜು, ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರನ್ನು ಲೋಕಾಯುಕ್ತ ದಾಳಿಯ ಹಿನ್ನಲೆಯಲ್ಲಿ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಇವರ ಅ.ಸ. ಪತ್ರ ಸಂ. ಇಎಸ್‌ಟಿ(1):ಸಿಆರ್–42/2009–10 ದಿನಾಂಕ: 07–05–2009

2. ತನಿಖಾಧಿಕಾರಿಗಳು ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ, ಇವರ ಪತ್ರ ಸಂ. ಲೋಕ್/ಎಸ್‌ಎಂಜಿ/ಪಿಐ/ಸಿಆರ್ ನಂ:5/2009, ದಿನಾಂಕ:07–05–2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ. ಸಂ. (1)ರ ದಿನಾಂಕ: 07–05–2009ರ ಅ.ಸ. ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಇವರು ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಅನಧಿಕೃತ ಮರಳು ಸಾಗಾಣಿಕೆ ಸಂಬಂಧಿಸಿದಂತೆ, ತನಿಖಾಧಿಕಾರಿಗಳು ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರ ದಿನಾಂಕ: 07–05–2009ರ ಪ್ರಥಮ ಮಾಹಿತಿ ವರದಿಯಲ್ಲಿ ಶ್ರೀ ಕೆ. ಕೇಶವರಾಜು, ತಾಲ್ಲೂಕ ತಹಶೀಲ್ದಾರ್, ತೀರ್ಥಹಳ್ಳಿ, ತಾಲ್ಲೂಕ್ ಶಿವಮೊಗ್ಗ ಜಿಲ್ಲೆ, ಇವರನ್ನು ದಿನಾಂಕ: 07–05–2009 ರಂದು ಲೋಕಾಯುಕ್ತ ಪ್ರಕರಣದಲ್ಲಿ ದಸ್ತಗಿರಿ ಮಾಡಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7(13)(1)(ಡಿ) ರಡಿ 13(2) ರ ಜೊತೆಯಲ್ಲಿ ಕ್ರೈಂ ಸಂ: 5/2009ರ ಪ್ರಕರಣವನ್ನು ದಾಖಲಿಸಿರುವುದಾಗಿ ವರದಿ ಮಾಡುತ್ತಾ ಸದರಿಯವರನ್ನು ಶಿವಮೊಗ್ಗ ಜಿಲ್ಲಾ ಘನ ವಿಶೇಷ ಹಾಗೂ ಪ್ರಧಾನ ಸತ್ರ ನ್ಯಾಯಾಲಯದಲ್ಲಿ ಹಾಜರುಪಡಿಸಲಾಗುವುದೆಂದು ತಿಳಿಸಿರುತ್ತಾರೆ. ಆದ್ದರಿಂದ ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಪೊಲೀಸ್ ಠಾಣೆಯ ತನಿಖಾಧಿಕಾರಿ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ಇವರು ದಿನಾಂಕ 07–05–09 ರಂದು ವರದಿ ಮಾಡಿರುವಂತೆ ಶ್ರೀ ಕೆ. ಕೇಶವರಾಜು, ತಹಶೀಲ್ದಾರ್, ತೀರ್ಥಹಳ್ಳಿ ಇವರು ಈ ಪ್ರಕರಣದಲ್ಲಿ ಕ್ರಿಮಿನಲ್ ಮೊಕದ್ದಮೆಗೆ ಗುರಿಯಾಗಿರುವ ಕಾರಣ, ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ) ರನ್ವಯ ಸೇವೆಯಿಂದ ಅಮಾನತ್ತುಗೊಳಿಸುವಂತೆ ಕೋರಿ, ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಕೆ. ಕೇಶವರಾಜು, ತಹಶೀಲ್ದಾರ್, ತೀರ್ಥಹಳ್ಳಿ, ತಾಲ್ಲೂಕು ಶಿವಮೊಗ್ಗ ಜಿಲ್ಲೆ ಇವರು ಲೋಕಾಯುಕ್ತ ಪ್ರಕರಣದಲ್ಲಿ ದಸ್ತಗಿರಿಯಾಗಿ ಕ್ರಿಮಿನಲ್ ಮೊಕದ್ದಮೆಗೆ ಗುರಿಯಾಗಿರುವ ಕಾರಣ ಅವರನ್ನು ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ, ಅಮಾನತ್ತಿನಲ್ಲಿಡಲು ತೀರ್ಮಾನಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ. ಆರ್‌ಡಿ 08 ಎಡಿಇ 2009, ಬೆಂಗಳೂರು, ದಿನಾಂಕ: 27ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಕೆ. ಕೇಶವರಾಜು, ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಇವರು ಲೋಕಾಯುಕ್ತ ಪ್ರಕರಣದಲ್ಲಿ ದಸ್ತಗಿರಿಯಾಗಿ ಕ್ರಿಮಿನಲ್ ಮೊಕದ್ದಮೆಗೆ ಗುರಿಯಾಗಿರುವ ಕಾರಣ ಇವರ ವಿರುದ್ಧ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ)ರನ್ವಯ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಸದರಿ ಅಧಿಕಾರಿಗಳು ಅಮಾನತ್ತಿನ ಅವಧಿಯಲ್ಲಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1562

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಚಿತ್ರದುರ್ಗ ಜಿಲ್ಲೆಯಲ್ಲಿ ಭಾರತೀಯ ವಿಜ್ಞಾನ ಸಂಸ್ಥೆ (ಐಐಎಸ್‌ಸಿ) ಯ ಎರಡನೇಯ ಕ್ಯಾಂಪಸ್ ಸ್ಥಾಪಿಸಲು ಸರ್ಕಾರಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ರವರ ಪತ್ರ ಸಂಖ್ಯೆ ಎಲ್‌ಎನ್‌ಡಿ:ಸಿಆರ್/382/2008–09 ದಿನಾಂಕ:02–02–2009

**ಪ್ರಸ್ತಾವನೆ:**

ಭಾರತೀಯ ವಿಜ್ಞಾನ ಸಂಸ್ಥೆಯು ಎರಡನೇ ಕ್ಯಾಂಪಸ್ ಸ್ಥಾಪಿಸುವ ಸಲುವಾಗಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಸ.ನಂ. 47ರ ಖುದಾಪುರ ಕಾವಲ್ ಸರ್ಕಾರಿ ಜಮೀನಿನಲ್ಲಿ 1700 ಎಕರೆಯನ್ನು ಮಂಜೂರು ಮಾಡಲು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಖುದಾಪುರ ಕಾವಲ್ ಜಮೀನಿನ ಒಟ್ಟು ವಿಸ್ತೀರ್ಣ 2819.23 ಎಕರೆಗಳಾಗಿದ್ದು, ಇದರಲ್ಲಿ 290–00 ಎಕರೆ ಜಮೀನನ್ನು ವಿ.ಓ.ಡಿ. 179ನ್ನು ಸ್ಥಳಾಂತರಿಸುವ ಸಲುವಾಗಿ ಡಿ.ಆರ್.ಡಿ.ಓ ಕೇಂದ್ರ ಸರ್ಕಾರ ಇವರಿಗೆ ಮಂಜೂರು ಮಾಡಿ ಆದೇಶ ಸಂಖ್ಯೆ: ಆರ್‌ಡಿ:14:ಎಲ್‌ಜಿಸಿ: 2008 ದಿನಾಂಕ:21–5–2009ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ. ಉಳಿದ ಜಮೀನಿನಲ್ಲಿ 1500 ಎಕರೆ ಭಾರತೀಯ ವಿಜ್ಞಾನ ಸಂಸ್ಥೆ ಎರಡನೆಯ ಕ್ಯಾಂಪಸ್ ಸ್ಥಾಪನೆಗಾಗಿಯೂ ಮತ್ತು 200–00 ಎಕರೆ ಜಮೀನು ಸಂಸ್ಥೆಯ ಅಧಿಕಾರಿಗಳ ಹಾಗೂ ಸಿಬ್ಬಂದಿಗಳಿಗೆ ವಸತಿ ಗೃಹಗಳನ್ನು ನಿರ್ಮಿಸಲು ಮಂಜೂರು ಮಾಡಲು ಪ್ರಸ್ತಾಪಿಸಲಾಗಿದೆ. ಸದರಿ ಕಾವಲ್‌ನ ಖುಷ್ಕಿ ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ. 30,000/– ಸಾವಿರಗಳೆಂದು ವರದಿ ಮಾಡಲಾಗಿದೆ. ಜಿಲ್ಲಾಧಿಕಾರಿಗಳು ಚಿತ್ರದುರ್ಗರವರು ನೀಡಿರುವ ವರದಿ ಪ್ರಕಾರ ಸದರಿ ಜಮೀನು ಅಮೃತ್ ಮಹಲ್ ಕಾವಲ್ ಜಮೀನಾಗಿದ್ದು, ಇದರಲ್ಲಿ ಬೆಲೆಬಾಳುವ ಗಿಡ ಮರಗಳು ಇರುವುದಿಲ್ಲ. ಮತ್ತು ಸದರಿ ಜಮೀನಿನಲ್ಲಿ ಪಶುಸಂಗೋಪನಾ ಇಲಾಖೆಯ ಆಡಳಿತ ವ್ಯಾಪ್ತಿಯ ಕುರಿ ಸಂವರ್ಧನಾ ಕೇಂದ್ರವಿರುತ್ತದೆ. ಹಾಲಿ ಪಶುಸಂಗೋಪನಾ ಇಲಾಖೆಯ ಅಧೀನದಲ್ಲಿರುವ ಸದರಿ ಜಮೀನು ಯಾವ ಉದ್ದೇಶಕ್ಕಾಗಿ ಮಂಜೂರಾಗಿದೆಯೋ ಆ ಉದ್ದೇಶಕ್ಕೆ ಬಳಸುತ್ತಿಲ್ಲವೆಂದು ಜಿಲ್ಲಾಧಿಕಾರಿಗಳು ತಿಳಿಸುತ್ತಾ, IISC ನ ಕ್ಯಾಂಪಸ್, ಚಿತ್ರದುರ್ಗ ಜಿಲ್ಲೆಯಲ್ಲಿ ಸ್ಥಾಪಿಸಿದಲ್ಲಿ, ಹೆಸರಾಂತ ಸಂಶೋಧನಾ ಸಂಸ್ಥೆಯ ಎರಡನೇ ಕ್ಯಾಂಪಸ್ ಹೊಂದುವ ಹೆಗ್ಗಳಿಕೆ ಕರ್ನಾಟಕ ರಾಜ್ಯದಾಗುತ್ತದೆ ಎಂದು ಅಭಿಪ್ರಾಯ ಪಟ್ಟು, ಸದರಿ ಸಂಸ್ಥೆಯ ಸ್ಥಾಪನೆಗೆ ಸರ್ಕಾರಿ ಜಮೀನು ಮಂಜೂರು ಮಾಡುವಂತೆ ಕೋರಿದ್ದಾರೆ.

ಉಪನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಚಿತ್ರದುರ್ಗರವರ ವರದಿಯಂತೆ ಕಾವಲಿನ ಸುತ್ತಮುತ್ತಲಿನ ಜಾನುವಾರುಗಳು ಕಾವಲಿನಲ್ಲಿ ಮೇಯಲು ಅವಕಾಶವಿರುವುದಿಲ್ಲ. ಪಶುಪಾಲಕರು ಅವರ ರಾಸುಗಳನ್ನು ಅವರದ್ದೇ ಜಮೀನಿನಲ್ಲಿ, ಗೋಮಾಳಗಳಲ್ಲಿ ಮತ್ತು ಅರಣ್ಯ ಪ್ರದೇಶಗಳಲ್ಲಿ ಮೇಯಿಸಿಕೊಳ್ಳುತ್ತಿದ್ದು, ಕುರಿ ಸಂವರ್ಧನಾ ಕೇಂದ್ರಕ್ಕೆ ಸೇರಿರುವ 823 ಜಾನುವಾರುಗಳಿಗೆ 177–00 ಎಕರೆ ಜಮೀನಿನ ಅವಶ್ಯಕತೆ ಇರುವುದಾಗಿ ತಿಳಿದುಬರುತ್ತದೆ. ಅಮೃತ್ ಮಹಲ್ ಕಾವಲ್ ಜಮೀನುಗಳಲ್ಲಿ ಮೇವು ಅಭಿವೃದ್ದಿಯ ಯಾವುದೇ ಯೋಜನೆಗಳು/ಕಾರ್ಯಗಳು ನಡೆಯುತ್ತಿರುವುದಿಲ್ಲ, ಪ್ರಸ್ತುತ ಕಾವಲ್ ಜಮೀನುಗಳು ಪಶುಸಂಗೋಪನಾ ಇಲಾಖೆಯ ರಕ್ಷಣೆಯಲ್ಲಿದ್ದಾಗ್ಯೂ, ಯೋಜಿತ ಉದ್ದೇಶಕ್ಕೆ ಬಹುತೇಕ ಜಮೀನುಗಳು ಬಳಕೆಯಾಗುತ್ತಿಲ್ಲ, ಹಾಗೂ ಈ ಜಮೀನುಗಳಲ್ಲಿ ಅನಧಿಕೃತ ಸಾಗುವಳಿ, ಅನಧಿಕೃತ ಗಣಿಗಾರಿಕೆ ಹಾಗೂ ಒತ್ತುವರಿ ತಡೆಯಲು ಯೋಜಿತ ಯೋಜನೆಗೆ ಪ್ರಸ್ತಾಪಿತ ಜಮೀನನ್ನು ಶಿಫಾರಸ್ಸು ಮಾಡಲಾಗಿದೆ ಎಂದು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ರವರು ಅಭಿಪ್ರಾಯ ನೀಡಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ: 15: ಎಲ್‌ಜಿಸಿ : 2009 ಬೆಂಗಳೂರು, ದಿನಾಂಕ: 28ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ಖುದಾಪುರ ಕಾವಲ್ ಗ್ರಾಮದ ಸ.ನಂ. 47ರಲ್ಲಿ 1500 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ.30,000/– (ಮೂವತ್ತು ಸಾವಿರ ರೂಪಾಯಿಗಳು ಮಾತ್ರ)ಗಳ ದರ ವಿಧಿಸಿ ಭಾರತೀಯ ವಿಜ್ಞಾನ ಸಂಸ್ಥೆ (ಐಐಎಸ್‌ಸಿ)ಯ ಎರಡನೆಯ ಕ್ಯಾಂಪ್ ಸ್ಥಾಪಿಸುವ ಸಲುವಾಗಿ ಮಂಜೂರು ಮಾಡಿದೆ. ಈ ಮಂಜೂರಾತಿಯು ಸದರಿ ಸಂಸ್ಥೆಯು 2 ವರ್ಷದೊಳಗೆ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪ್ರಗತಿ ಸಾಧಿಸುವ ಷರತ್ತು ಹಾಗೂ ಇತರೆ ಭೂ ಮಂಜೂರಾತಿ ಷರತ್ತುಗಳಿಗೆ ಒಳಪಟ್ಟಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ: 521: ವೆಚ್ಚ 7/2009 ದಿನಾಂಕ 21–5–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1563

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ–3)

**HEALTH AND FAMILY WELFARE SECRETARIAT**

**Sub :** In sourcing of Specialists services to Government health facilities-reg.

**Read:** 1. Govt Order No. HFW/KHSDRP/Sect-43/07-08, dt.2.4.2008.
2. Govt Order No. HFW/KHSDRP/Sect-43/07-08, dt. 4.9.2008
3. Govt Order No.HFW/KHSDRP/Sect-43/07-08, dt. 4.9.2008 (Sourcing–in Specialists, regarding).

**PREAMBLE:**

In Govt Order read at (1) above , sanction was accorded for contracting-in the services of private specialists on payment of prescribed rates fee in the cases of emergency i.e., OBG, Paediatric, Anaesthesia and other emergency situations requiring services of specialists like Orthopaedics, Physicians and Surgeons in the Government hospitals where posts of specialists fallen vacant or where no posts specialists have been sanctioned but situation requires services of such specialists.

In the Govt Order read at (2) above, certain emergency cases which were not covered under Govt Order read at (1) above have also been included duly prescribing the rates of fee payable to such specialists.

In the Govt Order read at (3) above, certain incentives have been sanctioned for the Govt Medical Officers having specialization for treatment of emergency cases outside their duty place and hours.

Since National Rural Health Mission is mainly focusing on Maternal & Child Health and a policy decision has been taken to expenditure incurred for obtaining services of specialists for Maternal and Child Health have to be met out by the NRHM funds only and expenditure incurred on other emergencies have to be met out by the KHSDRP funds.

Hence, the following order.

**Govt Order No. HFW/KHSDRP/Sect-43/07-08, Bangalore, Dated:10th February 2009**

Under the circumstances mentioned in the preamble, in supersession of the Government Orders read at (1) and (2) above, Government are pleased to accord approval for contracting-in services of Private Specialists to Government health facilities where the posts of Specialists are vacant on actual requirements of specialists based on health challenge in particular areas. Accordingly, the following rates of fee /remuneration is hereby prescribed for payment under NRHM funds and under KHSDRP funds to private specialists

**Under NRHM funds**

1) Maternal and Child Health: A retention fee of Rs. 5000/- on monthly basis for availability at all times, incentive for conducting LSCS in first referral hospitals of Rs. 1500/- for Gynaecologists, Rs 1000/- for Anaesthetists, Rs. 500/- for paediatricians.
2) General Specialists Rs. 5000/- as retention fee on a monthly basis for availability times, Rs, 1000/- per day for OPD subject to at least 2 days of OPD in a week.

Apart from this, following rates per visit and per surgery are hereby approved.

| Sl. No. | Case of | Rate per surgery (in Rs.) |
|---|---|---|
| | **Emergancy Obstetric & Gynaecological Conditions** | |
| 1 | Rupture Uterus | 2000.00 |
| 2 | Tubal Pregnancy | 2000.00 |
| 3 | Accidental Haemorrhage | 1000.00 |
| 4 | Uterine Bleeding | 2000.00 |
| 5 | Uterine Perforation | 2000.00 |
| 6 | Injury-Genito Urinary Tract | 2000.00 |

| Sl. No. | Case of | Rate per surgery (in Rs.) |
|---|---|---|
| 7 | Foreign body in Genito Urinary Tract | 500.00 |
| 8 | Abortions | 300.00 |
| 9 | Retention of Placenta | 1000/- |
| 10 | Obstructed Labour | 1000/- |
| | **Anaesthesia** | |
| 11 | General Anaesthesia | 1250/- |
| 12 | Spinal/Epidural Anaesthesia | 1000/- |
| 13 | Nerve Block (in case the procedure is not completed under local anaesthesia, the procedure can be done under general anaesthesia and the rates claimed for general anaesthesia only) | 500 |

**Under KHSDRP funds**

The following rates of fee /remuneration are hereby prescribed for payment under KHSDRP funds to private specialists in case of following other emergencies.

| Sl. No. | Medical Emergencies | Rate per visit (in Rs.) | Maximum rate per day (in Rs.) |
|---|---|---|---|
| 1 | Myocardial infarction | 100 | 500 |
| 2 | Cardio Vascular Accidents | 100 | 500 |
| 3 | Cerebro Vascular Accidents | 100 | 500 |
| 4 | Acute Respiratory Infection | 100 | 500 |
| 5 | Foreign Bodies in Airo Digestive Tract | 100 | 500 |
| 6 | Chest Injuries | 100 | 500 |
| 7 | Status Asthmaticus | 100 | 500 |
| 8 | Acute Renal Failure | 100 | 500 |
| 9 | Coma (Shock) | 100 | 500` |
| 10 | Acute Congestive Glaucoma (Eye) | 100 | 500 |
| 11 | Acute Poisoning | 100 | 500 |
| 12 | Snake Bite | 100 | 500 |

| Sl.No. | Surgical Emergencies | Rate per Surgery (in Rs) |
|---|---|---|
| 1 | Burns Injuries more than 30% | 1000.00 |
| 2 | Acute Appendicitis | 1500.00 |
| 3 | Perforations (Abdominal) | 3000.00 |
| 4 | Colic Attacks (pain leading to laparotomy) | 3000.00 |
| 5 | Bleeding Haemmorhoids | 500.00 |
| 6 | Foreign Bodies in the Eye | 300.00 |
| 7 | Lens induced Glaucoma (Eye) | 1500.00 |
| 8 | Tracheostomy | 1000.00 |
| 9 | Supra Public cystotomy | 1000.00 |
| 10 | Acute Abscess | 300.00 |
| 11 | Acute Cellulites due to snake bite | 500.00 |
| 12 | Acute Retention of Urine | 500.00 |
| 13 | Acute management of shocks | 500.00 |

| Sl.No. | Orthopaedic Surgeries | Rate per Surgery (in Rs) |
|---|---|---|
| 1 | Dislocation of joints<br>a. Closed Reduction<br>b. Open Reduction | <br>500<br>4000.00 |
| 2 | Haemorthorosis | 500.00 |

| Sl. No. | Orthopaedic Surgeries | Rate per Surgery (in Rs) |
|---|---|---|
| 3 | Ligament Tear | 2500.00 |
| 4 | Fracture neck & Femor | 4000.00 |
| 5 | Fracture of Long Bones-close reduction | 500.00 |
| | Open reduction | 3000.00 |
| 6 | Tapping with inter costal drainage | 500.00 |
| 7 | Intubations to remove foreign body in respiratory tract | 1000.00 |
| 8 | Head Injury management | 1000.00 |
| 9 | Fracture rib Haemothorax | 500.00 |

The Govt Orders read at (3) above in which certain incentives have been sanctioned for the Govt Medical Officers having specialization for treatment of emergency cases outside their duty place and hours is hereby continued without any changes.

The Government is hereby authorize the District Level Committee headed by the Deputy Commissioner for shortilsting a panel of specialists to be contracted in wherever specialists' posts are vacant by giving wide publicity and following transparent process.

For any existing vacancy of a particular specialization, a panel of 2 doctors shall be shortilisted and after assessment of the time that any specialist can devote for this, chose one of them for retention and contracting in Approval for such contracting in shall be given by the District Level Committee.

In case no vacancy of a particular specialization exists, but the health challenge in that area requires specialist of particular discipline be contracted,-in then the District Level Committee can recommend to the Project Administrator for such contracting in be allowed.

The Project Administrator, KHSDRP will examine such requests of District Level Committee and decide whether such contracting in be allowed even without vacancy of such specialization without posts for such specialization exist in the Government facility.

By Order and in the name of Governor of Karnataka,

**SUSHAMA GODBOLE**

P.R. 653

Deputy Secretary to Government,

KHSDRP

Department of Health & Family Welfare.

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ, ಜಾಗೃತಿ ವಿಭಾಗ, ಬೆಂಗಳೂರು, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಬಿಡಿ–42/ಸಿಆರ್–1/2007/ರಾಮನಗರ, ದಿನಾಂಕ:9.10.2008.
2. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಬಿ–42/ಸಿಆರ್–1/2007/ರಾಮನಗರ, ದಿನಾಂಕ:21.11.2008.
3. ತನಿಖಾಧಿಕಾರಿಯವರ ವರದಿ ಸಂಖ್ಯೆ:ಕೆಎಲ್.ಎ/ರಾ.ಜಿ.ಮೊ.ಸಂ.01/2007,ದಿನಾಂಕ:22.9.2008
4. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ದಿನಾಂಕ:9.1.2008ರಲ್ಲಿ ದಿ:6.12.2007ರಂದು ಶ್ರೀ ಕೆ.ಕೆ. ನಂಜಪ್ಪ, ವ್ಯವಸ್ಥಾಪಕ ನಿರ್ದೇಶಕರು, ಫ್ಲೋರಾಡ್ ಸೇಲ್ ಡೈ ಕಾಸ್ಟ್ ಮಿಷನರಿ ಪ್ರೈವೇಟ್

ಲಿಮಿಟೆಡ್, ಕೆಂಚನಕುಪ್ಪೆ ಗ್ರಾಮ, ಬಿಡದಿ ಹೋಬಳಿ, ರಾಮನಗರ ಜಿಲ್ಲೆ, ಇವರ ಕಂಪೆನಿಯಿಂದ ಟ್ರಕ್ ಸಂಖ್ಯೆ:ಟಿಎನ್–23–3895 ರಲ್ಲಿ ಚನ್ನೈಗೆ ಸಾಗಾಣಿಕೆ ಮಾಡಬೇಕಾಗಿದ್ದ ಯಂತ್ರೋಪಕರಣಗಳ ಅಗತ್ಯ ಸಾಗಾಣಿಕೆ ದಾಖಲೆಗಳೊಡನೆ ವಾಣಿಜ್ಯ ಮತ್ತು ಮಾರಾಟ ತೆರಿಗೆ ಕೆಂಗೇರಿ ಕಛೇರಿಯ ವಾ.ತೆ.ಅ. ಆದ ಶ್ರೀ ಚಿದಂಬರಮೂರ್ತಿಯವರು ಈ ವಾಹನ ತಡೆದು ದಾಖಲಾತಿಗಳು ಕ್ರಮಬದ್ಧವಾಗಿಲ್ಲವೆಂದು ಆರೋಪಿಯವರು ವಾಹನವನ್ನು ಬಿಡುಗಡೆಗೊಳಿಸಲು ರೂ. 25,000/– ಗಳ ಅಕ್ರಮ ಸಂಭಾವನೆಯನ್ನು ಒತ್ತಾಯಿಸಿ ನಂತರ ಫಿರ್ಯಾದಿಯವರ ಮೇಲ್ಕಂಡ ಸಂಸ್ಥೆಯೊಂದಿಗೆ ನಡೆಸಿದ ಮಾತುಕತೆಯಿಂದ ಪ್ರಕರಣ ದಾಖಲಿಸದೇ ಸದರಿ ಟ್ರಕ್‌ನ್ನು ಬಿಟ್ಟಿದ್ದು, ಈ ರೀತಿ ಬಿಡುಗಡೆಗೊಳಿಸಲು ರೂ. 5,000/– ಗಳ ಅಕ್ರಮ ಸಂಭಾವನೆ ಪಡೆಯಲು ಈ ಅಧಿಕಾರಿಯವರ ಪ್ರತಿನಿಧಿಯಾದ 2ನೇ ಆರೋಪಿ ಶ್ರೀ ಎಂ.ಎಂ. ರವಿಕುಮಾರ್ ಎಂಬುವವರನ್ನು ಕಳುಹಿಸಿರುತ್ತಾರೆ . ಆದರೆ ಫಿರ್ಯಾದುದಾರರಿಗೆ ಅಕ್ರಮ ಸಂಭಾವನೆ ಕೊಡಲು ಇಷ್ಟವಿಲ್ಲದ ಕಾರಣ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ರಾಮನಗರ, ಇಲ್ಲಿ ಸಲ್ಲಿಸಿದ ದೂರನ್ನು, ಲಂಚ ನಿರೋಧಕ ಕಾಯ್ದೆ 1988ರ ಕಲಂ7 (13)(1)(ಡಿ)ರ ಜೊತೆಗೆ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ:1/2007ರಲ್ಲಿ ದಾಖಲಿಸಿಕೊಂಡು ತನಿಖೆ ಕೈಗೊಂಡಿರುತ್ತಾರೆ.

ತನಿಖಾಧಿಕಾರಿಯವರು ಪಂಚ ಸಾಕ್ಷಿಗಳು ಮತ್ತು ಸಿಬ್ಬಂದಿ ವರ್ಗದವರೊಂದಿಗೆ 6.12.2007 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಆರೋಪಿತ ಅಧಿಕಾರಿಯಾದ ಶ್ರೀ ಚಿದಂಬರಮೂರ್ತಿ, ಇವರು ಅಕ್ರಮ ಸಂಭಾವನೆಯನ್ನು ಸ್ವೀಕರಿಸಲು ಕಳುಹಿಸಿದ್ದ ಶ್ರೀ ರವಿಕುಮಾರ್ ಎಂಬುವವರು ಮೇಲ್ಕಂಡ ಕಂಪೆನಿಗೆ ಹಾಜರಾಗಿ ಫಿರ್ಯಾದುದಾರರಿಂದ ರೂ. 5,000/– ಗಳ ಅಕ್ರಮ ಸಂಭಾವನೆಯನ್ನು ಸ್ವೀಕರಿಸುವಾಗ ನೆರಳು ಸಾಕ್ಷಿದಾರರ ಸಮಕ್ಷಮ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿರುತ್ತಾರೆ.

ಈ ರೀತಿ ಆರೋಪಿ–2 ಶ್ರೀ ಎಂ.ಎಂ. ರವಿಕುಮಾರ್, ಇವರು ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದ ನಂತರ ಇವರ ಎರಡು ಕೈಬೆರಳುಗಳನ್ನು ತೊಳೆಸಿದ ದ್ರಾವಣದ ಬಣ್ಣ ಬದಲಾಗಿ, ಇವರು ಅಕ್ರಮ ಸಂಭಾವನೆಯನ್ನು ಪಡೆದಿರುವುದು ದೃಢಪಟ್ಟಿರುತ್ತದೆ. ಈ ಮೊತ್ತವನ್ನು ಆರೋಪಿತರ ಜರ್ಕಿನ್ ಜೇಬಿನಿಂದ ವಶಪಡಿಸಿಕೊಳ್ಳಲಾಗಿದೆ. ಆರೋಪಿ–2 ಶ್ರೀ ರವಿಕುಮಾರ್ ರವರು ಅವರ ಹೇಳಿಕೆಯಲ್ಲಿ ಶ್ರೀ ಹೆಚ್.ಎಸ್. ಚಿದಂಬರ ಮೂರ್ತಿ, ವಾ.ತೆ.ಅ., ಇವರ ಸೂಚನೆಯಂತೆ ಫಿರ್ಯಾದುದಾರರಿಂದ ಅಕ್ರಮ ಸಂಭಾವನೆಯನ್ನು ಸ್ವೀಕರಿಸಿರುವುದಾಗಿ ಹೇಳಿಕೆಯಲ್ಲಿ ತಿಳಿಸಿರುವುದಾಗಿ ವರದಿ ಮಾಡಿ, ಈ ಹಿನ್ನೆಲೆಯಲ್ಲಿ ಆರೋಪಿತ ಸರ್ಕಾರಿ ನೌಕರರಾದ ಶ್ರೀ ಹೆಚ್.ಎಸ್. ಚಿದಂಬರ ಮೂರ್ತಿ, ವಾ.ತೆ.ಅ. ಇವರ ಮೇಲಿನ ಭ್ರಷ್ಟಾಚಾರವು ಮೇಲ್ನೋಟಕ್ಕೆ ಸಾಭೀತಾಗಿರುವುದಾಗಿ ಲೋಕಾಯುಕ್ತವು ತಿಳಿಸಿ, ಆಪಾದಿತ ಅಧಿಕಾರಿಯಾದ ಶ್ರೀ ಚಿದಂಬರಮೂರ್ತಿ ಇವರು ಸುಗಮ ತನಿಖೆಗೆ ಅಡ್ಡಿಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಅಥವಾ ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಕೂಡಲೇ ಅಮಾನತ್ತಿನಲ್ಲಿಟ್ಟು ಅವರ ಲೀನ (ಸ್ಥಾನ)ವನ್ನು ಬೇರೆ ಕಡೆಗೆ ವರ್ಗಾಯಿಸಲು ಲೋಕಾಯುಕ್ತವು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(1) ರ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ, ಜಾಗೃತಿ ವಿಭಾಗ, ಬೆಂಗಳೂರು, ಇವರ ವಿರುದ್ಧ ಗುನ್ಹೆ ಸಂಖ್ಯೆ:1/2007 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ರಾಮನಗರ, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ(2) ರ ದಿನಾಂಕ:21.11.2008ರ ಪತ್ರದೊಡನೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೇಯ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ(2) ರ ಪತ್ರ ದಿನಾಂಕ:21.11.2008 ರೊಂದಿಗೆ ಕಳುಹಿಸಿ ಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ಕೆ.ಕೆ. ನಂಜಪ್ಪ, ವ್ಯವಸ್ಥಾಪಕ ನಿರ್ದೇಶಕರು, ಪ್ಲೋರೊ ಸೀಲ್ಸ್ ಡೈಕ್ಯಾಸ್ಟಿಂಗ್ ಪ್ರೈ.ಲಿ. ಬಿಡದಿ, ಇವರ ದೂರು ದಿನಾಂಕ:6.12.2007.

2) ಪ್ರಾಯೋಗಿಕ ಪಂಚನಾಮೆ ದಿನಾಂಕ:6.12.2007.

3) ಟ್ರ್ಯಾಪ್‌ನ ಮಹಜರ್ ದಿನಾಂಕ:6.12.2007

4) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್‌ಐ/ಸಿಎಂಇ/ಲೋಕ್–134/07–08 ದಿನಾಂಕ: 1–2–2008.

5) ಶ್ರೀ ಹೆಚ್.ಆರ್. ರಾಮಚಂದ್ರಯ್ಯ, ಸಹಾಯಕ ನಿರ್ದೇಶಕರು, ತೋಟಗಾರಿಕೆ ಇಲಾಖೆ, ರಾಮನಗರ, ಇವರು ಜಾಗವನ್ನು ತೋರಿಸಿದ ಆಧಾರದ ಮೇಲೆ ತಯಾರಿಸಲಾದ ಕೃತ್ಯ ನಡೆದ ಸ್ಥಳದ ನಕಾಶೆ.

**6) ಸಾಕ್ಷಿ ಹೇಳಿಕೆಗಳ ಪಟ್ಟಿ:**

1. ಶ್ರೀ ಕೆ. ಕೆ. ನಂಜಪ್ಪ, ವ್ಯವಸ್ಥಾಪಕ ನಿರ್ದೇಶಕರು, ಪ್ಲೋರೋ ಸೀಲ್ಸ್ ಡೈಕ್ಯಾಸ್ಟಿಂಗ್ ಪ್ರೈ.ಲಿ. ಬಿಡದಿ
2. ಶ್ರೀ ಹೆಚ್. ರವಿ ಬಿನ್ ಹಾಲಾನಾಯಕ, ಅಕೌಂಟ್ಸ್ ಮ್ಯಾನೇಜರ್ , ಪ್ಲೋರೋ ಸೀಲ್ಸ್ ಡೈಕ್ಯಾಸ್ಟಿಂಗ್ ಪ್ರೈ.ಲಿ. ಬಿಡದಿ.
3. ಶ್ರೀ ಹೆಚ್.ಆರ್. ರಾಮಚಂದ್ರಯ್ಯ ಬಿನ್ ಲೇ:ರಾಮೇಗೌಡ, ಸಹಾಯಕ ತೋಟಗಾರಿಕೆ ಅಧಿಕಾರಿ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಮನಗರ.
4. ಶ್ರೀ ಕೆ. ಬೋರೇಗೌಡ ಬಿನ್ ಕಪನೀಗೌಡ, ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಮನಗರ.
5. ಶ್ರೀ ನವೀನ್ ಬಹದ್ದೂರ್ ಬಿನ್ ಮೀನ ಬಹದ್ದೂರ್, ಸೆಕ್ಯೂರಿಟಿ ಗಾರ್ಡ್, ಪ್ಲೋರೋ ಸೀಲ್ಸ್ ಡೈಕ್ಯಾಸ್ಟಿಂಗ್ ಮಿಷನರೀಸ್ ಪ್ರೈ.ಲಿ. ಬಿಡದಿ ರಾಮನಗರ ತಾಲ್ಲೂಕು.
6. ಶ್ರೀ ಎಂ. ಗೋಪಾಲ್ ಬಿನ್ ಮುನಿಯಪ್ಪ, ಗುಮಾಸ್ತರು, ಶ್ರೀ ಕುಮಾರ್ ಟ್ರಾನ್ಸ್ ಪೋರ್ಟ್ಸ್, ಹೆಚ್. ಸಿದ್ದಯ್ಯ ರಸ್ತೆ, ಬೆಂಗಳೂರು.
7. ಶ್ರೀ ರಾಜ ಬಿನ್ ದೀನ್ ದಯಾಳ್, ನಂ. 02/70, ಭಜನ್ ಕೊಯಿಲ್ ಬೀದಿ, ನಂದಿ ಹಾಲಂ ಗ್ರಾಮ,. ರತ್ನಗಿರಿ ಪೋಸ್ಟ್, ವಾಲಜಾ ತಾಲ್ಲೂಕು, ವೆಲ್ಲೂರು ಜಿಲ್ಲೆ, ತಮಿಳುನಾಡು.
8. ಶ್ರೀ ಎನ್. ಪ್ರಭಾಕರ್, ಕಿರಿಯ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ.
9. ಶ್ರೀ ಕೆ.ಜಿ. ಸತ್ಯನಾರಾಯಣ, ಪೊಲೀಸ್, ಪೇದೆ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೆಂಗಳೂರು.
10. ಶ್ರೀ ಎಸ್.ಬಿ. ಚಂದ್ರಶೇಖರ್, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು
11. ಶ್ರೀ ಬಿ.ಪಿ ಪ್ರವೀಣ್, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.
12. ಶ್ರೀ ಎಸ್.ಕೆ. ಸುರೇಶ್, ಪೊಲೀಸ್ ಪೇದೆ, ಸಂಚಾರ ಪೊಲೀಸ್ ಠಾಣೆ ರಾಮನಗರ.
13. ಶ್ರೀ ಎಸ್.ಟಿ. ಬೋರೇಗೌಡ, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲೆ, ರಾಮನಗರ.
14. ಶ್ರೀ ಎಸ್. ಬಸವರಾಜು, ಆರಕ್ಷಕ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮಂಡ್ಯ.

7. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:ಟ್ರಕ್ ನಂ:ಟಿ.ಎನ್. 09–3895.

**ವಿಷಯ:** ಮೆ:ಪ್ಲೋರೋ ಸೀಲ್ಸ್ ಡೈಕ್ಯಾಸ್ಟಿಂಗ್ ಪ್ರೈ.ಲಿ. ಬಿಡದಿ, ರಾಮನಗರ ತಾಲ್ಲೂಕು, ಈ ಕಂಪನಿಯಿಂದ ಟ್ರಕ್ ನಂ:ಟಿ.ಎನ್. 09–3895 ನಲ್ಲಿ ಚನ್ನೈಗೆ ಸಾಗಾಣಿಕೆ ಮಾಡಬೇಕಾಗಿರುವ ಯಂತ್ರೋಪಕರಣಗಳನ್ನು ಲೋಡ್ ಮಾಡಿ, ಸಾಗಾಣಿಕೆ ಮಾಡುವ ಬಗ್ಗೆ.

8. ಈ ಕೆಳಕಂಡ ಆಪಾದಿತರ ಸಮಜಾಯಿಷಿ/ಹೇಳಿಕೆಗಳು:

1. ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ, ಜಾಗೃತಿ ವಿಭಾಗ, ಬೆಂಗಳೂರು
2. ಶ್ರೀ ಎಂ.ಎಂ. ರವಿಕುಮಾರ್ ಬಿನ್ ಮೋಟಯ್ಯ, ಮಾದಾಪುರ ಗ್ರಾಮ, ಬಿಡದಿ ಹೋಬಳಿ, ರಾಮನಗರ ತಾಲ್ಲೂಕು (ಖಾಸಗಿ ವ್ಯಕ್ತಿ)

ತನಿಖಾಧಿಕಾರಿಯವರಾದ ಶ್ರೀ ಎಸ್. ಬಸವರಾಜು, ಆರಕ್ಷಕ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮಂಡ್ಯ ಮತ್ತು ಶ್ರೀ ಹೆಚ್. ಮಂಜಪ್ಪ, ಆರಕ್ಷಕ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ರಾಮನಗರ ಇವರು ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ, ಚಲಿಸುವ ಶೋಧನಾ ಠಾಣೆ, ಬೆಂಗಳೂರು, ಇವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ರಾಮನಗರ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ:1/2007 ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2) ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ, ಜಾಗೃತಿ ವಿಭಾಗ, ಬೆಂಗಳೂರು. ಇವರು ಫಿರ್ಯಾದಿಯಾದ ಶ್ರೀ ಕೆ.ಕೆ. ನಂಜಪ್ಪ. ವ್ಯವಸ್ಥಾಪಕ ನಿರ್ದೇಶಕರು, ಪ್ಲೋರೋ ಸೀಲ್ಸ್ ಡೈಕ್ಯಾಸ್ಟಿಂಗ್ ಪ್ರೈಲಿ. ಬಿಡದಿ, ಇವರ ಕಂಪನಿಯಿಂದ ಟ್ರಕ್ ನಂ:ಟಿ.ಎನ್. 09–3895 ನಲ್ಲಿ ಚನ್ನೈಗೆ ಸಾಗಾಣಿಕೆ ಮಾಡಬೇಕಾಗಿರುವ ಯಂತ್ರೋಪಕರಣಗಳನ್ನು ಲೋಡ್ ಮಾಡಿ, ಅಗತ್ಯ ಸಾಗಾಣಿಕೆಗಾಗಿ ಸದರಿ ವಾಹನವು ಕೆಂಗೇರಿಯ ವಾಣಿಜ್ಯ ತೆರಿಗೆಯ ಚೆಕ್ ಪೋಸ್ಟ್ ಮೂಲಕ ಹಾದುಹೋಗುವ ಸಲುವಾಗಿ ಸರ್ಕಾರಿ ಕೆಲಸವನ್ನು ಮಾಡಲು ರೂ. 25,000/– ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಅಧಿಕಾರಿಯವರ ವಿರುದ್ಧ

ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿರುವುದಾಗಿರುತ್ತದೆ. ಸದರಿ ದೂರಿನಲ್ಲಿ ತನಿಖಾಧಿಕಾರಿಯವರು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:6.12.2007 ರಂದು ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಸೂಚನೆಯ ಮೇರೆಗೆ ಅವರ ಪರವಾಗಿ ಶ್ರೀ ಎಂ.ಎಂ. ರವಿಕುಮಾರ್, ಬಿನ್ ಮೋಟಯ್ಯ, ಮಾದಾಪುರ ಗ್ರಾಮ, ಬಿಡದಿ ಹೋಬಳಿ, ರಾಮನಗರ ತಾಲ್ಲೂಕು ರಾಮನಗರ, ಎಂಬ ಖಾಸಗಿ ವ್ಯಕ್ತಿಯು ಅಕ್ರಮ ಸಂಭಾವನೆಯಾದ ರೂ. 5,000/– ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಖಾಸಗಿ ವ್ಯಕ್ತಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ, ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ವರದಿಯಿಂದಲು ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ಹಾಗೂ ಆಪಾದಿತ ಖಾಸಗಿ ವ್ಯಕ್ತಿಯ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 5,000/– ಗಳನ್ನು ಶ್ರೀ ಎಂ.ಎಂ. ರವಿಕುಮಾರ್, (ಖಾಸಗಿ ವ್ಯಕ್ತಿ)ರವರಿಂದ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ, ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಹೆಚ್. ಎಸ್. ಚಿದಂಬರಮೂರ್ತಿ, ವಾ.ತೆ.ಅ., ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13 (1)(ಡಿ)ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7, 13 (1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾಧಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19 (ಸಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿಯವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13(1)(ಡಿ) ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆಇ 7 ವಾತೆತ 2008, ಬೆಂಗಳೂರು, ದಿನಾಂಕ:11ನೇ ಮಾರ್ಚ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಎಸ್. ಚಿದಂಬರಮೂರ್ತಿ, ವಾಣಿಜ್ಯ ತೆರಿಗೆ ಅಧಿಕಾರಿ, ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ಮೇಲ್ಕಂಡ ನಿಯಮಗಳನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ:11.3.2009ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 878

**ಮಹಬೂಬ್ ಖಾನ್**

ಪೀಠಾಧಿಕಾರಿ, ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

## PERSONNEL AND ADMINISTRATIVE REFORMS SECRETARIAT

**Sub:** Grant of Revised pension under Para 2(a) of Part III of the 1st Schedule of High Court Judges (Conditions of Service) Act 1954-Approval of Government for adoption of pensionary Benefits-regarding.

**Read:**
1. Letter No. PM/HCJ/ 2009-10/72, dated:6.5.2009, From Accountant General Karnataka.
2. Letter No. L11016/1/2009-JUS, dated:27.2.2009, of the Director (HC&J) Department of Justice, Ministry of Law & Justice, Government of India, New Delhi.

3. Letter No. RPS /6/2009, dated:15.4.2009, From, Registrar General High Court of Karnataka,Bangalore.

**Preamble:**

Accountant General, Karnataka in this Letter dated:6.5.2009 read at (1) above has informed that, Government of India in their Letter dated:27.2.2009, read at (2) above and have revised pension under Para 2(a) of the 1st Schedule of a High Court Judges (Conditions of Service) Act 1954 with effect from 1.1.2006 to Retired High Court Judges (Retired prior to 1.1.2006) Governed by Part III of the Act in terms of their O.M. No. 38/37/08-P & PW (A) dated:1.9.2008 subject to adoption of the same by the respective State Governments to grant the benefit of increased Pensions on similar lines to their Employees. The Accountant General has therefore requested to communicate the orders of the Government regarding adoption of the provisions of O.M. dated:1.9.2008 to the retired High Court Judges Governed by Part III of the Act./ The Registrar General, High Court of Karnataka, vide Letter dated:15.4.2009 read at(3) above has also requested for Communication of Government Sanction to Accountant General early. After consideration the proposal the Government is to pleased to issue the following order.

**Order No. DPAR 31 SHC 2009, Bangalore, 27th June, 2009**

Sanction of Government is accorded for adoption of revised pensionary benifit contemplated in O.M. No. 38/37/08-P & PW (A) dated:1.9.2008 of the Government of India to the Part III High Court Judges who are elevated from the pensionable posts under the State and who have retired from service prior to 1.1.2006 subject to the conditions specified thereunder as a special case.

This order issues with the concurrence of Finance Department vide their U.O. Note No. FD/163/Ser-2/2009, dated:17.6.2009.

By Order and in the name of Governor of Karnataka,

**M.S. SHIVARAM**

P.R. 1606

Under Secretary to Government,

Department of Personnel & Administrative Reforms (Services-3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಸ್. ಸಿದ್ದರಾಮಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಇಲಾಖಾ ವಿಚಾರಣೆ– ದಂಡನೆ ವಿಧಿಸಿದ ಆದೇಶವನ್ನು ಪರಾಮರ್ಶಿಸಿ ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 105 ಎಸ್‌ಇಎನ್ 2002, ದಿನಾಂಕ:23.7.2003.
2. ರಿಟ್ ಅರ್ಜಿ ಸಂಖ್ಯೆ 30726/2004 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 1.4.2008 ರಂದು ನೀಡಿದ ಆದೇಶ.
3. ಸನ್ಮಾನ್ಯ ಉಪ ಲೋಕಾಯುಕ್ತರ ವರದಿ ಸಂಖ್ಯೆ ಲೋಕ್/ಎಆರ್‌ಇ–3/ಇಎನ್‌ಕ್ಯೂ–11/1996–97, ದಿನಾಂಕ:20.6.2008.
4. ನೋಟೀಸ್ ಸಂಖ್ಯೆ ಸಿಆಸುಇ 157 ಎಸ್‌ಇಎನ್ 2004 ದಿನಾಂಕ:26.8.2008.
5. ಶ್ರೀ ಎಸ್ .ಸಿದ್ದರಾಮಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ಉತ್ತರ ದಿನಾಂಕ:8.9.2008.
6. ಪತ್ರದ ಸಂಖ್ಯೆ ಸಿಆಸುಇ 157 ಎಸ್‌ಇಎನ್ 2004, ದಿನಾಂಕ:9.1.2009.
7. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ ಪಿಎಸ್‌ಸಿ 179 ಸಿಎನ್‌ಎಸ್ 2008, ದಿನಾಂಕ:20.4.2008.

**ಪ್ರಸ್ತಾವನೆ:**

ಶ್ರೀ ಎಸ್. ಸಿದ್ದರಾಮಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಅವರು ಕರ್ನಾಟಕ ರಾಜ್ಯ ನಿರ್ಮಾಣ ನಿಗಮ, ರಾಯಚೂರು ಇಲ್ಲಿ ಜನರಲ್ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ರಾಯಚೂರು–ಗಿಣಿಗೇರ ರಸ್ತೆ ಕಾಮಗಾರಿ

ನಿರ್ಮಾಣದಲ್ಲಿ ಹೆಚ್ಚಿನ ಹಣವನ್ನು ಗುತ್ತಿಗೆದಾರರಿಗೆ ಪಾವತಿಸಿ ದುರ್ನಡತೆಯನ್ನು ಎಸಗಿದ್ದಕ್ಕಾಗಿ ಅವರ ವಿರುದ್ಧ ವಿಚಾರಣೆ ನಡೆದು, ಮೇಲೆ (1)ರಲ್ಲಿ ಓದಲಾದ ದಿನಾಂಕ:23.7.2003ರ ಸರ್ಕಾರಿ ಆದೇಶದಲ್ಲಿ ಅವರ ಸಂಪೂರ್ಣ ವಿಶ್ರಾಂತಿ ವೇತನವನ್ನು ಶಾಶ್ವತವಾಗಿ ತಡೆಹಿಡಿಯಲಾಗಿತ್ತು. ಈ ಆದೇಶವನ್ನು ಪ್ರಶ್ನಿಸಿ ಅಧಿಕಾರಿಯು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:30726/2004ನ್ನು ಸಲ್ಲಿಸಲಾಗಿ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ (2) ರಲ್ಲಿ ಓದಲಾದ ದಿನಾಂಕ:1.4.2008ರ ಆದೇಶದಲ್ಲಿ ಉಪಲೋಕಾಯುಕ್ತರಿಂದ ವಿಚಾರಣೆ ನಡೆಸಿರುವಾಗ ಲೋಕಾಯುಕ್ತರು ಶಿಫಾರಸ್ಸು ಕಳುಹಿಸಬಾರದಾಗಿತ್ತು. ಅದು ಕಾಯಿದೆಗೆ ವಿರುದ್ಧವಾಗುತ್ತದೆ. ಆದ್ದರಿಂದ ಸದರಿ ಹಂತದಿಂದ ವಿಚಾರಣೆಯನ್ನು ಮುಂದುವರೆಸುವಂತೆ ಪ್ರಕರಣವನ್ನು ಉಪಲೋಕಾಯುಕ್ತರಿಗೆ ಮರಳಿಸಿತು.

ಅದರಂತೆ ಮರು ವಿಚಾರಣೆ ಕೈಗೊಂಡ ಸನ್ಮಾನ್ಯ ಉಪಲೋಕಾಯುಕ್ತರು ಮೇಲೆ (3)ರಲ್ಲಿ ಓದಲಾದ ದಿನಾಂಕ:20.6.2008ರ ಪರಿಷ್ಕೃತ ಶಿಫಾರಸ್ಸನ್ನು ಸರ್ಕಾರಕ್ಕೆ ಕಳುಹಿಸಿ, ಹಿಂದೆ ಶಿಫಾರಸ್ಸು ಮಾಡಿದ ದಂಡನೆಗೆ ಬದಲಾಗಿ ಶ್ರೀ ಎಸ್. ಸಿದ್ದರಾಮಪ್ಪ ಅವರು ವಯೋ ನಿವೃತ್ತಿ ಹೊಂದಿರುವುದರಿಂದ ಅವರ ವಿಶ್ರಾಂತಿ ವೇತನದ ಶೇಕಡ 25ರಷ್ಟು ಮೊತ್ತವನ್ನು ಶಾಶ್ವತವಾಗಿ ಕಡಿತಗೊಳಿಸುವಂತೆ ಶಿಫಾರಸ್ಸು ಮಾಡಿದರು. ಈ ಶಿಫಾರಸ್ಸನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ:26.8.2008ರ ನೋಟೀಸಿನ ಮೂಲಕ ನಿವೃತ್ತ ಅಧಿಕಾರಿಗೆ ಕಳುಹಿಸಿ ಶಿಫಾರಸ್ಸಿನ ಬಗ್ಗೆ ಹೇಳುವುದು ಏನಾದರೂ ಇದ್ದರೂ ಸಲ್ಲಿಸಲು ಅವಕಾಶವನ್ನು ಕಲ್ಪಿಸಲಾಗಿತ್ತು.

ಶ್ರೀ ಎಸ್. ಸಿದ್ದರಾಮಪ್ಪ ಅವರು ಮೇಲೆ (5)ರಲ್ಲಿ ಓದಲಾದ ದಿನಾಂಕ:8.9.2008ರ ಉತ್ತರವನ್ನು ಸಲ್ಲಿಸಿ ಈಗಾಗಲೇ ವಿಧಿಸಿರುವ ದಂಡನೆಯಿಂದ ತಮಗೆ ಸಾಕಷ್ಟು ಉಪಟಳ ಉಂಟಾಗಿದ್ದು, ಈಗ 5 ವರ್ಷದ ನಂತರ ಸನ್ಮಾನ್ಯ ಉಪಲೋಕಾಯುಕ್ತರು ಮರು ಪ್ರಸ್ತಾವನೆಯನ್ನು ಸಲ್ಲಿಸಿರುವುದರಿಂದ ಈ ಹಿಂದೆ ಸಲ್ಲಿಸಲಾಗಿದ್ದ ವಿವರಗಳನ್ನು ಆಧರಿಸಿ ನ್ಯಾಯ ದೊರಕಿಸಿಕೊಡಲು ಕೋರಿದ್ದಾರೆ.

ಮೇಲಿನ ವಾಸ್ತವಾಂಶಗಳಿಂದಾಗಿ ಪ್ರಕರಣದಲ್ಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸನ್ಮಾನ್ಯ ಉಪಲೋಕಾಯುಕ್ತರು ಶಿಫಾರಸ್ಸು ಮಾಡಿರುವಂತೆ ಹಾಗೂ ರಾಜ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಸಂಪೂರ್ಣ ವಿಶ್ರಾಂತಿ ವೇತನವನ್ನು ಶಾಶ್ವತವಾಗಿ ತಡೆಹಿಡಿಯುವುದಕ್ಕೆ ಬದಲಾಗಿ ಶ್ರೀ ಎಸ್. ಸಿದ್ದರಾಮಪ್ಪ ಅವರ ವಿಶ್ರಾಂತಿ ವೇತನದ ಶೇಕಡ 25ರಷ್ಟು ಮೊತ್ತವನ್ನು ಶಾಶ್ವತವಾಗಿ ಕಡಿತಗೊಳಿಸುವುದು ಸಮಂಜಸವೆಂದು ಪರಿಗಣಿಸಿದ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ಪರಿಷ್ಕೃತ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 157 ಎಸ್ಇಎನ್ 2004, ಬೆಂಗಳೂರು, ದಿನಾಂಕ:30ನೇ ಜೂನ್ 2009**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 (1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ಸಿದ್ದರಾಮಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಅವರಿಗೆ ದಿನಾಂಕ:23.7.2003ರ ಸರ್ಕಾರಿ ಆದೇಶದಲ್ಲಿ ವಿಧಿಸಲಾಗಿದ್ದ ಸಂಪೂರ್ಣ ವಿಶ್ರಾಂತಿ ವೇತನವನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ಮಾರ್ಪಡಿಸಿ ಅವರ ಮಾಸಿಕ ವಿಶ್ರಾಂತಿ ವೇತನದ ಶೇಕಡ 25ರಷ್ಟು ಮೊತ್ತವನ್ನು ನಿರಂತರವಾಗಿ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1607

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 18 ಇಮುವಿ 2008, ಬೆಂಗಳೂರು, ದಿನಾಂಕ: 14ನೇ ಜುಲೈ, 2009**

**ವಿಷಯ:** ಶ್ರೀ ಕೆ. ಜೈಪ್ರಕಾಶ್ ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಬಿ.ಎಲ್. ರವೀಂದ್ರಬಾಬು, ಸೂಪರಿಂಟೆಂಡಿಂಗ್ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಅವರುಗಳ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಕೆ. ಜೈಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಬಿ.ಎಲ್. ರವೀಂದ್ರಬಾಬು, ಸೂಪರಿಂಟೆಂಡಿಂಗ್ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಅವರುಗಳನ್ನು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 18 ಇಮುವಿ 2008, ದಿನಾಂಕ:9.7.2008ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿ ಇಟ್ಟಿರುವುದರಿಂದಲೂ,

ಶ್ರೀ ಕೆ. ಜೈಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಬಿ.ಎಲ್. ರವೀಂದ್ರಬಾಬು, ಸೂಪರಿಂಟೆಂಡಿಂಗ್ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಅವರುಗಳ ಅಮಾನತ್ತನ್ನು ರದ್ದುಪಡಿಸಿ ಅವರುಗಳನ್ನು ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,. ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ. ಜೈಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಬಿ.ಎಲ್. ರವೀಂದ್ರಬಾಬು, ಸೂಪರಿಂಟೆಂಡಿಂಗ್ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಅವರುಗಳ ವಿರುದ್ಧ ಶಿಸ್ತಿನ ಕ್ರಮವನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅವರುಗಳ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸರ್ಕಾರಿ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಕೆ. ಜೈಪ್ರಕಾಶ್, ಮುಖ್ಯ ಇಂಜಿನಿಯರ್ ಅವರನ್ನು ಸೂಕ್ತ ಹುದ್ದೆಗೆ ನಿಯುಕ್ತಿಗೊಳಿಸಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

ಶ್ರೀ ಬಿ.ಎಲ್. ರವೀಂದ್ರಬಾಬು, ಸೂಪರಿಂಟೆಂಡಿಂಗ್ ಇಂಜಿನಿಯರ್, ಅವರನ್ನು ಸೂಕ್ತ ಹುದ್ದೆಗೆ ನಿಯುಕ್ತಿಗೊಳಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1648 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ತಿದ್ದೋಲೆ**

**ಸಂಖ್ಯೆ:ಸಿಆಸುಇ 495 ಸಅಸೇ 2008, ಬೆಂಗಳೂರು, ದಿನಾಂಕ:25ನೇ ಜೂನ್ 2009**

ಶ್ರೀ ಎಂ.ಆರ್. ಅನಂತ್, ಮಾನ್ಯ ಹಜ್, ವಕ್ಫ್ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಸಚಿವರ ವಿಶೇಷಾಧಿಕಾರಿ ಇವರ ಗುತ್ತಿಗೆ ಆಧಾರದ ನೇಮಕಾತಿಯ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸಿ ಹೊರಡಿಸಲಾದ ಆದೇಶ ಸಂಖ್ಯೆ ಸಿಆಸುಇ 495 ಸಅಸೇ 2008, ದಿನಾಂಕ:1.12.2008ರ ಅನುಬಂಧದ ಖಂಡಿಕೆ 3 ಮತ್ತು 8ನ್ನು ದಿನಾಂಕ:16.5.2009 ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

**ವೇತನ ಮತ್ತು ಭತ್ಯೆಗಳು** :ಶ್ರೀ ಎಂ.ಆರ್.ಅನಂತ ಇವರು ಒಪ್ಪಂದದ ನೇಮಕಾತಿಯ ಅವಧಿಯಲ್ಲಿ ಅವರಿಗೆ ಮಾತೃ ಇಲಾಖೆಯಲ್ಲಿ ಪಡೆಯುತ್ತಿದ್ದ ವೇತನ, ತುಟ್ಟಿ ಭತ್ಯೆ ಹಾಗೂ ಬೆಂಗಳೂರಿಗೆ ಅನ್ವಯವಾಗುವ ಮನೆ ಬಾಡಿಗೆ ಭತ್ಯೆ ನಗರ ಪರಿಹಾರ ಭತ್ಯೆ ಹಾಗೂ ಮಾನ್ಯ ಸಚಿವರ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಗೆ ನಿಗಧಿಪಡಿಸಿರುವ ವಿಶೇಷ ವೇತನವನ್ನು ಪಡೆಯಲು ಅರ್ಹರಿರುತ್ತಾರೆ. ಆದರೆ ಅಧಿಕಾರಿಯು ನಿಯೋಜನೆಯ ಭತ್ಯೆ ಅನ್ಯ ಸೇವಾ ಭತ್ಯೆ ಅಥವಾ ಇನ್ನಾವುದೇ ಊಟದ ಭತ್ಯೆ, ಹೆಚ್ಚಿನ ಕಾಲ ಭತ್ಯೆ, ಬೋನಸ್, ಅನುಗ್ರಹ ಪೂರ್ವ ಭತ್ಯೆ ಪಡೆಯಲು ಅರ್ಹರಲ್ಲ.

**ಭವಿಷ್ಯ ನಿಧಿ ವಂತಿಗೆ:** ಶ್ರೀ ಎಂ.ಆರ್. ಅನಂತ್ ಇವರಿಗೆ ಮೂಲ ವೇತನ ಮತ್ತು ತುಟ್ಟಿ ಭತ್ಯೆಯ ಶೇ. 12 ರಷ್ಟು ಭವಿಷ್ಯ ನಿಧಿ ವಂತಿಗೆ ಮತ್ತು ಶೇ. 0.65 ರಷ್ಟು ಆಡಳಿತಾತ್ಮಕ ವೆಚ್ಚ ವಂತಿಗೆ ಹಾಗೂ ಶೇ. 0.05 ರಷ್ಟನ್ನು ತನಿಖಾ ವೆಚ್ಚವಾಗಿ ಸರ್ಕಾರದ ವತಿಯಿಂದ ಪಾವತಿಸುವುದು ಮತ್ತು ಇವರ ಮೂಲ ವೇತನದ ಶೇ. 12 ಹಾಗೂ ತುಟ್ಟಿ ಭತ್ಯೆಯ ಶೇ. 12 ರಷ್ಟನ್ನು ಭವಿಷ್ಯ ನಿಧಿ ವಂತಿಗೆಯಾಗಿ ಪ್ರತಿ ತಿಂಗಳಿನ ಸಂಬಳದಲ್ಲಿ ಕಟಾಯಿಸಿ ಕೋಲಾರ ಹಾಲು ಒಕ್ಕೂಟದ ಉದ್ಯೋಗಿಗಳ ಭವಿಷ್ಯ ನಿಧಿಗೆ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1671 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎಂ.ಎ. ರಾಜಶೇಖರ್, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ )ಅಧಿಕಾರಿ ಮತ್ತು ಶ್ರೀ ಡಿ. ರಂಗಯ್ಯ ನಿವೃತ್ತ ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರ ವಿರುದ್ದ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಅಪರ ನಿಬಂಧಕರು ವಿಚಾರಣೆಗಳು–1. ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ:25/28.4.09 ಪತ್ರ ಸಂಖ್ಯೆ: Compt/Uplok/BCD-343/2007.

**ಪ್ರಸ್ತಾವನೆ:**

ಅಪರ ನಿಬಂಧಕರು ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದೊಂದಿಗೆ ಕರ್ನಾಟಕ ಲೋಕಾಯುಕ್ತ ಅಧಿನಿಯಮದ ನಿಯಮ 12(3)ರಡಿ ಸನ್ಮಾನ್ಯ ಉಪ ಲೋಕಾಯುಕ್ತರ ದಿನಾಂಕ:25.4.09 ರ ವರದಿಯನ್ನು ಕಳುಹಿಸಿರುತ್ತಾರೆ. ಈ ವರದಿಯಲ್ಲಿ ಸನ್ಮಾನ್ಯ ಉಪ ಲೋಕಾಯುಕ್ತರು ಶ್ರೀ ಎಂ.ಎ. ರಾಜಶೇಖರ್, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಮತ್ತು ಶ್ರೀ ಡಿ. ರಂಗಯ್ಯ ನಿವೃತ್ತ ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರುಗಳ ವಿರುದ್ಧ ಭೂ ಸ್ವಾಧೀನ ಪ್ರಕರಣವೊಂದಕ್ಕೆ ಸಂಬಂಧಿಸಿದಂತೆ, ಇವರುಗಳು ಲಂಚದ ಹಣಕ್ಕಾಗಿ ಒತ್ತಾಯಿಸಿರುವುದು ಲಭ್ಯವಿರುವ ಸಾಕ್ಷ್ಯಾಧಾರಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ, ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರಡಿ ಶಿಸ್ತು ಕ್ರಮ ಜರುಗಿಸಲು ಮಾಡಿರುವ ಶಿಫಾರಸ್ಸನ್ನು ಸರ್ಕಾರವು ಅಂಗೀಕರಿಸುತ್ತಾ, ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 015 ಕೆಇವಿ 09, ಬೆಂಗಳೂರು, ದಿನಾಂಕ: 3ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಎಂ.ಎ. ರಾಜಶೇಖರ್, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಮತ್ತು ಶ್ರೀ ಡಿ. ರಂಗಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕ, ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿ, ಬೆಂಗಳೂರು ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 11 ಮತ್ತು 11–ಎ ರನ್ವಯ ವಿಚಾರಣೆ ನಡೆಸಲು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರನ್ವಯ ಮಂಜೂರಾತಿ ನೀಡಿದೆ. ಹಾಗೂ ಇದರ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 ನಿಯಮ 14–A ರ ಪ್ರಕಾರ ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1674

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಪ್ರಕಾಶ್ ಕೇಸರ್‌ಕರ್, ಶಾಖಾಧಿಕಾರಿ, ಸಿಆಸುಇ (ಸೇವೆಗಳು–ಎಫ್) ಮಂಡನಾಧಿಕಾರಿ–ಇವರಿಗೆ ಗೌರವ ಧನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಶ್ರೀ ಪ್ರಕಾಶ್ ಕೇಸರ್‌ಕರ್, ಶಾಖಾಧಿಕಾರಿ ಇವರ ಮನವಿ ದಿನಾಂಕ:5.6.09

2. ದಿನಾಂಕ:14.3.2000 ರ ಆದೇಶ ಸಂಖ್ಯೆ:ಸಿಆಸುಇ 015 ಸೇಇವಿ 99.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರಲ್ಲಿ ಶ್ರೀ ಪ್ರಕಾಶ್ ಕೇಸರ್‌ಕರ್, ಶಾಖಾಧಿಕಾರಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–ಎಫ್) ಇವರನ್ನು ಕೆಳಕಂಡ ಆದೇಶಗಳಲ್ಲಿ ಆದೇಶಿಸಲಾದ ಇಲಾಖಾ ವಿಚಾರಣೆಗಳಲ್ಲಿ ಶಿಸ್ತು ಪ್ರಾಧಿಕಾರದ/ಸರ್ಕಾರದ ಪರವಾಗಿ ಮಂಡನಾಧಿಕಾರಿಯಾಗಿ ನೇಮಿಸಿರುವುದರಿಂದ, ದಿನಾಂಕ:14.3.2000ರ ಆದೇಶ ಸಂಖ್ಯೆ:ಸಿಆಸುಇ 015 ಸೇಇವಿ 99ರ ಪ್ರಕಾರ ಗೌರವಧನವನ್ನು ಮಂಜೂರು ಮಾಡುವಂತೆ ಮನವಿ ಮಾಡಿರುತ್ತಾರೆ. ಇವರು ಈ ಎಲ್ಲಾ ಪ್ರಕರಣಗಳಲ್ಲಿ ಒಟ್ಟು 21 ದಿನಗಳು ಮಂಡನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿರುತ್ತಾರೆ.

1. ದಿನಾಂಕ:30.3.07ರ ಆದೇಶ ಸಂಖ್ಯೆ:ಸಿಆಸುಇ 296 ಎಸ್‌ಇಎನ್ 06
2. ದಿನಾಂಕ:17.5.07ರ ಆದೇಶ ಸಂಖ್ಯೆ:ಸಿಆಸುಇ 295 ಎಸ್‌ಇಎನ್ 06
3. ದಿನಾಂಕ:18.5.07ರ ಆದೇಶ ಸಂಖ್ಯೆ:ಸಿಆಸುಇ 298 ಎಸ್‌ಇಎನ್ 06
4. ದಿನಾಂಕ:5.11.07ರ ಆದೇಶ ಸಂಖ್ಯೆ:ಸಿಆಸುಇ 340 ಎಸ್‌ಇಎನ್ 06

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ, ಇಲಾಖಾ ವಿಚಾರಣೆಗಳಲ್ಲಿ ಸರ್ಕಾರಿ ನೌಕರನ ಮೇಲೆ ಮಾಡಲಾದ ಆರೋಪಗಳನ್ನು ಸಮರ್ಥಿಸುವ ಸಲುವಾಗಿ ಶಿಸ್ತು ಪ್ರಾಧಿಕಾರವು ತನ್ನ ಪರವಾಗಿ ಪ್ರಕರಣವನ್ನು ಹಾಜರುಪಡಿಸುವುದಕ್ಕೆ ಸರ್ಕಾರಿ ನೌಕರರನ್ನು ಮಂಡನಾಧಿಕಾರಿಯಾಗಿ ಕರ್ನಾಟಕ ನಾಗರೀಕ ಸೇವಾ, (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರನ್ವಯ ನೇಮಿಸಲು ಅವಕಾಶ ಇದ್ದು, ಈ ರೀತಿ ಮಂಡನಾಧಿಕಾರಿಯಾಗಿ ನೇಮಕವಾದ ಸರ್ಕಾರಿ ನೌಕರನಿಗೆ ವಿಚಾರಣೆಯ ದಿನವೊಂದಕ್ಕೆ ಅವರ ಮೂಲ ವೇತನದ ಶೇಕಡ 10ರಷ್ಟು ಅಥವಾ ಗರಿಷ್ಠ

ರೂ. 100–00 ರವರೆಗೆ ಸಂಭಾವನೆ ಮಂಜೂರು ಮಾಡಲು ಅವಕಾಶ ಇರುತ್ತದೆ. ಸರ್ಕಾರವು ಶ್ರೀ ಪ್ರಕಾಶ್ ಕೇಸರ್‌ಕರ್ ರವರ ಮನವಿಯನ್ನು ಕೂಲಂಕಶವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 020 ಕೆಇವಿ 09, ಬೆಂಗಳೂರು, ದಿನಾಂಕ: 3ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಪ್ರಕಾಶ್ ಕೇಸರ್‌ಕರ್, ಶಾಖಾಧಿಕಾರಿ, ಸಿಆಸುಇ (ಸೇವೆಗಳು–ಎಫ್) ಇವರಿಗೆ ದಿನವೊಂದಕ್ಕೆ ರೂ. 100–00 ಗಳಂತೆ 21 ದಿನಗಳಿಗೆ ಒಟ್ಟು ರೂ. 2100–00ಗಳ (ಎರಡು ಸಾವಿರದ ಒಂದು ನೂರು ರೂಪಾಯಿಗಳು ಮಾತ್ರ) ಗೌರವಧನವನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052–ಸಚಿವಾಲಯ–ಸಾಮಾನ್ಯ ಸೇವೆಗಳು–090–ಸಚಿವಾಲಯ–01. ಕರ್ನಾಟಕ ಸರ್ಕಾರ ಸಚಿವಾಲಯ–051–ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1702 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಡಾ:ಕೆ.ವಿ. ರಾಜು, ಮಾನ್ಯ ಮುಖ್ಯ ಮಂತ್ರಿಗಳ ಆರ್ಥಿಕ ಸಲಹೆಗಾರರು ಇವರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳ ಬಗ್ಗೆ.

**ಓದಲಾಗಿದೆ:**

1. ಆದೇಶ ಸಂಖ್ಯೆ:ಸಿಆಸುಇ 492 ಸಅಸೇ 2008, 23.8.2008.
2. ಡಾ:ಕೆ.ವಿ ರಾಜು, ಮಾನ್ಯ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರು ಇವರ ಟಿಪ್ಪಣಿ ಸಂಖ್ಯೆ:EACM/N/62/09, ದಿನಾಂಕ:22.4.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ 1 ರಲ್ಲಿ ಓದಲಾದ ಆದೇಶದಲ್ಲಿ ಡಾ:ಕೆ.ವಿ ರಾಜು, ಮಾನ್ಯ ಮುಖ್ಯಮಂತ್ರಿಗಳ ಆರ್ಥಿಕ ಸಲಹೆಗಾರರು ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ಹೊರಡಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ 2ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಅಧಿಕಾರಿಯವರು ಎಲ್.ಐ.ಸಿ. ಅನ್ಯೂಟಿ ಪೆನ್‌ಷನ್ ಸ್ಕೀಮ್‌ಗೆ ಸಂಬಂಧಿಸಿದಂತೆ ಶೇ 5 ರಷ್ಟನ್ನು ಕಟಾವು ಮಾಡುತ್ತಿದ್ದು, ಏಪ್ರಿಲ್–2009 ರಿಂದ ಅವರ ಮಾತೃ ಇಲಾಖೆಯಾದ ಐಸೆಕ್ ಸಂಸ್ಥೆಯವರು ಸದರಿ ಪೆನ್‌ಷನ್ ಸ್ಕೀಮ್‌ಗಾಗಿ ಶೇ. 5 ರಿಂದ 10ರಷ್ಟು ಕಟಾವು ಮಾಡಲು ತಿಳಿಸಿರುವ ಹಿನ್ನೆಲೆಯಲ್ಲಿ ತಮ್ಮ ವೇತನದಲ್ಲಿ ಸದರಿ ಸ್ಕೀಮ್‌ಗಾಗಿ ಶೇ. 5ಕ್ಕೆ ಬದಲಾಗಿ 10 ರಷ್ಟು ಕಟಾವು ಮಾಡುವಂತೆ ಕೋರಿದ್ದಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 271 ಸಅಸೇ 2009, ಬೆಂಗಳೂರು, ದಿನಾಂಕ: 3ನೇ ಜುಲೈ 2009**

ಡಾ:ಕೆ.ವಿ. ರಾಜು, ಮಾನ್ಯ ಮುಖ್ಯ ಮಂತ್ರಿಗಳ ಆರ್ಥಿಕ ಸಲಹೆಗಾರರು ಇವರ ಎಲ್.ಐ.ಸಿ ಅನ್ಯೂಟಿ ಪೆನ್ ಷನ್ ಸ್ಕೀಮ್‌ಗಾಗಿ ವಂತಿಗೆಯನ್ನು ದಿನಾಂಕ:1.4.2009 ರಿಂದ ಅನ್ವಯವಾಗುವಂತೆ ಶೇ. 10 ರಷ್ಟು ಅಧಿಕಾರಿಯ ವೇತನದಲ್ಲಿ ಹಾಗೂ ಶೇ. 10 ರಷ್ಟು ರಾಜ್ಯ ಸರ್ಕಾರವು ವಂತಿಗೆ ರೂಪದಲ್ಲಿ ಪಾವತಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆಆ:ಇ 663 ವೆಚ್ಚ–12/2009, ದಿನಾಂಕ:19.6.2009ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1706 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ತಿದ್ದೋಲೆ**

**ಸಂಖ್ಯೆ:ಸಿಆಸುಇ 350 ಸಅಸೇ 2009, ಬೆಂಗಳೂರು, ದಿನಾಂಕ:6ನೇ ಜುಲೈ 2009**

ಅಧಿಸೂಚನೆ ಸಂಖ್ಯೆ ಸಿಆಸುಇ 350 ಸಅಸೇ 2009, ದಿನಾಂಕ:2.7.2009ರಲ್ಲಿನ ಕ್ರಮಸಂಖ್ಯೆ (8)ರಲ್ಲಿನ ಮರು ಸ್ಥಳನಿಯುಕ್ತಿಯನ್ನು ದಿನಾಂಕ:2.7.2009ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರ. ಸಂ | ಅಧಿಕಾರಿಯ ಹೆಸರು ಮತ್ತು ಪದನಾಮ | ವರ್ಗಾಯಿಸಿದ ಹುದ್ದೆ |
|---|---|---|
| 8) | ಶ್ರೀಮತಿ ಜಿ.ಎಸ್. ಪ್ರಸೀಲಾ ಕುಮಾರಿ ಸಿವಿಲ್ ಜಡ್ಜ್ (ಜ್ಯೂನಿಯರ್ ಡಿವಿಜನ್) & ಜೆ.ಎಂ.ಎಫ್.ಸಿ II ಕೋರ್ಟ್, ಹಾಸನ | ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1720 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 70 ಕೆಇವಿ 2008, ಬೆಂಗಳೂರು, ದಿನಾಂಕ: 1ನೇ ಜುಲೈ, 2009**

**ವಿಷಯ:** ಶ್ರೀ ಮೋಹನ್ ಕುಮಾರ್ ಸಾಸನೂರು, ಕೆ.ಎ.ಎಸ್ (ಹಿರಿಯ ಶ್ರೇಣಿ) ರವರ ಅಮಾನತ್ತನ್ನು ರದ್ದುಗೊಳಿಸಿ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಮೋಹನ್‌ಕುಮಾರ್ ಸಾಸನೂರು ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅಂದಿನ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಧಾರವಾಡ ಇವರನ್ನು ಹಿಂದೆ ಉಪ ವಿಭಾಗಾಧಿಕಾರಿಗಳು ಮತ್ತು ಅಧ್ಯಕ್ಷರು ಭೂ ನ್ಯಾಯ ಮಂಡಳಿ ಧಾರವಾಡ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 3892 ಎಕರೆ ಕೃಷಿ ಜಮೀನನ್ನು ಕೃಷಿಗೆ ಯೋಗ್ಯವಲ್ಲವೆಂದು ಆದೇಶ ಹೊರಡಿಸಿ ತೀವ್ರತರವಾದ ಕರ್ತವ್ಯಲೋಪ ಎಸಗಿರುವ ಆರೋಪದ ಕುರಿತು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 70 ಕೆಇವಿ 08, ದಿನಾಂಕ:28.10.2008ರಲ್ಲಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ.

ಶ್ರೀ ಮೋಹನ್‌ಕುಮಾರ್ ಸಾಸನೂರು, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವುದರಿಂದಲೂ.

ಆದ್ದರಿಂದ ಸರ್ಕಾರವು ಶ್ರೀ ಮೋಹನ್‌ಕುಮಾರ್ ಸಾಸನೂರು, ಕೆ,ಎ,ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧ ಶಿಸ್ತು ಕ್ರಮ/ಇಲಾಖಾ ವಿಚಾರಣೆ ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಇವರ ಅಮಾನತ್ತನ್ನು ತೆರವುಗೊಳಿಸಿ, ಇವರನ್ನು ಅಪರ ಜಿಲ್ಲಾಧಿಕಾರಿಗಳು ಮತ್ತು ಅಪರ ಜಿಲ್ಲಾ ದಂಡಾಧಿಕಾರಿ, ಹಾವೇರಿ ಜಿಲ್ಲೆ, ಹಾವೇರಿ ಖಾಲಿ ಹುದ್ದೆಗೆ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಸೇವೆಗೆ ತೆಗೆದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1722 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು ಹಾಸನ (ಹಾಲಿ ನಿಲಂಬನೆ) ಇವರಿಗೆ ಜೀವನಾಧಾರ ಭತ್ಯೆ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಸಿಆಸುಇ 36 ಕೆಇವಿ 08, ದಿ:10.12.2008.
2. ಮಹಾ ನಿರ್ದೇಶಕರು ಆಡಳಿತ ತರಬೇತಿ ಸಂಸ್ಥೆ ಮೈಸೂರು ರವರ ಪತ್ರ ಸಂ:ಸಿಬ್ಬಂದಿ (2)/ವಿವ–13/09–10 ದಿ:13.5.2009.

**ಪ್ರಸ್ತಾವನೆ:**

ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಇವರು ಈ ಹಿಂದೆ ಕೇಂದ್ರ ಸ್ಥಾನಿಕ ಸಹಾಯಕರು ಜಿಲ್ಲಾಧಿಕಾರಿಗಳ ಕಛೇರಿ ಹಾಸನ ರಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಇವರು ತಮ್ಮ ಬಲ್ಲ ಮೂಲಗಳಿಗಿಂತ ಅಪಾರ ಪ್ರಮಾಣದ ಅಧಿಕ ಆಸ್ತಿಯನ್ನು ಹೊಂದಿದ್ದಾರೆಂದು ತಿಳಿದು ಬಂದ ಹಿನ್ನೆಲೆಯಲ್ಲಿ ಹಾಸನ ಲೋಕಾಯುಕ್ತ ಪೊಲೀಸರು ಇವರ ವಿರುದ್ಧ ಮೊಕದ್ದಮೆ ಸಂ:2/2008 ರಲ್ಲಿ ಪ್ರಕರಣ ದಾಖಲಿಸಿಕೊಂಡು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 13(1)(ಇ) ಹಾಗೂ 13(2) ರಡಿ ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್ ಇವರ ಮನೆ ಮತ್ತು ಕಛೇರಿಗಳ ಮೇಲೆ ದಿ:26.3.08 ರಂದು ದಾಳಿ ನಡೆಸಿ ಇವರ ವಿರುದ್ಧ ಪ್ರಕರಣ ದಾಖಲಿಸಿ ಇವರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ ತಮ್ಮ ಪ್ರಭಾವವನ್ನು ಬೀರುವುದರ ಮೂಲಕ ಸಾಕ್ಷಾಧಾರಗಳನ್ನು ನಾಶಪಡಿಸಿ ತನಿಖೆಗೆ ಅಡ್ಡಿ ಅಡಚಣೆ ಉಂಟು ಮಾಡುವ ಸಾಧ್ಯತೆಗಳಿರುವುದರಿಂದ ಇವರನ್ನು

ಸೇವೆಯಿಂದ ಅಮಾನತ್ತುಗೊಳಿಸಿ ಅವರ ಸ್ಥಾನವನ್ನು ಪಲ್ಲಟಗೊಳಿಸಲು ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶಿಫಾರಸ್ಸು ಮಾಡಿದ್ದರು, ಅದರಂತೆ ಮೇಲೆ ಓದಲಾದ ಕ್ರಮ ಸಂ:(1)ರ ಆದೇಶದಲ್ಲಿ ಸದರಿ ಅಧಿಕಾರಿಯನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಲಾಗಿದೆ. ಸದರಿ ಅಧಿಕಾರಿಯವರು ಅಮಾನತ್ತಿನ ಸಮಯದಲ್ಲಿ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ. ಚಿಕ್ಕಮಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದರು ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂ(2)ರ ಪತ್ರದಲ್ಲಿ ಮಹಾ ನಿರ್ದೇಶಕರು ಆಡಳಿತ ತರಬೇತಿ ಸಂಸ್ಥೆ, ಮೈಸೂರು ರವರು ಸರ್ಕಾರಕ್ಕೆ ಪತ್ರ ಬರೆದು ಪ್ರಾಂಶುಪಾಲರು ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಹುದ್ದೆಯಲ್ಲಿ ಮತ್ತೊಬ್ಬರು ಕಾರ್ಯನಿರ್ವಹಿಸುತ್ತಿರುವುದರಿಂದ ಒಂದೇ ಹುದ್ದೆಯಲ್ಲಿ ಇಬ್ಬರು ಅಧಿಕಾರಿಗಳು ವೇತನ ಮತ್ತು ಭತ್ಯೆಗಳನ್ನು ಪಡೆಯಲು ಅವಕಾಶವಿಲ್ಲದಿರುವುದರಿಂದ ಶ್ರೀ ಕೆ.ಪಿ. ಹೊನಕೇರಿ, ಕೆ.ಎ.ಎಸ್ ಇವರ ಜೀವನಾಧಾರ ಭತ್ಯೆಯನ್ನು ಪಾವತಿಸಲು ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ:ಸಿಆಸುಇ 18 ಕೆಇವಿ 2009, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಕೆ.ಪಿ ಹೊನಕೇರಿ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಪ್ರಾಂಶುಪಾಲರು, ಜಿಲ್ಲಾ ತರಬೇತಿ ಸಂಸ್ಥೆ, ಚಿಕ್ಕಮಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957ರ ನಿಯಮ 98ರ ಪ್ರಕಾರ ಇವರ ಅಮಾನತ್ತಿನ ಆದೇಶ ದಿ:10.12.2008 ರಿಂದ ಈ ಬಗ್ಗೆ ಮುಂದಿನ ಆದೇಶ ಹೊರಡಿಸುವವರೆಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಮಹಾಲೇಖಪಾಲರಿಂದ authorization ಪಡೆದು ಸಿ.ಆ.ಸು. ಇಲಾಖೆ (ಲೆಕ್ಕಪತ್ರ–ಐಆರ್ ಎಲ್ಎ) ಯಿಂದ ಡ್ರಾ ಮಾಡಿ ಬಟವಾಡೆ ಮಾಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1723

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಆಡಳಿತಾತ್ಮಕ ವೆಚ್ಚಕ್ಕಾಗಿ ಎರಡನೇ ಕಂತಿನ ಅನುದಾನ ಹಾಗೂ ಸದರಿ ಸಂಸ್ಥೆಯವರು ನಡೆಸಲಾಗುವ ಸಮ್ಮೇಳನ ಸಂಕಿರಣ ಮತ್ತು ಕಾರ್ಯಾಗಾರಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 30 ಆಡವಿ 2009, ದಿನಾಂಕ:12.5.09
2. ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 41 ಆಡವಿ 2009, ದಿನಾಂಕ:6.6.09
3. ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ರವರ ಪತ್ರ ಸಂ:ಕರಾದೂಸಂಅಕೇಂ/74/ಜಿಇಎನ್/2009, ದಿನಾಂಕ:17.6.2009
4. ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ರವರ ಪತ್ರ ಸಂ:ಕರಾದೂಸಂಅಕೇಂ/93/ಜಿಇಎನ್/2009. ದಿನಾಂಕ:17.6.2009.

**ಪ್ರಸ್ತಾವನೆ:**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ. 680.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ರೂ. 680 ಲಕ್ಷಗಳ ಒದಗಣೆ ಮೊತ್ತದಲ್ಲಿ ಸದರಿ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 150.00 ಲಕ್ಷಗಳನ್ನು ಹಾಗೂ ಸಮ್ಮೇಳನ ಸಂಕಿರಣ ಮತ್ತು ಕಾರ್ಯಾಗಾರಗಳಿಗೆ ರೂ. 15.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:6.6.2009ರ ಸರ್ಕಾರಿ ಆದೇಶದಲ್ಲಿ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಸದರಿ ಕೇಂದ್ರಕ್ಕೆ ರೂ. 37.50 ಲಕ್ಷಗಳನ್ನು ಮೊದಲನೆ ಕಂತಾಗಿ ಅನುದಾನ ಬಿಡುಗಡೆ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:17.6.2009ರ ಪತ್ರದಲ್ಲಿ ಆಡಳಿತ ನಿರ್ವಹಣೆ, ವೆಚ್ಚಕ್ಕಾಗಿ, ರೂ, 37.50 ಲಕ್ಷಗಳನ್ನು ತ್ರೈಮಾಸಿಕ ಕಂತಾಗಿ ಹಾಗೂ ಮೇಲೆ (4)ರಲ್ಲಿ ಓದಲಾದ ದಿನಾಂಕ:17.6.2009ರ ಪತ್ರದಲ್ಲಿ ಕೇಂದ್ರದ ವತಿಯಿಂದ

ನಡೆಸಲು ಉದ್ದೇಶಿಸಲಾಗಿರುವ ಸಮ್ಮೇಳನ ಸಂಕಿರಣ ಮತ್ತು ಕಾರ್ಯಾಗಾರಗಳಿಗೆ ಉಪಯೋಗಿಸಲು ರೂ., 15.00 ಲಕ್ಷಗಳನ್ನು ಅನುದಾನವಾಗಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ಒದಗಿಸಲಾಗಿರುವ ರೂ. 150.00 ಲಕ್ಷಗಳಲ್ಲಿ ಸದರಿ ಕೇಂದ್ರಕ್ಕೆ ರೂ. 37.50 ಲಕ್ಷಗಳನ್ನು ಎರಡನೆ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಮಾಡಲು ಹಾಗೂ ಕೇಂದ್ರದ ವತಿಯಿಂದ ನಡೆಸಲು ಉದ್ದೇಶಿಸಲಾಗಿರುವ ಸಮ್ಮೇಳನ ಸಂಕಿರಣ ಮತ್ತು ಕಾರ್ಯಾಗಾರಗಳಿಗೆ ಉಪಯೋಗಿಸಲು ರೂ. 15.00 ಲಕ್ಷಗಳನ್ನು ಅಂದರೆ ಒಟ್ಟು 52.50 ಲಕ್ಷಗಳು ಬಿಡುಗಡೆಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಐಟಿಡಿ 41ಎಡಿಎಂ 2009, ಬೆಂಗಳೂರು, ದಿನಾಂಕ:14ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 37.50 ಲಕ್ಷಗಳ (ಮುವ್ವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಕೇಂದ್ರದ ವತಿಯಿಂದ ನಡೆಸಲು ಉದ್ದೇಶಿಸಲಾಗಿರುವ ಸಮ್ಮೇಳನ ಸಂಕಿರಣ ಮತ್ತು ಕಾರ್ಯಾಗಾರಗಳಿಗೆ ಉಪಯೋಗಿಸಲು ರೂ. 15.00 ಲಕ್ಷಗಳನ್ನು (ಹದಿನೈದು ಲಕ್ಷ ರೂಪಾಯಿಗಳು ಮಾತ್ರ] ಅಂದರೆ ಒಟ್ಟು 52.50 ಲಕ್ಷಗಳನ್ನು (ಐವತ್ತೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ] ಎರಡನೆಯ ತ್ರೈಮಾಸಿಕ ಕಂತಿನ ಅನುದಾನವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.5.08ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1726 ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಕರ್ನಾಟಕ ಸರ್ಕಾರದ ಸಚಿವಾಲಯ

**ಸುತ್ತೋಲೆ ಸಂಖ್ಯೆ:ಕಸಂವಾಪ್ರ 37 ಕೆಒಎಲ್ 09, ಬೆಂಗಳೂರು, ದಿನಾಂಕ: 24ನೇ ಜೂನ್ 2009**

**ವಿಷಯ:** ಸರ್ಕಾರದ ಸಚಿವಾಲಯದ ಮತ್ತು ಎಲ್ಲಾ ಇಲಾಖೆಗಳ ಪತ್ರಗಳಲ್ಲಿ (ಲೆಟರ್ ಹೆಡ್) ಹಾಗೂ ಲಕೋಟೆಗಳ ಮೇಲೆ **"ಕನ್ನಡ ಅನುಷ್ಠಾನ ವರ್ಷ–2009"** ಎಂದು ಮುದ್ರಿಸುವ ಬಗ್ಗೆ.

2009 ರ ವರ್ಷವನ್ನು **"ಕನ್ನಡ ಅನುಷ್ಠಾನ ವರ್ಷ 2009"** ಎಂದು ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿರುತ್ತಾರೆ. ಈ ಅವಧಿಯಲ್ಲಿ ನಿರಂತರವಾಗಿ ಕನ್ನಡವನ್ನು ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ಸರ್ಕಾರದ ಸಚಿವಾಲಯದ ಮತ್ತು ಎಲ್ಲಾ ಇಲಾಖೆಗಳ ಪತ್ರಗಳಲ್ಲಿ (ಲೆಟರ್ ಹೆಡ್) ಹಾಗೂ ಲಕೋಟೆಗಳ ಮೇಲೆ **"ಕನ್ನಡ ಅನುಷ್ಠಾನ ವರ್ಷ 2009"** ಎಂದು ಮುದ್ರಿಸಲು ಸೂಚಿಸಿದೆ.

**ಸುಧಾಕರ್ ರಾವ್**

ಪಿ.ಆರ್. 1727 ಮುಖ್ಯ ಕಾರ್ಯದರ್ಶಿ,

ಕರ್ನಾಟಕ ಸರ್ಕಾರದ ಸಚಿವಾಲಯ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಅರುಣಪ್ರಭಾ, ತಹಶೀಲ್ದಾರ್ ಚನ್ನಪಟ್ಟಣ ತಾಲ್ಲೂಕು ಇವರ ವರ್ಗಾವಣೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 32 ಎಟಿಎಸ್ 2009 ದಿನಾಂಕ 4.7.2009 ಹಾಗೂ ಪರಿಷ್ಕರಿಸಿದ ಅಧಿಸೂಚನೆ ದಿನಾಂಕ:6.7.2009.
2. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:2759/2009ರ ದಿನಾಂಕ:7.7.2009ರ ಆದೇಶ.

**ಪ್ರಸ್ತಾವನೆ:**

ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 32 ಎಟಿಎಸ್ 2009 ದಿನಾಂಕ: 4.7.2009ರಲ್ಲಿ 82 ಜನ ತಹಶೀಲ್ದಾರರನ್ನು ವರ್ಗಾಯಿಸಿದ್ದು ನಂತರ ಸದರಿ ಅಧಿಸೂಚನೆಯನ್ನು ಪರಿಷ್ಕರಿಸಿ ದಿನಾಂಕ:6.7.2009ರಂದು 81 ಜನ ತಹಶೀಲ್ದಾರರುಗಳ ವರ್ಗಾವಣೆ ಆದೇಶವನ್ನು ಹೊರಡಿಸಲಾಗಿದೆ. ಇದರಲ್ಲಿ ಶ್ರೀ ಅರುಣಪ್ರಭಾ, ತಹಶೀಲ್ದಾರ್ ಚನ್ನಪಟ್ಟಣ ತಾಲ್ಲೂಕು ಇವರನ್ನು ಕಚೇರಿ ಸಹಾಯಕರು, ಜಿಲ್ಲಾಧಿಕಾರಿ ಕಚೇರಿ, ಚಿತ್ರದುರ್ಗ ಶ್ರೀ ಎಸ್.ಆರ್. ಕೃಷ್ಣಯ್ಯ ಇವರ ಸ್ಥಳಕ್ಕೆ ಹಾಗೂ ಶ್ರೀ ಎಸ್.ಆರ್. ಕೃಷ್ಣಯ್ಯ ಇವರನ್ನು ತಹಶೀಲ್ದಾರ್ ಚನ್ನಪಟ್ಟಣ ತಾಲ್ಲೂಕು ಶ್ರೀ ಅರುಣಪ್ರಭಾ ಇವರ ಸ್ಥಳಕ್ಕೆ ವರ್ಗಾಯಿಸಲಾಗಿದೆ. ಈ ಆದೇಶವನ್ನು ಶ್ರೀ ಅರುಣಪ್ರಭಾ ಇವರು ಕೆ.ಎ.ಟಿಯಲ್ಲಿ ಅರ್ಜಿ ಸಂಖ್ಯೆ:2759/2009ರಲ್ಲಿ ಪ್ರಶ್ನಿಸಿದ್ದು ದಿನಾಂಕ:7.7.2009ರಂದು ನ್ಯಾಯ ಮಂಡಳಿಯು ಆದೇಶ ಹೊರಡಿಸಿರುತ್ತಾರೆ. ನ್ಯಾಯ ಮಂಡಳಿಯ ಆದೇಶದಲ್ಲಿ ಅರ್ಜಿದಾರರಾದ ಶ್ರೀ ಅರುಣಪ್ರಭಾ ಇವರು ಅವರ ವರ್ಗಾವಣೆ ಆದೇಶವನ್ನು ಮರು ಪರಿಶೀಲಿಸಿ ರದ್ದುಗೊಳಿಸುವಂತೆ ದಿನಾಂಕ:5.7.2009ರಂದು ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಅರ್ಜಿಯನ್ನು ರಿಜಿಸ್ಟರ್ ಪೋಸ್ಟ್ ಮೂಲಕ ಕಳುಹಿಸಿದ್ದು ಆ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರವು ಯಾವುದೇ ತೀರ್ಮಾನ ಕೈಗೊಂಡಿಲ್ಲವೆಂದು ಉಲ್ಲೇಖಿಸಲಾಗಿದೆ. ದಿನಾಂಕ:9.7.2009ರವರೆಗೆ ಸದರಿ ನೌಕರರು ಅವರ ವರ್ಗಾವಣೆ ಆದೇಶವನ್ನು ರದ್ದುಗೊಳಿಸುವಂತೆ ಸಲ್ಲಿಸಲಾಗಿದೆಯೆಂದು ಹೇಳಿರುವ ಅರ್ಜಿಯು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಈಗಾಗಲೇ ವೃಂದ ನಿರ್ವಹಣಾ ಪ್ರಾಧಿಕಾರವು ದಿನಾಂಕ:20.6.2009 ರಂದು ಸಭೆ ನಡೆಸಿ ಶ್ರೀ ಅರುಣಾ ಪ್ರಭಾ ಹಾಗೂ ಇತರರ ವರ್ಗಾವಣೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಲು ಶಿಫಾರಸ್ಸು ಮಾಡಿದೆ. ಸದರಿ ಅಧಿಕಾರಿಯ ವರ್ಗಾವಣೆಯನ್ನು ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಹಾಗೂ ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆಯನ್ನು ಪಡೆದು ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಮಾಡಿರುವುದರಿಂದ ಸದರಿಯವರ ಕೋರಿಕೆಯನ್ನು ಪರಿಗಣಿಸಲು ಅವಕಾಶವಿಲ್ಲವಾದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಕಂಇ 381 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 13ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಅರುಣಪ್ರಭಾ, ತಹಶೀಲ್ದಾರ್ ಚನ್ನಪಟ್ಟಣ ತಾಲ್ಲೂಕು (ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಚೇರಿ, ಚಿತ್ರದುರ್ಗ ಜಿಲ್ಲೆ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವ) ಇವರ ವರ್ಗಾವಣೆಯನ್ನು ದಿನಾಂಕ:20.6.2009ರಂದು ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯ ಹಾಗೂ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ವರ್ಗಾವಣೆ ಆದೇಶ ಹೊರಡಿಸಿರುವುದರಿಂದ ಶ್ರೀ ಅರುಣಪ್ರಭಾ ಇವರನ್ನು ಕಾರ್ಯನಿರ್ವಹಿಸುತ್ತಿದ್ದ ಹುದ್ದೆ ಚನ್ನಪಟ್ಟಣ ತಾಲ್ಲೂಕು ತಹಶೀಲ್ದಾರ್ ಹುದ್ದೆಯಲ್ಲಿ ಮುಂದುವರೆಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಇವರ ಕೋರಿಕೆಯನ್ನು ತಿರಸ್ಕರಿಸಿದೆ. ಸದರಿ ಅಧಿಕಾರಿಯು ವರ್ಗಾಯಿಸಿ ನೇಮಿಸಿದ ಸ್ಥಳದಲ್ಲಿ ಈ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. 1728

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಅಧಿಸೂಚನೆ**

**ಸಂಖ್ಯೆ:ಕಂಇ 25 ಮುನೋಮು 2008, ಬೆಂಗಳೂರು, ದಿನಾಂಕ: 6ನೇ ಜುಲೈ, 2009**

ಕರ್ನಾಟಕ ಮುದ್ರಾಂಕ ಕಾಯ್ದೆ, 1957ರ (1957ರ ಕರ್ನಾಟಕ ಕಾಯ್ದೆ–34) ಅನುಚ್ಛೇದ 37ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಜಯಾ ಬ್ಯಾಂಕ್, ಬೆಂಗಳೂರು ಇವರು ವಿತರಿಸಲಿರುವ ರೂ. 200 ಕೋಟಿ ಮೊತ್ತದ (Promissory Notes) ಬಾಂಡ್‌ಗಳಿಗೆ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಮುದ್ರಾಂಕ ಶುಲ್ಕ ಅನುಸೂಚಿಯ ಅನುಚ್ಛೇದ 16 ರಂತೆ ರೂ. 1,00,00,000/– (ಒಂದು ಕೋಟಿ ರೂಪಾಯಿಗಳು ಮಾತ್ರ)ಗಳ ಸಂಚಿತ ಮುದ್ರಾಂಕ ಶುಲ್ಕವನ್ನು ದಿನಾಂಕ:25.6.2008ರಂದು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 25 ಮುನೋಮು 2008, ದಿನಾಂಕ:6.7.2009ರ ಪ್ರಕಾರ ಸಂಚಿತ ಮುದ್ರಾಂಕ ಶುಲ್ಕವನ್ನು ಮೊದಲ ಬಾರಿಗೆ ಸಂದಾಯಿಸಲಾಗಿದೆ ಎಂಬ ಪದಗಳನ್ನು ಷೇರು ಪತ್ರಗಳ ಮೇಲೆ ಮುದ್ರಿಸಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಯಲ್ಲಿನ ನಿಯಮ 11–ಎ (4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು ಷೇರುಗಳ ಖರೀದಿಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ, ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್. 1729

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಅಧಿಸೂಚನೆ

**ಸಂಖ್ಯೆ: ಕಂಇ 43 ಎಲ್ಆರ್ಎಂ 2009, ಬೆಂಗಳೂರು, ದಿನಾಂಕ: 7ನೇ ಜುಲೈ 2009**

ರಾಷ್ಟ್ರೋತ್ಥಾನ ಪರಿಷತ್, ಬೆಂಗಳೂರು, ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಳಗಿನಜೂಗಾನಹಳ್ಳಿ ಗ್ರಾಮದ ಸ.ನಂ. 82 ರಲ್ಲಿ 4.00 ಎಕರೆ ಕೃಷಿ ಜಮೀನನ್ನು ಗೋಶಾಲೆ, ನ್ಯಾಚುರೋಪತಿ ತರಬೇತಿ ಕೇಂದ್ರ ಶೈಕ್ಷಣಿಕ ಮತ್ತು ವಾಣಿಜ್ಯ ಉದ್ದೇಶಕ್ಕಾಗಿ ಪಡೆಯಲು ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಪತ್ರ ಸಂಖ್ಯೆ:ಎಲ್ಆರ್ಎಫ್.ಎಸ್ಆರ್ /21/07–08 ದಿನಾಂಕ:31.3.09ರಲ್ಲಿ ಪ್ರಸ್ತಾಪಿತ ಮೇಲ್ಕಂಡ 4.00 ಎಕರೆ ಜಮೀನನ್ನು ಪಡೆಯಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 ರಡಿ ಅನುಮೋದನೆ/ವಿನಾಯಿತಿ ನೀಡುವ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ, ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ರಾಷ್ಟ್ರೋತ್ಥಾನ ಪರಿಷತ್, ಬೆಂಗಳೂರು, ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಳಗಿನಜೂಗಾನಹಳ್ಳಿ ಗ್ರಾಮದ ಸ.ನಂ. 82 ರಲ್ಲಿ 4.00 ಎಕರೆ ಕೃಷಿ ಜಮೀನನ್ನು ಗೋಶಾಲೆ, ನ್ಯಾಚುರೋಪತಿ ತರಬೇತಿ ಕೇಂದ್ರ ಶೈಕ್ಷಣಿಕ ಮತ್ತು ವಾಣಿಜ್ಯ ಉದ್ದೇಶಕ್ಕಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1 ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ. 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 1730

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**ಅಧಿಸೂಚನೆ**

**ಸಂಖ್ಯೆ: ಕಂಇ 37 ಎಲ್ಆರ್ಎಂ 2009, ಬೆಂಗಳೂರು, ದಿನಾಂಕ: 30ನೇ ಜೂನ್, 2009**

ಶ್ರೀ ಶೈಲಾ ಫಾರಂ ಪ್ರೈವೇಟ್ ಲಿಮಿಟೆಡ್, ಭೀಮಸಮುದ್ರ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕಿನ ಭೀಮಸಮುದ್ರ ಗ್ರಾಮದ ಸ.ನಂ. 54/2 ಮತ್ತು ಇತರೆಗಳಲ್ಲಿ ಒಟ್ಟು–10–03 1/2 ಎಕರೆ ಜಮೀನನ್ನು ತೋಟಗಾರಿಕೆ ಅಭಿವೃದ್ಧಿ ಉದ್ದೇಶಕ್ಕಾಗಿ ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ, ಇವರ ಪತ್ರ ಸಂಖ್ಯೆ:ಎಲ್ಆರ್ಎಂ:ಸಿಆರ್:40:2008–09 ದಿನಾಂಕ:12.3.2009 ರಲ್ಲಿ ಪ್ರಸ್ತಾಪಿತ ಮೇಲ್ಕಂಡ 10–03 1/2ಎಕರೆ ಜಮೀನನ್ನು ಖರೀದಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 ರಡಿ ಅನುಮೋದನೆ/ವಿನಾಯಿತಿ ನೀಡುವ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ, ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಶ್ರೀ ಶೈಲಾ ಫಾರಂ ಪ್ರೈವೇಟ್ ಲಿಮಿಟೆಡ್, ಚಿತ್ರದುರ್ಗ ಜಿಲ್ಲೆ, ಇವರಿಗೆ ಚಿತ್ರದುರ್ಗ ತಾಲ್ಲೂಕಿನ ಭೀಮಸಮುದ್ರ ಗ್ರಾಮದ ಸ.ನಂ. 54/2 ಮತ್ತು ಇತರೆಗಳಲ್ಲಿ ಒಟ್ಟು–10–03 1/2 ಎಕರೆ ಜಮೀನನ್ನು ತೋಟಗಾರಿಕೆ ಅಭಿವೃದ್ಧಿ ಉದ್ದೇಶಕ್ಕಾಗಿ ಖರೀದಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1 ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ

ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ. 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 1731

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**ವಿಷಯ:** ಶ್ರೀ ಡಿ.ಪಿ. ಪ್ರಾಣೇಶ್ ಕುಮಾರ್, ಹಿಂದಿನ ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಚಿಕ್ಕಬಳ್ಳಾಪುರ ಜಿಲ್ಲೆ, ಜಿಲ್ಲಾಧಿಕಾರಿಗಳ ಪತ್ರ ಸಂ:ಸಿಬ್ಬಂದಿ (1):ಸಿಆರ್/94–08–09, ದಿನಾಂಕ:25.7.2008.
2. ಸರ್ಕಾರದ ಆದೇಶ ಸಂ:ಕಂಇ 38 ಎಡಿಇ 2008, ದಿನಾಂಕ:2.8.2008.
3. ಶ್ರೀ ಪ್ರಾಣೇಶ್‌ಕುಮಾರ್, ತಹಶೀಲ್ದಾರ್ (ಅಮಾನತ್ತಿನಲ್ಲಿರುವ) ಅವರ ದಿನಾಂಕ:2.3.2009ರ ಮನವಿ.
4. ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಇವರ ಪತ್ರ ಸಂ:ಇಎಸ್‌ಟಿ:1:ಸಿಆರ್:94/08–09, ದಿನಾಂಕ:18.4.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ:25.7.2008ರಲ್ಲಿ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಇವರ ಪ್ರಸ್ತಾವನೆಯಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು, ಸೋಮೇನಹಳ್ಳಿ ಹೋಬಳಿ, ಜಂಟಿಬೋಯನಹಳ್ಳಿ ಗ್ರಾಮದ ಸರ್ವೆ ನಂ:19 ಪ್ಯಾಯಲಚಿನ್ನಪ್ಪಹಳ್ಳಿ ಗ್ರಾಮದ ಸರ್ವೆ ನಂ:6 ಮತ್ತು ಬಂದಾರ್ಲಹಳ್ಳಿ ಗ್ರಾಮದ ಸರ್ವೆ ನಂ:32 ರ ಜಮೀನುಗಳ ಗಣಕೀಕೃತ ಪಹಣೆಯ ಕಲಂ 9ರಲ್ಲಿ ಖಾತೆದಾರರ ಹೆಸರನ್ನು ಅಕ್ರಮವಾಗಿ ನಮೂದು ಮಾಡಿರುವ ಬಗ್ಗೆ ಸಾರ್ವಜನಿಕರಿಂದ ಮೌಖಿಕವಾಗಿ ದೂರುಗಳು ಬಂದ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಚಿಕ್ಕಬಳ್ಳಾಪುರ ಜಿಲ್ಲೆ, ಇವರು ಗುಡಿಬಂಡೆ ತಾಲ್ಲೂಕು ಕಛೇರಿಗೆ ಖುದ್ದು ಭೇಟಿ ನೀಡಿ, ದಾಖಲೆಗಳನ್ನು ಪರಿಶೀಲಿಸಿದಾಗ, ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕುರವರು ಎಸಗಿರುವ ಕರ್ತವ್ಯ ಲೋಪಗಳು, ಅಧಿಕಾರ ದುರುಪಯೋಗ ಕಂಡುಬಂದಿದ್ದು, ಸದರಿ ಅಧಿಕಾರಿ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೇಂದ್ರಸ್ಥಾನಿಕ ಸಹಾಯಕರು, ಚಿಕ್ಕಬಳ್ಳಾಪುರ ಇವರು ಜಿಲ್ಲಾಧಿಕಾರಿಗಳು ಚಿಕ್ಕಬಳ್ಳಾಪುರ ಇವರಿಗೆ ವರದಿ ಮಾಡಿರುತ್ತಾರೆ. ತಪಾಸಣೆ ಸಮಯದಲ್ಲಿ ಎಸಗಿರುವ ಲೋಪಗಳು ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್, ಹಿಂದಿನ ತಹಶೀಲ್ದಾರ್, ಗುಡಿಬಂಡೆ ಇವರನ್ನು 1957ರ ಕರ್ನಾಟಕ

ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳನ್ವಯ ಸೇವೆಯಿಂದ ಅಮಾನತ್ತಿನಲ್ಲಿಟ್ಟು, ಇಲಾಖಾ ವಿಚಾರಣೆ ಕೈಗೊಳ್ಳುವಂತೆ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಸರ್ಕಾರವು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಡಿ.ಪಿ. ಪ್ರಾಣೇಶ್ ಕುಮಾರ್, ಹಿಂದಿನ ತಹಶೀಲ್ದಾರ್, ಗುಡಿಬಂಡೆ ಇವರು ತಮ್ಮ ಸ್ಥಾನದ ಪ್ರಭಾವ ಬೀರಿ ಅಧಿಕಾರ ದುರುಪಯೋಗ ಹಾಗೂ ಕರ್ತವ್ಯ ಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10 (1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್, ತಹಶೀಲ್ದಾರ್, ಗುಡಿಬಂಡೆ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ, ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ:2.8.2008ರ ಆದೇಶದಲ್ಲಿ ಇಲಾಖಾ ವಿಚಾರಣೆ ಬಾಕಿಯಿಟ್ಟು, ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಶ್ರೀ ಡಿ.ಪಿ. ಪ್ರಾಣೇಶ್ ಕುಮಾರ್, ತಹಶೀಲ್ದಾರ್ ಇವರು ಮನವಿ ಸಲ್ಲಿಸಿ, ಕಳೆದ 6 ತಿಂಗಳಿನಿಂದ ಅಮಾನತ್ತಿನಲ್ಲಿದ್ದು, ಈವರೆವಿಗೂ ಸ್ಥಳ ನೇಮಕ ಮಾಡಿರುವುದಿಲ್ಲವೆಂದು ಹಾಗೂ ಅಮಾನತ್ತಿನ ವಿಚಾರದ ಬಗ್ಗೆ ಯಾವುದೇ ಅಧಿಕಾರ ದುರುಪಯೋಗ ಮಾಡಿರುವುದಿಲ್ಲವೆಂದು ಅಧಿಕಾರದ ವ್ಯಾಪ್ತಿಯಲ್ಲಿ ನೊಂದ ರೈತರ ಹೆಸರುಗಳನ್ನು ಈಗಾಗಲೇ ಮಂಜೂರು ಆಗಿರುವ ಸಾಗುವಳಿ ಚೀಟಿಯನ್ನು ಬಹಳ ಹಿಂದೆಯೇ ನೀಡಲಾಗಿದ್ದು, ಖಾತೆ ವಗೈರೆಯನ್ನು ಸಹ ಗುಡಿಬಂಡೆ ತಹಶೀಲ್ದಾರ್ ಆಗಿ ಬರುವುದಕ್ಕೆ ಮುಂಚೆಯೇ ಆಗಿದ್ದು, ಕಂಪ್ಯೂಟರ್ ಪಹಣಿಯಲ್ಲಿ ಕೈತಪ್ಪಿ ಹೋಗಿದ್ದ ರೈತರ ಹೆಸರುಗಳನ್ನು ಮಾತ್ರ ಕಂಪ್ಯೂಟರ್ ಪಹಣಿಯಲ್ಲಿ ಅಳವಡಿಸಲು ಆದೇಶಿಸಿದ್ದು, ಇದು ತಮ್ಮ ಕಾರ್ಯ ವ್ಯಾಪ್ತಿಯಲ್ಲಿರುವುದರಿಂದ ಆದೇಶಿಸಲಾಗಿದೆಯೆಂದು, ಯಾವುದೇ ಅಧಿಕಾರ ದುರುಪಯೋಗ ಮಾಡಿಲ್ಲವೆಂದು, ಅಮಾನತ್ತಿನ ಆದೇಶವನ್ನು ರದ್ದುಮಾಡಿ, ಮರು ನೇಮಕ ಮಾಡಿಕೊಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ:18.4.2009ರಲ್ಲಿ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಅವರು ಶ್ರೀ ಡಿ.ಪಿ. ಪ್ರಾಣೇಶ್ ಕುಮಾರ್, ತಹಶೀಲ್ದಾರ್ ಅವರು ಅಮಾನತ್ತಿನ ಆದೇಶದ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿದ ಮೇಲ್ಮನವಿ ಸಂ:3720/2008ರನ್ನು ಹಿಂದಕ್ಕೆ ಪಡೆದಿರುವುದರಿಂದ, ಮೇಲ್ಮನವಿಯು ವಜಾಗೊಂಡಿರುವುದರಿಂದ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಅಮಾನತ್ತು ಆದೇಶವನ್ನು ತೆರವುಗೊಳಿಸಿ, ಪುನಃ ಸದರಿ ಅಧಿಕಾರಿಯವರನ್ನು ಸೇವೆಗೆ ಪುನಃಸ್ಥಿತಿಗೊಳಿಸಬೇಕೆಂದು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ತಹಶೀಲ್ದಾರರಾದ ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್ ಅವರು ಸಲ್ಲಿಸಿರುವ ಲಿಖಿತ ಹೇಳಿಕೆ ಹಾಗೂ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ, ಸರ್ಕಾರವು ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್, ತಹಶೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ನೇಮಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 38 ಎಡಿಇ 2008, ಬೆಂಗಳೂರು, ದಿನಾಂಕ: 6ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್, ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು (ಪ್ರಸ್ತುತ ಅಮಾನತ್ತು) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(c)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ತೆರವುಗೊಳಿಸಿ, ಈ ಕೂಡಲೇ ಜಾರಿಗೆ ಬರುವಂತೆ ಗುಲ್ಬರ್ಗಾ ಜಿಲ್ಲೆಯಲ್ಲಿ ಖಾಲಿ ಇರುವ ಗುಲ್ಬರ್ಗಾ (ಉತ್ತರ) ವಿಶೇಷ ತಹಶೀಲ್ದಾರ್ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. 1732

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಸಹಾಯಾನುದಾನ ಬಿಡುಗಡೆ ಕುರಿತು.

**ಓದಲಾಗಿದೆ:**
1. ಅಧ್ಯಕ್ಷರು, ಕರ್ನಾಟಕ ರಾಜ್ಯ ವಕೀಲರ ಪರಿಷತ್ತುರವರ ಪತ್ರ ದಿನಾಂಕ:10.6.2009.
2. ಮಾನ್ಯ ಮುಖ್ಯ ಮಂತ್ರಿಗಳ ಸಲಹೆಗಾರರ ಟಿಪ್ಪಣಿ ಸಂಖ್ಯೆ ಎಸಿಎಂ:372:2009 ದಿನಾಂಕ:17.6.2009

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿನ ಅಧ್ಯಕ್ಷರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ, ಕರ್ನಾಟಕ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಯೋಜನೆಯಡಿ ರೂ. 1.00 ಕೋಟಿಗಳನ್ನು 2009–10ನೇ ಸಾಲಿನಲ್ಲಿ ಆಯವ್ಯಯ ಅವಕಾಶ ಕಲ್ಪಿಸಿರುವುದಾಗಿ ಮಾನ್ಯ ಮುಖ್ಯಮಂತ್ರಿಗಳ ಆಯವ್ಯಯ ಭಾಷಣದಲ್ಲಿ ತಿಳಿಸಿದ್ದು, ಅದರಂತೆ, ರೂ. 50.00 ಲಕ್ಷಗಳನ್ನು ವಕೀಲರ ನಿಧನದ ಬೇಡಿಕೆ ಮನವಿಗಳ ವಿಲೇವಾರಿಗೆ ಬಳಸಿಕೊಳ್ಳಲು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಉಲ್ಲೇಖಿತ (2)ರ ಪತ್ರದಲ್ಲಿ ಮಾನ್ಯ ಮುಖ್ಯ ಮಂತ್ರಿಗಳ ಸಲಹೆಗಾರರು ಕರ್ನಾಟಕ ರಾಜ್ಯ ವಕೀಲರ ಪರಿಷತ್ತು, ವಕೀಲರ ಪ್ರಾತಿನಿಧಿಕ ಸಂಸ್ಥೆಯಾಗಿದ್ದು, ವಕೀಲರ ಕಲ್ಯಾಣ ನಿಧಿಯ ನಿರ್ವಾಹಕ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದೆ. ಈ ಕಲ್ಯಾಣ ನಿಧಿಗೆ ಒದಗಿಸಿರುವ ರೂ. 1.00 ಕೋಟಿ ಅನುದಾನದಲ್ಲಿ ರೂ. 50.00 ಲಕ್ಷಗಳನ್ನು ತಕ್ಷಣ ಬಿಡುಗಡೆ ಮಾಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಈ ಬಗ್ಗೆ ಆಂತರಿಕ ಆರ್ಥಿಕ ಸಲಹೆಗಾರರನ್ನು ಸಂಪರ್ಕಿಸಲಾಗಿ ಲೇಖಾನುದಾನ ಜಾರಿಯಲ್ಲಿದ್ದು, ಸದರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ:16.5.2008ರ ಕಂಡಿಕೆ (1)ರನ್ವಯ ಪ್ರಥಮ ತ್ರೈಮಾಸಿಕ ಕಂತಾಗಿ ರೂ. 12.50 ಲಕ್ಷಗಳನ್ನು ಮಾತ್ರ ಬಿಡುಗಡೆ ಮಾಡಲು ಇಲಾಖಾ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜನೆಯಲ್ಲಿ ಅವಕಾಶವಿರುವುದಾಗಿ ಸಹಮತಿಸಿ ಹೆಚ್ಚಿನ ಹಣದ ಅವಶ್ಯಕತೆಗೆ ಆರ್ಥಿಕ ಇಲಾಖೆಯನ್ನು ಸಂಪರ್ಕಿಸುವಂತೆ ತಿಳಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಲಾ 45 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ: 9ನೇ ಜುಲೈ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಲೆಕ್ಕ ಶೀರ್ಷಿಕೆ 2014–00–800–1–03–059 (ಯೋಜನೆ) ಯಡಿ ರೂ. 12.50 ಲಕ್ಷಗಳನ್ನು (ರೂಪಾಯಿ ಹನ್ನೆರಡು ಲಕ್ಷದ ಐವತ್ತು ಸಾವಿರಗಳು ಮಾತ್ರ) ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಯಲ್ಲಿ ಸ್ಪಷ್ಟಪಡಿಸಿರುವಂತೆ ವಕೀಲರ ಪರಿಷತ್ತು, ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ರವರಿಗೆ ಬಿಲ್ಲನ್ನು ಸಲ್ಲಿಸಿ ಹಣ ಪಾವತಿಸಿ ಕೊಳ್ಳಬಹುದಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ವನಇ 299 ಅಂಆಸ 2009 ದಿನಾಂಕ:9.7.2009ರ ಸಹಮತಿ ಹಾಗೂ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ:16.5.2008ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಪಿ.ಆರ್. 1733 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಬಿ. ಶಶಿಧರ್, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಕೆ.ಆರ್. ಪೇಟೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ:ಲಾ 161 ಪಿಪಿಇ 86, ದಿನಾಂಕ:24.7.1989.
2. ಸರ್ಕಾರದ ಪತ್ರದ ಸಂ.ಲಾ 198 ಪಿಪಿಇ 91, ದಿನಾಂಕ:5.11.1991.
3. ಸದರಿ ಅಧಿಕಾರಿಯವರ ಮನವಿ ದಿನಾಂಕ:15.4.2009
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:ಡಿಪಿಎನ್/ಲೆಕ್ಕ–1/39/2009–10, ದಿನಾಂಕ:22.4.2008.

**ಪ್ರಸ್ತಾವನೆ:**

ಶ್ರೀ ಬಿ. ಶಶಿಧರ್, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಕೆ.ಆರ್.ಪೇಟೆ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:24.7.1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 15ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ:3.8.1989 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:5.11.1991ರ ಸರ್ಕಾರದ ಪತ್ರದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 17.3.1949 ಎಂದು ಒಪ್ಪಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿ ನಿವೃತ್ತ ಅಧಿಕಾರಿಯವರು ದಿನಾಂಕ:3.8.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿದ್ದು, ಇವರ ಜನ್ಮ ದಿನಾಂಕವನ್ನು 17.3.1949 ಎಂದು ಸರ್ಕಾರವು ಒಪ್ಪಿರುವುದರಿಂದ, ಸದರಿ ನಿವೃತ್ತ ಅಧಿಕಾರಿಯು 40 ವರ್ಷ 04 ತಿಂಗಳು 16 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ನಾಲ್ಕು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4) ರಲ್ಲಿ ಓದಲಾದ ದಿನಾಂಕ:22.4.2009ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು, ಶ್ರೀ ಬಿ. ಶಶಿಧರ್, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಕೆ.ಆರ್. ಪೇಟೆ ಇವರು ದಿನಾಂಕ:3.8.1989 ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ:17.3.1949 ಆಗಿರುತ್ತದೆ. ಸದರಿ ಅಧಿಕಾರಿಯು 40 ವರ್ಷ 4 ತಿಂಗಳು 16 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 232 ಪಿಪಿಇ 2009, ಬೆಂಗಳೂರು, ದಿನಾಂಕ: 16ನೇ ಜುಲೈ 2009**

ಶ್ರೀ ಬಿ. ಶಶಿಧರ್, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 520 ವೆಚ್ಚ–11/2009, ದಿನಾಂಕ:17.6.2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1734

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಕರಾವಳಿ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಸ್ಥಾಪನೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ನಅಇ 582 ಅಪ್ರಾ 2008, ದಿನಾಂಕ:8.9.2008.

2. ಸರ್ಕಾರದ ಆದೇಶ ಸಂಖ್ಯೆ ನಅಇ 55 ಬೆಮಪ್ರಾ 2009, ದಿನಾಂಕ:3.2.2009.

**ಪ್ರಸ್ತಾವನೆ:**

2008–09ರ ಆಯವ್ಯಯ ಭಾಷಣದಲ್ಲಿ ನಗರಾಭಿವೃದ್ಧಿ ಇಲಾಖೆಯಡಿ ಕರಾವಳಿ ಪ್ರದೇಶಾಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಲು ಘೋಷಿಸಲಾಗಿದ್ದು, ದಿನಾಂಕ:8.9.2008ರಂದು ಪ್ರಾಧಿಕಾರವನ್ನು ರಚಿಸಿ ಆದೇಶವನ್ನು ನಗರಾಭಿವೃದ್ಧಿ ಇಲಾಖೆಯು ಹೊರಡಿಸಿದೆ. ಕರಾವಳಿ ಪ್ರದೇಶದ ಮೂರು ಜಿಲ್ಲೆಗಳಾದ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಕರಾವಳಿ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪಾತ್ರ ಹಾಗೂ ಪ್ರಕಾರ್ಯಗಳನ್ನು ನಿರ್ಧರಿಸುವುದು ಅವಶ್ಯವೆಂದು ಭಾವಿಸಿ, ಈ ಬಗ್ಗೆ ನಿರ್ಧಾರವನ್ನು ಕೈಗೊಳ್ಳಲು ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಗರಾಭಿವೃದ್ಧಿ ಇಲಾಖೆಯು ಕರಾವಳಿ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಗೆ ಹುದ್ದೆಗಳನ್ನು ಸೃಜಿಸಲು ಹಾಗೂ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಳ್ಳಬೇಕೆಂದು ನಿರ್ಧರಿಸಿ ಆದೇಶವನ್ನು ದಿನಾಂಕ:3.2.2009ರಂದು ಹೊರಡಿಸಿದೆ (ಉಲ್ಲೇಖ2) ದಿನಾಂಕ:3.2.2009ರ ಸದರಿ ಆದೇಶದಲ್ಲಿ ಕರಾವಳಿ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಗೆ ಮತ್ತು ಸದರಿ ಪ್ರಾಧಿಕಾರದ ಕಛೇರಿಗೆ ಹುದ್ದೆಗಳನ್ನು ಸೃಜಿಸಲಾಗಿದೆ. ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಕರಾವಳಿ ಪ್ರದೇಶಾಭಿವೃದ್ಧಿ ಪ್ರಾಧಿಕಾರವನ್ನು ಯೋಜನಾ ಇಲಾಖೆಯ ಆಡಳಿತ ವ್ಯಾಪ್ತಿಗೊಳಪಡಿಸಲು ನಿರ್ಧರಿಸಿ ಪ್ರಸ್ತಾವನೆಯನ್ನು ಸಚಿವ

ಸಂಪುಟದ ಮುಂದೆ ಮಂಡಿಸಲು ನಿರ್ಧರಿಸಲಾಯಿತು., ಪ್ರಾಧಿಕಾರದ ಪಾತ್ರ ಹಾಗೂ ಪ್ರಕಾರ್ಯಗಳ ಬಗ್ಗೆ ಸಚಿವ ಸಂಪುಟದ ಅನುಮೋದನೆಯನ್ನು ಪಡೆಯಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 97 ಯೋವಿವಿ 2008, ಬೆಂಗಳೂರು, ದಿನಾಂಕ: 6ನೇ ಜುಲೈ 2009**

ಕರಾವಳಿ ಪ್ರದೇಶಾಭಿವೃದ್ಧಿ ಪ್ರಾಧಿಕಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಯೋಜನೆ ಇಲಾಖೆಯ ಆಡಳಿತ ವ್ಯಾಪ್ತಿಗೆ ಒಳಪಡಿಸಿ ಈ ಕೆಳಕಂಡಂತೆ ಪ್ರಾಧಿಕಾರದ ಪಾತ್ರ ಹಾಗೂ ಪ್ರಕಾರ್ಯಗಳನ್ನು ನಿಗಧಿಪಡಿಸಿದೆ.

a. ಸಾರ್ವಜನಿಕ–ಖಾಸಗಿ ಪಾಲುದಾರಿಕೆಯೊಂದಿಗೆ ಈ ಕೆಳಕಂಡಂತೆ ಮೂಲಭೂತ ಸೌಲಭ್ಯಗಳ ಯೋಜನೆಗಳನ್ನು ರೂಪಿಸಲು ಸಲಹೆ ಸೂಚನೆಗಳನ್ನು ನೀಡುವುದು

i ಮೇಲುಸೇತುವೆ ರಸ್ತೆ, ಪ್ರವಾಸೋದ್ಯಮ, ಬಂದರು, ಕೈಗಾರಿಕೆ ಮತ್ತು ತಂತ್ರಜ್ಞಾನ ಪಾರ್ಕ್‌ಗಳನ್ನು ಸಾರ್ವಜನಿಕ–ಖಾಸಗಿ ಪಾಲುದಾರಿಕೆಯೊಂದಿಗೆ ಕಾರ್ಯಸಾಧ್ಯವಾದ (Feasible) ಯೋಜನೆಗಳನ್ನು ಗುರುತಿಸುವುದು.

ii ಸಂಬಂಧಿತ ಆಡಳಿತ ಇಲಾಖೆಗಳ ಸಮಾಲೋಚನೆಯೊಂದಿಗೆ ಕೈಗೊಳ್ಳಬಹುದಾದ ಯೋಜನೆಗಳ ವರದಿಗಳನ್ನು ತಯಾರಿಸುವುದು.

iii ಯೋಜನೆಗಳ ಸಂಪೂರ್ಣ ವರದಿಗಳನ್ನು (Detailed Project Reports) ತಯಾರಿಸಲು ಅನುವು ಮಾಡುವುದು.

b. ತಾಂತ್ರಿಕ–ಆರ್ಥಿಕ ಚಟುವಟಿಕೆಗಳಲ್ಲಿನ ಅಭಿವೃದ್ಧಿ ಸಾಮರ್ಥ್ಯವನ್ನು ಗುರುತಿಸುವುದು ಮತ್ತು ಇಂತಹ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಲು ರಾಜ್ಯ ಸರ್ಕಾರಕ್ಕೆ ಸಲಹೆಗಳನ್ನು ನೀಡುವುದು.

c. ಕರಾವಳಿ ವಲಯಗಳನ್ನು ಸಂರಕ್ಷಿಸಲು ಮತ್ತು ಅಭಿವೃದ್ಧಿಗೊಳಿಸಲು ದೀರ್ಘಾವಧಿ ಮತ್ತು ಅಲ್ಪಾವಧಿ ಯೋಜನೆಗಳನ್ನು ರೂಪಿಸುವುದು.

d. ವಿವಿಧ ಕರಾವಳಿ ವಲಯಗಳ ಸಂರಕ್ಷಣೆ ಮತ್ತು ಅಭಿವೃದ್ಧಿಗೆ ಯೋಜನೆಗಳನ್ನು ಗುರುತಿಸಿ ಇಂತಹ ಕಾಮಗಾರಿಗಳನ್ನು ರಾಜ್ಯ ಯೋಜನೆಯಡಿ ಅಳವಡಿಸಲು ಶಿಫಾರಸ್ಸು ಮಾಡುವುದು.

e. ಕರಾವಳಿ ಸಂರಕ್ಷಣೆ ಹಾಗೂ ಅಭಿವೃದ್ಧಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಸಮಯಧಾರಿತ ಉಸ್ತುವಾರಿ ನಡೆಸಲು ಕ್ರಮ ಕೈಗೊಳ್ಳುವುದು.

(2) 2009–10ನೇ ಸಾಲಿನ ಆಯವ್ಯಯದಲ್ಲಿ ರೂ. 2.00ಕೋಟಿಗಳನ್ನು ಒದಗಿಸಲಾಗುವುದು ಹಾಗೂ ಪ್ರಾಧಿಕಾರವು ಕೈಗೊಳ್ಳುವ ಚಟುವಟಿಕೆಗಳ ಆಧಾರದ ಮೇಲೆ ಅನುದಾನವನ್ನು ಹೆಚ್ಚಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1735 **ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ (1 & 2),

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಕಸಂವಾಪ್ರ 8 ಕೆಒಎಲ್ 2009, ಬೆಂಗಳೂರು, ದಿನಾಂಕ: 10ನೇ ಜುಲೈ 2009**

ಕರ್ನಾಟಕ ಸರ್ಕಾರವು ದಿನಾಂಕ:1.1.2009ರಿಂದ ಜಾರಿಗೆ ಬರುವಂತೆ, 2009ನೇ ವರ್ಷವನ್ನು **"ಕನ್ನಡ ಅನುಷ್ಠಾನ ವರ್ಷ 2009"** ಎಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1736 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಮೂಲ ಅಭಿವೃದ್ಧಿ ಸೌಲಭ್ಯ ಯೋಜನೆಗಳಿಗಾಗಿ ಐಡೆಕ್ ಸಂಸ್ಥೆಗೆ ಒದಗಿಸಿರುವ ಪ್ರಾಜೆಕ್ಟ್ ಅಭಿವೃದ್ಧಿ ನಿಧಿಗೆ (PDF) ಹಣ ಒದಗಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಆರ್ಥಿಕ ಅಧಿಕಾರಿ ಹಾಗೂ ಕಂಪನಿ ಕಾರ್ಯದರ್ಶಿ, ಐಡೆಕ್, ಇವರ ಪತ್ರ ಸಂ iDeCK/09-01/513, ದಿನಾಂಕ:2.7.09

**ಪ್ರಸ್ತಾವನೆ:**

ಖಾಸಗಿ ಬಂಡವಾಳ ಹೂಡಿಕೆಯನ್ನು ಉತ್ತೇಜಿಸಲು ಹಾಗೂ ಪಿಪಿಪಿ ಆಧಾರದ ಮೇಲೆ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಐಡೆಕ್‌ನ್ನು ರಾಜ್ಯ ಸರ್ಕಾರದ ನೋಡಲ್ ಏಜೆನ್ಸಿಯಾಗಿ ನೇಮಿಸಿದೆ. ಇದರಂತೆ ಯೋಜನಾ ಅಭಿವೃದ್ಧಿಗೆ ಬಂಡವಾಳ ಹಾಗೂ ಯೋಜನಾ ಬಂಡವಾಳ ಹೂಡಿಕೆಗೆ ರಾಜ್ಯ ಸರ್ಕಾರವು ಐಡೆಕ್‌ಗೆ ಹಣ ಒದಗಿಸಲು ಬದ್ಧವಾಗಿದೆ. ಐಡೆಕ್‌ನ ಒಟ್ಟಾರೆ ಬಂಡವಾಳ ಹೂಡಿಕೆಯಲ್ಲಿ ರಾಜ್ಯ ಸರ್ಕಾರದ ಪಾಲು ಶೇಕಡಾ 49ರಷ್ಟಿದೆ. ಕರ್ನಾಟಕ ರಾಜ್ಯದ ಮೂಲ ಸೌಲಭ್ಯ ಯೋಜನೆಗಳನ್ನು ಅಭಿವೃದ್ಧಿ ಪಡಿಸಲು ಯೋಜನಾ ಅಬಿವೃದ್ಧಿ ನಿಧಿ (ಪಿ.ಡಿ.ಎಫ್)ಗಾಗಿ ಲೆ.ಶೀ. 5465–01–190–1–01–211ರಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ರೂ. 200.00 ಲಕ್ಷಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ ದಿನಾಂಕ:2.7.09ರ ಪತ್ರದಲ್ಲಿ CFO ಮತ್ತು ಕಂಪನಿ ಕಾರ್ಯದರ್ಶಿ ಐಡೆಕ್ ಇವರು ಐಡೆಕ್ ನ ಪಿಡಿಎಫ್ ಯಡಿಯಲ್ಲಿ ಒದಗಿಸಿರುವ ರೂ., 200.00 ಲಕ್ಷಗಳನ್ನು ಎಂಪಿಕ್ ಅನುಷ್ಠಾನದ ಕ್ಯಾಲೆಂಡರ್ 2009–10ರಡಿಯಲ್ಲಿ ಪ್ರಸ್ತಾಪಿಸಿರುವ 5 ಯೋಜನೆಗಳಾದ ಸಾರಿಗೆ, SWM, Water ಮತ್ತು Waste Water treatment Tourism ಗಳನ್ನು ಅನುಷ್ಠಾನಗೊಳಿಸಲು ನಿಗಧಿಪಡಿಸಿರುವ ಕಾರ್ಯಕ್ರಮಗಳಿಗೆ ಬಿಡುಗಡೆ ಮಾಡಲು ಕೋರಿದ್ದಾರೆ, ಐಡೆಕ್‌ನ ಈಗಿನ ಅಗತ್ಯವನ್ನು ಗಮನದಲ್ಲಿರಿಸಿಕೊಂಡು ಈ ಸಾಲಿನಲ್ಲಿ ಒದಗಣೆ ಮಾಡಿರುವ ರೂ. 200.00 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತಾಪಿಸಲಾಗಿದೆ.

3. ಮೇಲಿನ ಅಂಶಗಳನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 57 ಮೂಇವಿ 2009, ಬೆಂಗಳೂರು, ದಿನಾಂಕ: 8ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಎಂಪಿಕ್ ಕ್ಯಾಲೆಂಡರ್ 2009–10ರಲ್ಲಿ ಗುರುತಿಸಲಾದ 5 ಯೋಜನೆಗಳು ಅಂದರೆ ಸಾರಿಗೆ, SWM, Water and Waste Water treatment and Tourism ಗಳ ಕುರಿತಂತೆ ನಿಗಧಿಪಡಿಸಲಾದ ಕಾರ್ಯಕ್ರಮಗಳ ಅಭಿವೃದ್ಧಿ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ರೂ. 200.00 ಲಕ್ಷಗಳನ್ನು ಐಡೆಕ್‌ನ PDF ಹಾಗೂ PIF ಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "5465–01–190–1–01–211" ಐಡೆಕ್ ಬಂಡವಾಳ ಇದರಡಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಣೆ ಮಾಡಿರುವ ರೂ. 200.00 ಲಕ್ಷಗಳಿಂದ ಭರಿಸತಕ್ಕದ್ದು.

3. ಸದರಿ ಮೊತ್ತವನ್ನು ಚೀಫ್ ಫೈನಾನ್ಸಿಯಲ್ ಆಫೀಸರ್ ಮತ್ತು ಕಂಪನಿ ಕಾರ್ಯದರ್ಶಿ, ಐಡೆಕ್ ಇವರು ಪೇಯಿಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು, ಇಲ್ಲಿ ತೆಗೆಯಲು ಅನುಮತಿಸಿದೆ.

4. ಈ ಆದೇಶವನ್ನು ದಿನಾಂಕ:16.5.2008ರ ಆದೇಶ ಸಂ. FD 01 TFP 2008 ರಡಿಯಲ್ಲಿ ನೀಡಿರುವ ಆರ್ಥಿಕ ಅಧಿಕಾರ ಪ್ರತ್ಯಾ ಯೋಜನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ವೇಣುಗೋಪಾಲ್**

ಪಿ.ಆರ್. 1739

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** 3ನೇ ಹಣಕಾಸು ಆಯೋಗದ ವರದಿಯ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸಲು ಕಾರ್ಯಪಡೆಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಮಾನ್ಯ ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ:ಪಿಎಸ್.ಸಿಎಂ/1985/2009, ದಿನಾಂಕ:11.6.2009.

**ಪ್ರಸ್ತಾವನೆ:**

ಶ್ರೀ ಎ.ಜಿ. ಕೊಡ್ಗಿ ರವರ ನೇತೃತ್ವದಲ್ಲಿ ರಚಿಸಿದ್ದ 3ನೇ ಹಣಕಾಸು ಆಯೋಗವು ಪಂಚಾಯತ್‌ರಾಜ್ ಮತ್ತು ಇತರ ಸ್ಥಳೀಯ ಸಂಸ್ಥೆಗಳ ಆರ್ಥಿಕ ವ್ಯವಸ್ಥೆ ಮತ್ತು ಆಡಳಿತದ ಬಗ್ಗೆ ಸಮಗ್ರವಾಗಿ ಅಧ್ಯಯನ ಮಾಡಿ ಸದರಿ ಸಂಸ್ಥೆಗಳು ಪರಿಣಾಮಕಾರಿಯಾಗಿ ಕೆಲಸ ಮಾಡಲು ಪೂರಕವಾಗುವಂತೆ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಪಂಚಾಯತ್ ರಾಜ್ ಮತ್ತಿತರ ಸಂಸ್ಥೆಗಳನ್ನು ಬಲಪಡಿಸಿ, ಅವುಗಳು ಸರ್ಕಾರದ ವಿವಿಧ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುತ್ತದೆ. ಕಾರಣ ಈ ದಿಸೆಯಲ್ಲಿ 3ನೇ ಹಣಕಾಸು ಆಯೋಗ ನೀಡಿರುವ ವರದಿಯನ್ನು ಅನುಷ್ಠಾನಕ್ಕೆ ತರುವುದು ಅಷ್ಟೇ ಅವಶ್ಯಕವಾಗಿರುತ್ತದೆ.

3ನೇ ಹಣಕಾಸು ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರುಗಳು ಸದರಿ ಆಯೋಗದ ಜವಾಬ್ದಾರಿಯನ್ನು ಅತ್ಯಂತ ಸಮರ್ಪಕವಾಗಿ ನಿರ್ವಹಿಸಿರುತ್ತಾರೆ. 3ನೇ ಹಣಕಾಸು ಆಯೋಗದ ವರದಿಯನ್ನು ಸಮರ್ಪಕವಾಗಿ ಜಾರಿಗೆ ತರಬೇಕಾಗಿದೆ. ಈ

ವರದಿಯನ್ನು ಅನುಷ್ಠಾನಗೊಳಿಸುವ ಸಂಬಂಧ ಶಿಫಾರಸ್ಸು ನೀಡಲು ಒಂದು ಕಾರ್ಯಪಡೆಯನ್ನು ರಚಿಸುವುದು ಸೂಕ್ತವೆಂದು ಕಂಡುಬರುತ್ತದೆ.

ಮಾನ್ಯ ಮುಖ್ಯಮಂತ್ರಿಯವರು ಮೇಲೆ ಓದಲಾದ ದಿನಾಂಕ:11.6.2009ರ ಟಿಪ್ಪಣಿಯಲ್ಲಿ 3ನೇ ಹಣಕಾಸು ಆಯೋಗದ ವರದಿಯನ್ನು ಅನುಷ್ಠಾನಗೊಳಿಸಲು ಕಾರ್ಯಪಡೆಯನ್ನು ಈ ಕೆಳಗಿನಂತೆ ರಚಿಸಲು ಆದೇಶಿಸಿರುತ್ತಾರೆ.

| | | |
|---|---|---|
| 1. | ಶ್ರೀ ಎ.ಜಿ. ಕೊಡ್ಗಿ | ಅಧ್ಯಕ್ಷರು |
| 2. | ಡಾ: ಮಹೇಂದ್ರ ಎಸ್. ಕಂಠಿ | ಸದಸ್ಯರು |
| 3. | ಟಿ. ತಿಮ್ಮೇಗೌಡ | ಸದಸ್ಯರು |
| 4. | ಸರ್ಕಾರದ ಕಾರ್ಯದರ್ಶಿ( ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯ ಕಾರ್ಯದರ್ಶಿ |

ಮೇಲೆ ವಿವರಿಸಿರುವಂತೆ ಕಾರ್ಯಪಡೆಯನ್ನು ರಚಿಸಲು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 72 ಶಿಸನೇ 2009, ಬೆಂಗಳೂರು, ದಿನಾಂಕ: 3ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 3ನೇ ಹಣಕಾಸು ಆಯೋಗದ ವರದಿಯನ್ನು ಅನುಷ್ಠಾನಗೊಳಿಸಲು ಕೆಳಕಂಡಂತೆ ಕಾರ್ಯಪಡೆಯನ್ನು ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಎ.ಜಿ. ಕೊಡ್ಗಿ | ಅಧ್ಯಕ್ಷರು |
| 2. | ಡಾ: ಮಹೇಂದ್ರ ಎಸ್. ಕಂಠಿ | ಸದಸ್ಯರು |
| 3. | ಟಿ. ತಿಮ್ಮೇಗೌಡ | ಸದಸ್ಯರು |
| 4. | ಸರ್ಕಾರದ ಕಾರ್ಯದರ್ಶಿ( ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 1740

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಇಂಧನ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಎನ್ 13 ಇಇಬಿ 2009, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2009.**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 13 ಇಇಬಿ 2009 ದಿನಾಂಕ: 23.3.2009 ರ ಆದೇಶ ಭಾಗದ ಕಂಡಿಕೆ 1 ರಲ್ಲಿ **"ತಕ್ಷಣದಿಂದ** ಜಾರಿಗೆ ಬರುವಂತೆ**"** ಎಂಬುದರ ಬದಲಾಗಿ **"ನವೆಂಬರ್ 2008 ರಿಂದ ಪೂರ್ವಾನ್ವಯವಾಗಿ** ಜಾರಿಗೆ ಬರುವಂತೆ**"** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1520

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಕಾರ್ಪೊರೇಟ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಾಸಲ್‌ರಾಕ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಾಸಲ್‌ರಾಕ್/2007/2235 ದಿನಾಂಕ:01/03.10.2007.
2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಕಾರ್ಪೊರೇಟ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಜೊಯಿಡಾ ತಾಲ್ಲೂಕಿನ ಕಾಸಲ್‌ರಾಕ್ ಬಳಿ ದೂಧ್‌ಸಾಗರ್ ತೊರೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಾಸಲ್‌ರಾಕ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 382 ಎನ್‌ಸಿಇ 2007, ಬೆಂಗಳೂರು, ದಿನಾಂಕ: 1ನೇ ಜೂನ್ 2009**

ಮೆ:: ಕಾರ್ಪೊರೇಟ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಜೊಯಿಡಾ ತಾಲ್ಲೂಕಿನ ಕಾಸಲ್‌ರಾಕ್ ಬಳಿ ದೂಧ್‌ಸಾಗರ್ ತೊರೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಾಸಲ್‌ರಾಕ್ ಕಿರು ಜಲ ವಿದ್ಯುತ್ ಯೋಜನೆಯನ್ನು (**Latitude:** 15°23'49" N Weir, 15°22'57" N PH, **Longitude**: 74°19'06" E Weir, 74°18'32" E PH) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1521 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 6.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 39 ಎನ್‌ಸಿಇ 97 (1) ದಿನಾಂಕ: 20.10.1997.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 455 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ಚಿಕ್ಕೋಡಿಯಲ್ಲಿ 6.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 4 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 11 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 11 ವರ್ಷ ಕಳೆದರೂ ಇದುವರೆಗೂ ಅನುಷ್ಠಾನದ ನಿಟ್ಟಿನಲ್ಲಿ ಮೆ:: ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸನ್ನು ಅಭಿವೃದ್ಧಿದಾರರು ದಿನಾಂಕ : 30.12.2008 ರಂದು ಸ್ವೀಕರಿಸಿರುವುದಕ್ಕೆ ಸ್ವೀಕೃತಿಯು ಇಂಧನ ಇಲಾಖೆಗೆ ಬಂದಿರುತ್ತದೆ. ಸದರಿ ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧಿದಾರರಿಂದ ಯಾವುದೇ ಉತ್ತರ ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಇದರಿಂದ ಅಭಿವೃದ್ಧಿದಾರರಿಗೆ ಸದರಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 455 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 39 ಎನ್‌ಸಿಇ 97 (1) ದಿನಾಂಕ:20.10.1997 ರಲ್ಲಿ ಮೆ:: ರಿನೆವೆಬಲ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ಚಿಕ್ಕೋಡಿಯಲ್ಲಿ 6.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1522 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಗದಗ ವಿಂಡ್ ಫಾರ್ಮ್ಸ್ ಸೊಸೈಟಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಜಿಡಬ್ಲ್ಯುಎಫ್ಎಸ್/2008/504 ದಿನಾಂಕ: 27/28.03.2008.

2. ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಗದಗ ವಿಂಡ್ ಫಾರ್ಮ್ಸ್ ಸೊಸೈಟಿಗೆ ಗದಗ್ ಜಿಲ್ಲೆಯಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಇಡಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ : –

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 414 ಎನ್‌ಸಿಇ 2008, ಬೆಂಗಳೂರು, ದಿನಾಂಕ: 12ನೇ ಜೂನ್ 2009**

ಮೆ:: ಗದಗ ವಿಂಡ್ ಫಾರ್ಮ್ಸ್ ಸೊಸೈಟಿಗೆ ಗದಗ್ ಜಿಲ್ಲೆಯಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ : –

| Proposed capacity in MW | Near by villages of the proposed area and district. | Geographical area description of the project |
|---|---|---|
| (3) | (4) | (5) |
| 10 MW<br>(44 x 225KW) | Magadi, Gojnur, Haldapur, Basapura, Khanapur, Hari, Holapura, Sitalahari **Gadag District.** | The proposed area of the project covers in 2 topo sheets (48M/11 and 48M/12) and situated between Sirhatti and Mulagund. It is a plain terrain & consists of boulders and water bodies. Further, it has presence of power lines, telephone lines and district highways runs between Mulgund and Magadi. And the area appears to have completely agriculture activity and there are no significant peaks. However, the general elevation of the area varies from 660 to 680 meter and is held in the following Geographical co-ordinates:<br>**Latitude:** 15°11'20"- 15°15'58" N<br>**Longitude:** 75°30'00"- 75°32'6" E<br>**Ridge peaks:** 631, 647, 661, 660, 701m Amsl. |

1 ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ. 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3 ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು

ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4 ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5 ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6 ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7 ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8 ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9 ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

10 ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11 ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

12 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1523

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಎಸ್.ಬಿ. ಓದುನವರ್ ಅಂಡ್ ಬ್ರದರ್ಸ್ ಕಂಪನಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್.ಬಿ.ಓ&ಬಿ/2008/501 ದಿನಾಂಕ:25/28.03.2008.

2. ದಿನಾಂಕ: 13.01.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

